ಶ್ರೀ ಗುರುಮಲ್ಲೇಶ್ವರ ಗ್ರಂಥ ರತ್ನಮಾಲಾ—೬

**ನಂಜುಂಡದೇವ ಕವಿ ಕೃತ**

# ಭೈರವೇಶ್ವರ ಕಾವ್ಯ

ಸಂಪಾದಕರು

**ಶ್ರೀ ಶಿವಬಸವಸ್ವಾಮಿಗಳು**



ಶಿವಶರಣ ವಾಙ್ಮಯ ಪ್ರಕಾಶ
ಕಾರ್ಯಾಲಯ
ಮೈಸೂರು
೧೯೫೪



ಶ್ರೀ ಗುರು ಭಿಕ್ಷದ ರಾಚಪ್ಪ ಮಹಾಸ್ವಾಮಿಯವರು

ದೇವನೂರು ಮಠ.



ಸ್ವಲೀಲಾ ಮಹಾತ್ಮ ಶ್ರೀ ಗುರುಮಲ್ಲ ಮಹಾಸ್ವಾಮಿಯವರು
ದೇವನೂರು ಮಠ

# ಸಮರ್ಪಣ



ಬಸವ ನಾಮಾಮೃತವೆ ಸದಾ ಪಾನವಾಗುಳ್ಳವರೂ

ಷಟ್ಸ್ಥಲ ಬ್ರಹ್ಮಿಗಳೂ, ಉರುತರದ ಪರತರರೂ

ಸಾಕ್ಷಾತ್ಕಾರ ಶಿವಾತ್ಮನಮಾಗಿದ ಮಹಾ ಕರುಣೆಗಳೂ

ಗುರು ಲಿಂಗ ಜಂಗಮದ ಭೃತ್ಯರ ಭೃತ್ಯರೂ

ಕಾರಣ ಪುರುಷರೂ ಮಹಾ ಮಹಿಮರೂ ಆದ

**ಶ್ರೀ. ಶ್ರೀ. ಗುರುಮಲ್ಲ ಮಹಾಸ್ವಾಮಿಯವರ**

ಸ್ಮಾರಕವಾಗಿ ಅವರ ಪಾದಾರವಿಂದಕ್ಕೆ

ಈ ಭೈರವೇಶ್ವರ ಕಾವ್ಯವನ್ನು

ಭಕ್ತಿಯ ಮುಡಿಪಾಗಿ

**ಅರ್ಪಿಸಿದೆ**

ಸಂಪಾದಕರು

ಪೇನಸೂರು ಮಠ



ಶ್ರೀ. ಶ್ರೀ. ಭಿಕ್ಷದ ರಾಚಪ್ಪಸ್ವಾಮಿಯವ-
ಕಟ್ಣವಾಡಿ ಮಠ.

# ಕೃತಜ್ಞತೆ

ಈ ಭೈರವೇಶ್ವರ ಕಾವ್ಯದ ಎಲ್ಲಾ ಖರ್ಚುಗಳನ್ನು
ವಹಿಸಿಕೊಂಡು ಪ್ರಕಾಶಪಡಿಸಿದ
ನಮ್ಮ ದೇವನೂರು ಮಠದ ಶಾಖಾ,
ಕಟ್ಟಿವಾಡಿ ದಾಸೋಹ ಮಠದ ಉದಾರಿಗಳೂ
ಭಕ್ತ ಮಾಹೇಶ್ವರರನ್ನು ಸದಾ
ಸಮ ಭಾವನೆಯಿಂದ ಭಾವಿಸುವವರೂ ಆದ

**ಶ್ರೀ ರಾಚಪ್ಪಸ್ವಾಮಿಯವರಿಗೆ**

ನಾವು ತುಂಬ ಆಭಾರಿಯಾಗಿದ್ದೇವೆ.

ಇವರಂತೆ ಎಲ್ಲಾ ಭಕ್ತ ಮಾಹೇಶ್ವರರು ಮುಂದೆ ಬಂದು
ಇಂಥ ವೀರಶೈವ ಪ್ರಾಚೀನ ಸಾಹಿತ್ಯದ ಬೆಳವಣಿಗೆಗೆ
ಭಾಗಿಗಳಾಗಬೇಕೆಂದು ಬಯಸುತ್ತೇವೆ

**ಸಂಪಾದಕರು :**

# ಪ್ರಕಾಶಕರ ಪ್ರಥಮೋಕ್ತಿ

ದೇವನೂರು ಮಠದ ಶ್ರೀ ಗುರುಮಲ್ಲೇಶ್ವರ ಗ್ರಂಥ ರತ್ನಮಾಲೆಯಲ್ಲಿ ಈ ಭೈರವೇಶ್ವರ ಕಾವ್ಯವು ಆರನೆಯದು. ಈ ಗ್ರಂಥದ ಅವಶ್ಯಕವನ್ನು ಪ್ರಸ್ತಾವನೆಯಲ್ಲಿ ನೋಡಿ ತಿಳಿಯುವುದು ಈ ಗ್ರಂಥವು ಇದೇ ಮೊದಲನೆಯ ಮುದ್ರಣ. ನಮ್ಮ ಪ್ರಥಮ ಪ್ರಕಟಣೆಗಳಿಗೆ ಸಮಾಜ ಪ್ರೋತ್ಸಾಹವಿತ್ತಂತೆ ಈ ಗ್ರಂಥಕ್ಕೂ ಉತ್ತೇಜನ ದೊರೆಯುವುದೆಂದು ನಂಬಿದ್ದೇವೆ.

ಮೊದಲಮಾತು ಮುನ್ನುಡಿ ಇವುಗಳ ಸ್ವರೂಪ ಹೊಗಳುವುದೊಂದೇ ಅದರ ಕೆಲಸ ಎಂದು ಕೆಲವರು ಭಾವಿಸಿದ್ದಾರೆ ಅದು ಹಾಗಲ್ಲ, ವೀರಶೈವ ಸಾಹಿತ್ಯವು, ಆ ಸಮಾಜದ ಪ್ರತಿಯೊಬ್ಬ ಮಾನವನಿಗೂ ಅವಶ್ಯಕವೂ, ಅಭಿಮಾನವೂ ಇರುವ ಕಾರಣ ಯಾರನ್ನು ಯಾರೂ ಹೊಗಳಬೇಕಾಗಿಲ್ಲ ಅಂಥ ಸ್ತೋತ್ರಾಭಿಮಾನಕ್ಕೆ ಒಳಗಾದವರು ಸ್ವಾರ್ಥಗಳೃರೆಂದೇ ಭಾವಿಸಬೇಕು ಸಾಹಿತ್ಯ ಪ್ರಕಟಣಾ ಕೆಲಸ ನಮ್ಮೆಲ್ಲರಿಗೂ ಸೇರಿದುದು, ನೆರವಾಗಿ ಎಂದು ಕೇಳುವುದು ಸ್ವಾರ್ಥವಲ್ಲ ನೆರವಾದವರನ್ನು ನೆನಹಿಗೆ ತರುವುದು ಸ್ತೋತ್ರವಲ್ಲ.

ಈ ಗ್ರಂಥ ಶೋಧನೆಗೆ ತಾಡಾ ಓಲೆ ಪ್ರತಿಗಳನ್ನು ನಮ್ಮ ಕೋರಿಕೆ ಮೇರೆಗೆ ಕಳುಹಿಸಿದ ಉದಾರಿಗಳಿಗೆ ನಾವು ಉಪಕೃತರಾಗಿದ್ದೇವೆ. ನಮ್ಮ ಅಪೇಕ್ಷೆಯ ಮೇರೆಗೆ ಎಲ್ಲಾ ಪ್ರಾಚೀನ ಪ್ರತಿಗಳನ್ನು ಓದುವುದಕ್ಕೂ ಬರೆಯುವುದಕ್ಕೂ ತುಂಬ ಸಹಾಯಕರಾದ ನಮ್ಮ ದೇವನೂರು ಮಠದ **ಶ್ರೀ ಬಸಪ್ಪದೇವರ** ಉಪಕಾರವನ್ನು ಸ್ಮರಿಸುತ್ತೇವೆ. ನಮ್ಮ ಬಯಕೆಯಂತೆ ಈ ಗ್ರಂಥ-ಪರಿಶೀಲನೆ ಮಾಡಿ ಮುನ್ನುಡಿ ಬರೆದು ಕಳುಹಿಸಿದ ಮೈಸೂರು ಹೈಕೋರ್ಟಿನ ನಿವೃತ್ತ ಶ್ರೇಷ್ಠ ನ್ಯಾಯಾಧೀಶರಾದ **ಜಿ. ಪರಮ ಶಿವಯ್ಯನವರಿಗೆ** ಬಸವಾದಿ ಪ್ರಮಥರ ಕೃಪೆಯುಂಟಾಗಲೆಂದು ಹಾರೈಸುವೆವು

ದೇವನೂರು ಮಠ
೨೫-೩-೧೯೫೪

ಪ್ರಕಾಶಕರು .
**ಶ್ರೀ ಶಿವಬಸವಸ್ವಾಮಿಗಳು**

# ಮುನ್ನುಡಿ

ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯದ ಕರ್ತರೂ ಮತ್ತು ಸಂಪಾದಕರೂ ಆದ ಶ್ರೀ. ಶ್ರೀ ಶಿವಬಸವಸ್ವಾಮಿಗಳು ಭೈರವೇಶ್ವರ ಕಾವ್ಯಕ್ಕೆ ಮುನ್ನುಡಿಯನ್ನು ಬರೆಯಲು ಆಜ್ಞೆಯಿತ್ತಮೇರೆಗೆ ನನಗೆ ಅಭಿಮಾನವೂ ಆಸಕ್ತಿಯೂ ಉಂಟಾಯಿತು

ಶ್ರೀಗಳವರು ಮೊದಲು ಶರಣ ಲೀಲಾಮೃತವೆ ಮೊದಲಾದ ಗ್ರಂಥಗಳ ಶೋಧನೆ ನಡೆಸಿ ಪ್ರಕಾಶಕ್ಕೆ ತಂದು ಮಹದುಪಕಾರಮಾಡಿರುವುದು ಎಲ್ಲರಿಗೂ ವಿಧಿತವೇ ಆಗಿದೆ. ಅವುಗಳಂತೆ ಈ ಭೈರವೇಶ್ವರ ಕಾವ್ಯವು ಪ್ರಕಾಶಕ್ಕೆ ಬಂದುದಕ್ಕಾಗಿ ಶ್ರೀಗಳವರಿಗೆ ಸಾಹಿತ್ಯ ಪ್ರೇಮಿಗಳು ಚಿರ ಋಣಿಗಳೆಂದೇ ಹೇಳಬೇಕು ಶ್ರೀಗಳವರು ಈ ಸ್ತುತ್ಯ ಕಾರ್ಯ ಕೈಗೊಂಡು ಸ್ವಾರ್ಥಾಭಿಲಾಸೆ ಇಲ್ಲದೆ ಶಿವಶರಣ ಸಾಹಿತ್ಯ ಸೇವೆಗಾಗಿ ದುಡಿಯುತ್ತಿರುವುದು ಮಠಾಧಿಕಾರಿಗಳಿಗೆ ಮೇಲ್ಪಂಕ್ತಿ ತೋರಿಸುವ ಮಾರ್ಗವೆಂದು ತಿಳಿಯಬೇಕು ಇದು ಶ್ರೀಗಳವರ ಸ್ತೋತ್ರದ ಗುರಿಯಾಗಿ ಹೇಳುವ ಮಾತಲ್ಲ. ವೀರಶೈವ ಪ್ರಾಚೀನ ಸಾಹಿತ್ಯದ ಕಡೆ-ಶೋಧನಾ ಕರ್ತೃಗಳಾದ ಜಂಗಮರೂ ಗುರುಗಳೂ ಮುಖ್ಯ ಪಾತ್ರ ವಹಿಸುವುದು, ವೀರಶೈವ ಜ್ಞಾನಾಭಿವೃದ್ಧಿಯ ಭಾಗ್ಯೋದಯವೆಂದು ಭಾವಿಸಿದ್ದೇನೆ.

ನಂಜುಂಡದೇವನು ಈ ಗ್ರಂಥದ ಮಹತ್ವವನ್ನು ಮಂಗಲಾಚರಣೆಯಲ್ಲಿ ಹೀಗೆ ಹೇಳಿದ್ದಾನೆ.

ಭಕ್ತಿಯ ತಾಣ ಸ | ನ್ಮುಕ್ತಿಯ ಸದನ ವಿ |
ಶಕ್ತಿಯ ಸೀಮೆ ಮೋಹನದಾ ||
ಸೂಕ್ತಿಯ ಸಿರಿ ಸರ | ಸೋಕ್ತಿಯ ನೆಲೆಯಾಗಿ |
ವ್ಯಕ್ತವಾಗಿಪ್ಪುದೀ ಕಾವ್ಯ || ೧೭ ||

ಈ ಗ್ರಂಥವೆ ಈ ಪದ್ಯದ ಸೂತ್ರ ಒಂದರಲ್ಲಿ ಅಡಕವಾಗಿ ಹೋಗಿದೆ ಕವಿಯು ಆಂದ್ರದೇಶದ ಮೋಪೂರಿನ ರಾಜನಾದ ಭೈರವರಾಜನ ಮಹತ್ವದ

ವಿಷಯವಾಗಿ ಹೇಳಿರುವುದಲ್ಲದೆ, ಹರಿಶ್ಚಂದ್ರನೇ ಮೊದಲಾದ ರಾಜರುಗಳನ್ನೂ, ಸತ್ಯೇಂದ್ರ ಚೋಳನೆ ಮೊದಲಾದ ಚೋಳರುಗಳನ್ನೂ, ಷೋಡಶ, ತೇರಸರೇ ಮೊದಲಾದ ಅನಂತ ಕಲ್ಯಾಣದ ಶಿವಶರಣರ ಮಹತ್ವ ಪರಿಚಯವನ್ನು ಸೂತ್ರರೂಪವಾಗಿ ವರ್ಣಿಸಿದ್ದಾನೆ. ಈ ಗ್ರಂಥದ ಆಧಾರದಮೇಲೆ ಉತ್ತರದೇಶದ ಬಸವಲಿಂಗದೇವನು ಭೈರವೇಶ್ವರ ಕಥಾಸಾಗರ ಮತ್ತು ಬಸವೇಶ್ವರ ಪುರಾಣದ ಕಥಾಸಾಗರ ಎಂಬ ಗ್ರಂಥಗಳನ್ನೂ, ಶಾಂತಲಿಂಗದೇವನು ಭೈರವೇಶ್ವರ ಕಥಾಸೂತ್ರ ರತ್ನಾಕರ ಗ್ರಂಥವನ್ನೂ ಗದ್ಯಗಳಲ್ಲಿ ರಚಿಸಿರುತ್ತಾರೆ ಸಿದ್ಧಲಿಂಗ ಶಿವಯೋಗಿಯು ಭೈರವೇಶ್ವರ ಪುರಾಣವನ್ನು ಚಂಪುಕಾವ್ಯದಲ್ಲಿ ರಚಿಸಿರುತ್ತಾನೆ. ಹೀಗೆ ರಚಿತವಾಗಿರುವ ಗ್ರಂಥಗಳಲ್ಲಿ ನಂಜುಂಡದೇವನ ಭೈರವೇಶ್ವರ ಕಾವ್ಯವೇ ತಳಹದಿಯಾಗಿಯೂ ಮೊದಲನೆಯದಾಗಿಯೂ ಪರಿಗಣಿಸಲ್ಪಟ್ಟಿದೆ ಈ ಕಾವ್ಯವು ಇದುವರಿಗೆ ಮುದ್ರಣವಾಗಿರಲಿಲ್ಲ. ಹತ್ತು ತಾಡಾ ಓಲೆ ಪ್ರತಿಗಳ ಸಹಾಯದಿಂದ ಶೋಧಿಸಿ ಪಾಠಾಂತರದೊಡನೆ ಒಳ್ಳೇ ಪೇಪರಮೇಲೆ ಅಂದವಾಗಿ ಮುದ್ರಣವಾಗಿದೆ. ಇಂಥ ಗ್ರಂಥಗಳ ಪ್ರಕಟಣೆಯಿಂದ ವೀರಶೈವಸಾಹಿತ್ಯ ಸಂಸ್ಕೃತಿ ಇತಿಹಾಸ ಪ್ರಸಾರಕ್ಕೆ ಬಹಳ ಸಹಾಯವಾಗುವುದಾದ ಕಾರಣ ಸಮಾಜ ಬಾಂಧವರು ಶ್ರೀ ಶ್ರೀ ಶಿವಬಸವಸ್ವಾಮಿಗಳವರಿಗೆ ಹೆಚ್ಚಾಗಿ ಉತ್ತೇಜನಕೊಟ್ಟು ಮುದ್ರಣವಾಗದೆ–ಇವರಿಂದ ಶೋಧನೆಯಾಗಿ ಉಳಿದಿರುವ ಅನೇಕ ಗ್ರಂಥಗಳ ಪ್ರಕಾಶಕ್ಕೆ ಬೆಂಬಲರಾಗುವರೆಂದು ನಂಬಿರುತ್ತೇನೆ

ಕಲ್ಯಾಣ ಕುಟೀರ
ಕುಮಾರ ಪಾರ್ಕ್, ಬೆಂಗಳೂರು ೧
೧೮ ೩ ೧೯೫೪

**ಜಿ. ಪರಮಶಿವಯ್ಯ**



## ಭೈರವೇಶ್ವರ ಕಾವ್ಯದ

# ಶುದ್ಧತೆಯ ತಾಳೆಪತ್ರದ ಪ್ರತಿಗಳು

ಅ— ಇದು ಮೈಸೂರು ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿ ದೊರೆತದ್ದು. ವಿಕ್ರಮ ಸಂವತ್ಸರದ ಮಾಘ ಶುದ್ಧ ಒಂದರಲ್ಲಿ ಬರೆದು ಮುಗಿಯಿತು ಎಂದು ಓಲೆಯಲ್ಲಿ ಇದೆ. ಕೆ ನಂ. ೩೩೩.

ಇ— ಇದು, ಮೈ. ಗೌ ಓ ದೊ ಓಲೆ ಅಂತ್ಯದಲ್ಲಿ ವಿಶ್ವಾವಸು ಸಂವತ್ಸರದ ಚೈತ್ರ ಶುದ್ಧ ಹತ್ತರಲ್ಲು ಬರೆದು ಮುಗಿಯಿತು ಎಂದು ಇದೆ. ಕೆ ನಂ. ೩೩೧.

ಉ— ಇದು, ಮೈ ಗೌ. ಓ ದೊ ಈ ಓಲೆಯಲ್ಲಿ ರುಧಿರೋದ್ಗಾರಿ ಸಂವತ್ಸರದ ಆಶ್ವೀಜ ಶುದ್ಧ ಬಹುಳ ಚತುರ್ದಶಿಯ ಸೋಮವಾರ ಪ್ರತಿಯಾಯಿತು ಎಂದು ಇದೆ ಕೆ. ನಂ. ೧೮೦.

ಎ— ಇದು, ಮೈ ಗೌ ಓ. ದೊ ಪ್ರಥಮ-ಅಂತ್ಯದಲ್ಲಿ ಬರೆದಕಾಲ ಇರಲಿಲ್ಲ

ಒ— ಇದು, ಮೈ ಗೌ ಓ ದೊ ಕಾಗದದ ಮೇಗಣ ಕೈಬರಹದ ಪ್ರತಿ ಪ್ರಥಮಾಂತ್ಯದಲ್ಲಿ ಬರೆದಕಾಲ ಇರುವುದಿಲ್ಲ. ಕೆ. ಬಿ. ನಂ. ೧೮.

ಕ— ಇದು, ಮೈಸೂರು ಶ್ರೀಯುತ ಎಂ ಡಿ. ಬಸಪ್ಪಶಾಸ್ತ್ರಿಗಳಲ್ಲಿ ದೊರೆತದ್ದು ಓಲೆ ಪ್ರಥಮಾಂತ್ಯದಲ್ಲಿ ಬರೆದಕಾಲ ಇರುವುದಿಲ್ಲ.

ಗ—ಇದು, ಹಾವೇರಿ ಸದ್ಧರ್ಮದೀಪಿಕೆ ಸಂಪಾದಕರಾದ ಶ್ರೀಯುತ ಮಲ್ಲಿಕಾರ್ಜುನ ಇವರಲ್ಲಿ ದೊರೆತದ್ದು ಓಲೆ ಪ್ರಥಮಾಂತ್ಯದಲ್ಲಿ ಕಾಲ ಇರಲಿಲ್ಲ

ಚ— ಇದು, ಹಾ ಸ ಮಲ್ಲಿಕಾರ್ಜುನ ಇವರಲ್ಲಿ ದೊರೆತದ್ದು ಓಲೆ ಪ್ರಥಮಾಂತ್ಯದಲ್ಲಿ ಕಾಲ ಇರುವುದಿಲ್ಲ

ಜ— ಇದು, ಶಿವಶರಣ ವಾಙ್ಮಯ ಪ್ರಕಾಶ ಕಾರ್ಯಾಲಯದಲ್ಲಿ ಇದ್ದುದು. ಓಲೆ ಪ್ರಥಮಾಂತ್ಯದಲ್ಲಿ ಕಾಲ ಇಲ್ಲ

ಟ— ಇದು, ಮೈಸೂರು ಶ್ರೀಮನ್ಮಹಾರಾಜರವರ ಸರಸ್ವತಿ ಭಂಡಾರದಲ್ಲಿ ದೊರೆತದ್ದು ಓಲೆ ಪ್ರಥಮಾಂತ್ಯದಲ್ಲಿ ಕಾಲ ಇರುವುದಿಲ್ಲ

ನಂ. ೧೩೫೭.

# ವಿಷಯಾನುಕ್ರಮಣಿಕೆ



# ಶಿವಶರಣ ನಾಮಾನುಕ್ರಮಣಿಕೆ

ಈ ನಾಮಾನುಕ್ರಮಣಿಕೆಯ ಸಂಖ್ಯೆಯಿಂದ ಕೆಲವು ಶಿವಶರಣರ ಸಂಕ್ಷಿಪ್ತ ಕಥಾಪರಿಚಯವಾಗುವುದಲ್ಲದೆ; ಬರೆ ಹೆಸರುಗಳ ಪರಿಚಯವಾಗುವುದೂ ಉಂಟು. ಈ ಹೆಸರುಗಳನ್ನು ನಾವು ಮುನ್ನೂರ ನಲವತ್ತೆರಡರವರಿವಿಗೆ ಸಂಗ್ರಹಮಾಡಿದ್ದರೂ ಅತ್ಯಲ್ಪವಾಗಿ ಇನ್ನೂ ಉಳಿದಿರುವುದೆಂದು ಭಾವನೆ ಇದೆ.



# ಪ್ರ ಸ್ತಾ ವ ನೆ

## ಕವಿಯ ಕಾಲ, ದೇಶ, ಗ್ರಂಥವಿಮರ್ಶೆ, ಛಂದಸ್ಸು, ಕಥಾಸಾರಾಂಶ ಇತ್ಯಾದಿ.

ಭೈರವೇಶ್ವರ ಕಾವ್ಯವನ್ನು ರಚಿಸಿದ ಕವಿ ನಂಜುಂಡದೇವ[1] ಇವನ ಸ್ಥಲವು ಮೈಸೂರು ಸೀಮೆ ಕೃಷ್ಣರಾಜಪೇಟೆ ತಾಲ್ಲೂಕು ಕಿಕ್ಕೇರಿ. ಇವನು ತನ್ನ ತಾಯಿ ತಂದೆಗಳನ್ನು ಈ ಕೃತಿಯಲ್ಲಿ ಯಾವ ಕಡೆಯೂ ತಿಳಿಸಿರುವುದಿಲ್ಲ. ಈತನು ಈ ಗ್ರಂಥವನ್ನು ಸಾಧಾರಣ ಕ್ರಿ ಶ. (೧೫೫೦) ರಲ್ಲಿ ರಚಿಸಿರಬೇಕೆಂದು ಕರ್ಣಾಟಕ ಕವಿ ಚರಿತೆಕಾರರು ಅಭಿಪ್ರಾಯಪಟ್ಟು ಎರಡನೆಯ ಭಾಗದಲ್ಲಿ ತಿಳಿಸಿರುತ್ತಾರೆ. ಕವಿಯು ತನ್ನ ಗುರುವಿನ ಸಾಂಪ್ರದಾಯವನ್ನು ಈ ಗ್ರಂಥದ ಯಾವ ಕಡೆಯೂ ಹೇಳಿರುವುದಿಲ್ಲ. ಭೈರವರಾಜನ ಇಷ್ಟದೈವವಾದ ಸೋಮನಾಥನೇ ಇವನಿಗು ದೈವವಿರಬೇಕೆಂದು ತೋರುತ್ತದೆ. ಇವನ ಸ್ತುತಿ ಪದ್ಯಗಳು ಸೋಮನಾಥನಲ್ಲದೆ ಮತ್ತಾರನ್ನೂ ಸ್ತುತಿಸಿರುವುದಿಲ್ಲ. ಬಾಣ, ಮಯೂರ, ಗುಜ್ಜರ, ಮಲುಹಣ, ಹರೀಶ, ಪಾಲ್ಕುರಿಕೆ ಸೋಮನಾಥ ಇವರುಗಳನ್ನು ಸ್ತೋತ್ರಮಾಡಿದ್ದಾನೆ.

ಭೈರವೇಶ್ವರನ ಮಹತ್ವವನ್ನು ಪ್ರಕಟಮಾಡು, ನೀನು ಅಂಜಬೇಡ ಎಂದು ಸೋಮನಾಥನು ಸ್ವಪ್ನದಲ್ಲಿ ಹೇಳಿದನೆಂದು (ಸಂ. ೧–ಪ. ೧೫) ರಲ್ಲಿ ತಿಳಿಸಿರುತ್ತಾನೆ. ಭೈರವರಾಜನ ಸಾಂಪ್ರದಾಯ, ಜನನ, ಬಾಲ್ಯ, ಯೌವ್ವನ, ಯುದ್ಧ, ಪರಾಕ್ರಮ, ಮಹತ್ವ ಮುಂತಾದ ವರ್ಣನೆಗಳಿಂದ ಕಾವ್ಯ ವಿಸ್ತಾರ ಗೊಂಡಿಲ್ಲ. ಯಾವ ವಿಷಯ ಪ್ರತಿಪಾದಿಸಿದರೂ ಸ್ವಲ್ಪದಲ್ಲೇ ಹೇಳಿ ಮುಂದುವರಿಸುವುದೇ ಇವನ ಮುಖ್ಯ ಗುರಿಯಾಗಿದೆ. ಮುಂದೆ ಕಥೆ ಬೆಳೆ ಬೆಳೆಯುತ್ತ ಭೈರವರಾಜನನ್ನೇ ಅಧಿಷ್ಠಾನ ಪುರುಷನನ್ನಾಗಿ ಮಾಡಿ ಅವನ

---

1–"ಕುಮಾರರಾಮನ ಸಾಂಗತ್ಯ" ಇದನ್ನು ಬರೆದಿರುವ ಕವಿಯು ನಂಜುಂಡ. ಇವನು ವಿಜಯ ನೃಪಾಲನ ಪುತ್ರನು. ಮತ್ತು ಮಂಗರಸನ ಸಹೋದರನ ಮಗನೆಂದೂ **ಕರ್ಣಾಟಕ ಕವಿ ಚರಿತೆ ಭಾಗ–೨ ರಲ್ಲಿ ರಚಿತವಾಗಿದೆ. ಇವನ ಕಾಲ ಸು. ಕ್ರಿ. ಶ. (೧೫೨೫)**

ನಡೆ, ಅವನ ನುಡಿ, ಕ್ರಿಯೆ, ಭಕ್ತಿ, ಮಹಿಮೆ, ಪರಾಕ್ರಮ, ಶಿವೈಕ್ಯವೇ ಆದಿಯಾಗಿ ಎಲ್ಲಾ ವರ್ತನೆಗಳಿಗು ಶಿವನನ್ನೂ ಶಿವಶರಣರನ್ನೂ ಒರೆಗಲ್ಲಿಕ್ಕಿ ಒರೆದೊರೆದು ಅವರಂತೆಯಲ್ಲ, ಇವರಂತೆಯಲ್ಲ, ಹಾಗಲ್ಲ, ಹೀಗಲ್ಲ ಎಂದು ಶಿವಶರಣರ ಕಥೆಗಳನ್ನು ಸೂತ್ರರೂಪವಾಗಿ ಹೇಳಿ ಹೇಳಿ ಪ್ರತಿಪಾದಿಸಿರುತ್ತಾನೆ. ಉದಾಹರಣೆಗಾಗಿ ಎರಡು ಪದ್ಯಗಳನ್ನು ಇಲ್ಲಿ ಕೊಡುತ್ತೇವೆ.

ವರರತ್ನ ಘೋಷನ | ಪರಿಯಲ್ಲ ದಿವ್ಯ ಸಾ |
ಗರನಾದ ವ್ಯಾಳಿಯಂತಲ್ಲಾ ||
ಪರಮ ಚಾಂಧಸನಾದ | ನುರುತರ ಘೋರಾಂಟ |
ನಿರವಲ್ಲವಿದು ಕರಚಿತ್ರಾ || ೧೫೮ || (ಸಂಧಿ-೨.)

ಸ್ಮರನ ಸುಟ್ಟುರುಹಿದ | ಹರನಕ್ಷಿಯಲ್ಲ ತ್ರ್ಯೈ |
ಪುರವನುರುಹಿದ ಕಣ್ಣಲ್ಲ ||
ಗುರು ಸಿದ್ಧರಾಮೇಶ | ನುರಿಗಂಗಳಲ್ಲ ಶ್ರೀ |
ಚರಣದಿ ಪ್ರಭು ತೋರಿದಂತಲ್ಲ || ೧೩೧ || (ಸಂಧಿ-೩.)

ಇಂಥ ಪದ್ಯಗಳನ್ನು ಮಹತ್ತರವಾದ ವಿಷಯಗಳು ಬಂದಾಗಲೆಲ್ಲಾ ಕವಿ ಉಪಯೋಗಿಸಿರುತ್ತಾನೆ. ಇವುಗಳನ್ನು ನೋಡಿದವರಿಗೆ ಇದೊಂದು ವಿಡಂಬನವೋ! ಎನ್ನುವಹಾಗೆ ಅರಿವಾಗಬಹುದು, ಇದು ವಿಡಂಬನವಲ್ಲ ಭೈರವೇಶ್ವರನಲ್ಲಿ ಕವಿಗೆ ಅಪಾರವಾದ ಭಕ್ತಿಯು ನೆಲೆಗೊಂಡಿದ್ದುದೇ ಕಾರಣವೆಂದು ಹೇಳಬಹುದು. ಈ ರೀತಿ ಸೂತ್ರರೂಪವಾದ ಕಥೆಗಳನ್ನು ವಿಮರ್ಶೆ ಮಾಡುತ್ತಾಹೋದರೆ, ಕಲ್ಯಾಣ ನಗರದ ಅನಂತ ಶಿವಶರಣರುಗಳ ಪರಿಚಯವಾಗುವುದಲ್ಲದೆ, ಅವರ ನಡೆ ನುಡಿ ಕಾಯಕ ಮಹತ್ವ ಮುಂತಾದ ಅಪೂರ್ವ ವಿಷಯಗಳನ್ನು ಕಂಡು ಹಿಡಿಯಬಹುದು. ಎಷ್ಟೋ ಪುರಾಣಗಳನ್ನು ನಾವು ಸಂಗ್ರಹಿಸಿ ಪರಿಶೀಲನೆಮಾಡಿ ನೋಡಿದರೂ ಈ ಗ್ರಂಥದಲ್ಲಿ ದೊರೆಯುವಂಥ ವಿಷಯಗಳು ದೊರೆಯುವುದು ಕಷ್ಟವೆಂದೇ ಹೇಳಬೇಕು. ಪೂರ್ವ ಕವಿಗಳಿಗೆ ದೊರೆಯದ ಇಂಥ ಮಹತ್ತರ ವಿಷಯಗಳು ಈ ಕವಿಗೆ ಹೇಗೆ ಉಪಲಬ್ಧವಾಯಿತು, ಎಂದು ನೆನಹು ಬರಬಹುದು. ಒಬ್ಬೊಬ್ಬರ ಗುರಿ ಒಂದೊಂದು ರೀತಿಯಾಗಿರುವುದಲ್ಲದೆ, ಎಲ್ಲರು ಒಂದೇ ಮಾರ್ಗವನ್ನು ಹಿಡಿಯುವುದಿಲ್ಲ.

ಈ ಕವಿಯು ಕಲ್ಯಾಣ ನಗರದ ಶಿವಶರಣರ ಪ್ರಾಚೀನ ಗ್ರಂಥಗಳನ್ನು ಶೇಖರಿಸಿ ಬಹು ವಿಷಯಗಳನ್ನು ಮನದಟ್ಟುಮಾಡಿ ಈ ಗ್ರಂಥವನ್ನು ರಚಿಸಿರಬೇಕೆಂದು ತೋರುತ್ತದೆ. ಇದಕ್ಕೆ ಕಾರಣ ಆ ಕಾಲಕ್ಕೆ ತಾಳೆ ಪತ್ರಗಳಿಗೆ ಕ್ಷಯ ವ್ಯಾಧಿಯು ಇಲ್ಲದುದೇ ಕಾರಣ. ಇದುವರಿವಿಗು-ಶಯ್ಯಾ ಗೃಹದಲ್ಲಿ ವಿಶ್ರಾಂತಿ ಹೊಂದಿದ್ದ ಈ ಗ್ರಂಥವು ಶೋಧನೆ ನಡೆದು ಪ್ರಕಟವಾಗಿ ಹೊರಗವೆ ಬಂದುದು ಪ್ರತಿಯೊಬ್ಬ ಲೇಖಕನಿಗೂ ಮತ್ತು ಪಂಡಿತರಿಗೂ ಅನುಭಾವಿಗಳಿಗೂ ಎಲ್ಲಾ ವಾಚಕರಿಗೂ ಇದೊಂದು ಹುಣ್ಣಿಮೆಯ ಹಬ್ಬವೆಂದೇ ಹೇಳಬೇಕು. ಅದೂ ಅಲ್ಲದೆ ಈ ಗ್ರಂಥವು ಶಿವಶರಣರ ಪರಿಚಯದ ಒಂದು ಶಬ್ದಕೋಶವಿದ್ದಂತೆ ಎಲ್ಲಾ ಗ್ರಾಹಕರಿಗೂ ಅತಿ ಪ್ರಯೋಜನವಾಗುವುದೆಂದು ನಾವು ಒತ್ತಿ ಹೇಳಬೇಕಾಗಿಲ್ಲ

ಈ ಗ್ರಂಥದಲ್ಲಿ ಅಷ್ಟಾವರ್ಣ, ಪಂಚಾಚಾರ, ಷಟ್ಸ್ಥಲ, ಲಿಂಗಾಂಗ ಸಾಮರಸ್ಯದ ಮಹಾಮಹಿಮರ ಪರಿಚಯಮಾಡಿ ಅವುಗಳ ಆಚರಣೆ ಮತ್ತು ಮಹತ್ವ ಮುಂತಾದ ಬೋಧಪ್ರದ ವಿಷಯವಾಗಿ ಹೆಚ್ಚಿಗೆ ಪ್ರತಿಪಾದಿಸುವುದಿಲ್ಲ ಈ ಗ್ರಂಥದ ಎರಡನೆಯ ಸಂಧಿಯನ್ನು ಮಾಂಡವ್ಯಪುರದ ಮಹಾದೇವರಾಯ (ಮೋಳಿಗೆಮಾರಯ್ಯ) ನನ್ನು ಕುರಿತು ಸ್ತ್ರೀ ವರ್ಣನೆಯನ್ನು ಹೆಚ್ಚಾಗಿ ವರ್ಣಿಸಿದ್ದಾನೆ.

ಕವಿಯು ಈ ಗ್ರಂಥವಲ್ಲದೆ ಮತ್ತಾವ ಗ್ರಂಥಗಳನ್ನು ರಚಿಸಿರುವುದು ನಮಗೆ ಇನ್ನೂ ಉಪಲಬ್ಧವಾಗಿಲ್ಲ. ಕರ್ಣಾಟಕ ಕವಿ ಚರಿತೆಕಾರರಿಗೂ ಈ ಗ್ರಂಥವಲ್ಲದೆ ಮತ್ತಾವ ಗ್ರಂಥವನ್ನು ಬರೆದಿರುವುದು ದೊರೆತಿರುವಂತೆ ಯಾವ ಭಾಗಗಳಲ್ಲಿಯೂ ಬರೆದಿರುವುದು ಕಂಡುಬರುವುದಿಲ್ಲ.

"ಕುಮಾರರಾಮನ ಸಾಂಗತ್ಯ" ಬರೆದಿರುವ ಕವಿ ನಂಜುಂಡನಾದರೂ ಅವನೆ ಬೇರೆ, ಭೈರವೇಶ್ವರ ಕಾವ್ಯ ರಚಿಸಿರುವ ನಂಜುಂಡದೇವನೆ ಬೇರೆ ಎನ್ನುವುದನ್ನು ವಾಚಕರ ನೆನಹಿಗೆ ಇಲ್ಲಿ ತಂದಿದ್ದೇವೆ

ಈ ಗ್ರಂಥವನ್ನು ಕೆಲವು ಓದುಗರು ಸಾಂಗತ್ಯದಿಂದ ರಚಿತವಾಗಿದೆ ಎಂದು ಭಾವಿಸಿದ್ದಾರೆ. ನಾವು ಶರಷಟ್ಪದಿ ಎಂದು ಹೇಳುವುದಾದರೂ ೧-೨-೪-೫ ನೇ ಪಾದಗಳು ಸ್ವಲ್ಪ ಹೆಚ್ಚು ಕಮ್ಮಿ ಕುಸುಮಷಟ್ಪದಿಯ ಮಾತ್ರೆಗಳನ್ನೇ ಹೋಲುವುದಾದರೂ ೩-೬ ನೆಯ ಪಾದಗಳು ಶರಷಟ್ಪದಿಯ

(೧೪) ಮಾತ್ರೆಗಳನ್ನೇ ಹೆಚ್ಚಾಗಿ ಅನುಸರಿಸಿರುವುದರಿಂದ ನಾವು ಶರಷಟ್ಪದಿ ಎಂದೇ ನಿಶ್ಚೈಸಿದ್ದೇವೆ. ಶರಷಟ್ಪದಿಯು ಸಾಂಗತ್ಯದ ದಾಟಿಯಲ್ಲಿ ಓದುವುದಕ್ಕೆ ಬರುವುದುಂಟು ಕುಸುಮ ಷಟ್ಪದಿಯು ಮಾತ್ರೆಗಳು ಹೆಚ್ಚಾಗಿರುವುದರಿಂದ ಸಾಂಗತ್ಯದಲ್ಲಿ ಓದಲು ಬರುವುದಿಲ್ಲ. ಈ ರೀತಿಯಿಂದಲಾದರೂ ನಾವು ಶರಷಟ್ಪದಿ ಎಂದೇ ಹೇಳಬಹುದು. ' ಈ ಗ್ರಂಥದ ೫ ನೇ ಸಂಧಿಯ ಅಂತ್ಯದ ೧೬೧ ನೇ ಪದ್ಯದಲ್ಲಿ ಕವಿಯು ಷಟ್ಪದಿಯಲ್ಲಿ ರಚಿಸಿದ್ದೇನೆಂದು ಹೇಳಿರುತ್ತಾನೆ. ಈ ಕಾರಣಗಳಿಂದ ಇದು ಶರಷಟ್ಪದಿ ಎಂದು ಹೇಳಬೇಕು / ಕವಿಯು ಷಟ್ಪದಿಯ ನಿಯಮಗಳಿಗೆ ಸರಿಯಾಗಿ ಗಣ, ಪ್ರಾಸು, ಮಾತ್ರೆ ಇವುಗಳನ್ನು ಕ್ರಮವಾಗಿ ಬಳಸಿರುವುದಿಲ್ಲ. ಆದಷ್ಟು ನಾವು ಕವಿಯ ಉದ್ದೇಶಕ್ಕೆ ಕೊರತೆ ಬಾರದಹಾಗೆ ಪ್ರಾಸುಗಳ ಕಡೆ ಹೆಚ್ಚಿಗೆ ಗಮನವಿಟ್ಟು ಸರಿಪಡಿಸಿರುತ್ತೇವೆ. ಷಟ್ಪದಿಗಳಲ್ಲಿ ಒಂದು ವಾಕ್ಯವು ಒಂದೇ ಪದ್ಯದಲ್ಲಿ ಅಡಕವಾಗಿರಬೇಕೆಂಬ ನಿಯಮವಿದ್ದರೂ ೩-೪ ಪದ್ಯಗಳಿಂದ ವಾಕ್ಯಗಳು ಪೂರ್ತಿಗೊಳ್ಳುವ ಮಾರ್ಗವೇ ಹೆಚ್ಚಾಗಿದೆ. ಓದುವಾಗ ಅದು ನೆನಹಿಗೆ ಬರುವುದಾದಕಾರಣ ಅವುಗಳನ್ನು ನಾವು ಇಲ್ಲಿ ಉದಹರಿಸಿರುವುದಿಲ್ಲ

ಇದೇ ರೀತಿಯಲ್ಲಿ ಶಾಂತಕವಿಯು ಸತ್ಯೇಂದ್ರಚೋಳನ ಕಾವ್ಯವನ್ನು ಶರಷಟ್ಪದಿಯಲ್ಲಿ ರಚಿಸಿದ್ದಾನೆ ಅದು ಸಾಂಗತ್ಯದಲ್ಲಿ ಓದಲು ಬರುವುದಾದರೂ ಅದು ಸಾಂಗತ್ಯವಲ್ಲ ಶಾಂತಕವಿಯು ಗ್ರಂಥದ ಕೊನೆಯಲ್ಲಿ ಹೀಗೆ ಹೇಳಿದ್ದಾನೆ.

"ಶರಷಟ್ಪದಿಯ ಸಾ | ಸಿರದ ಮೇಲರುವ | ತ್ತು ರಂದ್ರ ಸಂಧಿ " ಎಂದು ಹೇಳಿರುವನು ಉದಾಹರಣೆಗಾಗಿ ಈ ಎರಡು ಪದ್ಯಗಳನ್ನು ನೋಡುವುದು.

ಎರಗಿದವರನೆಲ್ಲ |
ಹರಣವನುಳುಹಿದ |
ಘುರಗಲಿ ವೀರಭದ್ರೇಶಾ ||

ದುರುಳರ ಶಿರಗಳ |
ಸರಗಟ್ಟಿ ಧರಿಸಿದ |
ತಿರುಗಿದ ಕೈಲಾಸ ಪುರಕೆ ||

ತಲೆಗೆ ತಲೆಗಳನಿತ್ತು ।
ಗೆಲಿಸಿದ ನಿಮ್ಮಂಥ ।
ಛಲಿಗಳಿನ್ನಿಲ್ಲ ಮರ್ತ್ಯದಲ್ಲಿ ॥

ಭಲರೆ ಭಾಪುರೆ ಎಂದು ।
ಚೆಲುವ ಚೋಳೇಂದ್ರನ ।
ಮಲಹರ ಬಹಳ ಮನ್ನಿಸಿದ ॥

ನಂಜುಂಡದೇವನ ಮತ್ತು ಶಾಂತಕವಿಯ ಪದ್ಯಗಳನ್ನು ವಿಮರ್ಶೆಮಾಡಲು ಹೋದರೆ, ಪದ್ಯಗಳು–ಗಣಪ್ರಸ್ತಾರ ನಿಯಮಗಳಿಗೆ ನಿಲ್ಲುವಂತಿಲ್ಲ. ಈ ಸಂದೇಹವನ್ನು ವಿಮರ್ಶಕರ ಕಡೆಗೆ ಬಿಟ್ಟಿದ್ದೇವೆ.

ಸಾಂಗತ್ಯದ ಒಂದು ನೋಟ .—

ಒಡನೆ ಭೀಮನು ಧರ್ಮಜನ ವೈರಾಗ್ಯದ ।
ನುಡಿಯನಾಲಿಸಿ ಕೋಪವೆರಸಿ ।
ಸಿಡಿಮಿಡಿಗೊಳುತಳಲುತೆ ನೋವುತೆ ನೀತಿ ।
ವಿಡಿದು ನಿಷ್ಠುರವನಾಡಿದನು ॥ (ತಿರುಮಲಾರ್ಯ)

ಇದರ ೧–೩ ನೇ ಪಾದಗಳಲ್ಲಿ ವಿಷ್ಣುಗಣಗಳು ನಾಲ್ಕು, ಕ್ರಮವಾಗಿ ಬರುವುದು. ೨–೪ ನೇ ಪಾದದಲ್ಲಿ ಎರಡು, ವಿಷ್ಣುಗಣವೂ ಒಂದು ಬ್ರಹ್ಮಗಣವೂ ಕ್ರಮವಾಗಿ ಬಂದಿರುವುದು ಪ್ರಾಸ, ಪಾದ, ಗಣ, ಮಾತ್ರೆ ಈ ಕ್ರಮಗಳು ಶರಪಟ್ಪದಿಯಲ್ಲಿ ಬರುವುದೆ ? ವಾಚಕರು ವಿಮರ್ಶೆಮಾಡಬೇಕು

ಕವಿಯು ಉದಾಹರಣೆಗಾಗಿ ಬೇರೆ ಬೇರೆ ಕಥೆಗಳನ್ನು ಸೂತ್ರರೂಪವಾಗಿ ಹೇಳುತ್ತಾ ಹೋಗಿರುವುದರಿಂದ ಕರ್ತೃ, ಕರ್ಮ, ಕ್ರಿಯಾಪದಗಳು ಅಲ್ಲಲ್ಲಿ ಲೋಪವೆ ? ಎಂಬ ನೆನಹು ಮನಸ್ಸಿಗೆ ಬರಬಹುದು, ಅವುಗಳನ್ನು ಓದುಗರು ಆಲೋಚಿಸಿ ಸರಿಪಡಿಸಿಕೊಳ್ಳಬೇಕು

ದರ್ಪಣದಲ್ಲಿ ಆನೆ ಅಡಕವಾಗುವ ಹಾಗೆ ಸಣ್ಣ ಪದ್ಯಗಳಲ್ಲಿ ವಾಕ್ಯಗಳನ್ನು ತುಂಬಿ ಅನಂತ ಪುರಾಣಗಳನ್ನೇ ಒಳಗೊಂಡು ಈ ಗ್ರಂಥವನ್ನು ಕವಿಯು ರಚಿಸಿದ್ದಾನೆ. ಈ ಗ್ರಂಥರಚನೆಗೆ ಕವಿಯು ಸಂಗ್ರಹಿಸಿದ ಆಧಾರ ಗ್ರಂಥಗಳನ್ನು ಯಾವ ಎಡೆಯಲ್ಲಿಯೂ ತಿಳಿಸಿರುವುದಿಲ್ಲ.

## ಭೈರವೇಶ್ವರ ಕಾವ್ಯದ ಸಹಾಯದಿಂದ ಇತ್ತೀಚಿಗೆ ಉಗಮವಾದ ಗ್ರಂಥಗಳು.

ಸಿದ್ಧಲಿಂಗ ಶಿವಯೋಗಿಯು ಚಂಪುಕಾವ್ಯದಲ್ಲಿ ಭೈರವೇಶ್ವರ ಪುರಾಣವನ್ನು ರಚಿಸಿದ್ದಾನೆ.) ಪ್ರಧಮ ಅಶ್ವಾಸದ ೨೭ ನೆಯ ಪದ್ಯಗಳಲ್ಲಿ ಹೇಳುವ ಸಾರ ಹೀಗಿದೆ. ಚೋಳದೇಶದಲ್ಲಿ ವಿಶಾಲಪುರಾಧಿಪತಿ ಸೂರ್ಯ ವಂಶಸ್ಥನಾದ ಸಂಗಮಭೂಪನು ಆತನ ಧರ್ಮಪತ್ನಿ ಕಮಲಾಕ್ಷಿ ಇವರ ಕುಮಾರ ಕಥಾನಾಯಕನಾದ ಭೈರವರಾಜನು. ಈತನಿಗೆ ರಾಜೇಂದ್ರ ವಿಜಯನೆಂದು ಈ ಗ್ರಂಥದಲ್ಲಿ ಹೇಳುವುದಲ್ಲದೆ ಪ್ರತಿ ಅಶ್ವಾಸದ ಕಡೆಯ ಗದ್ಯದಲ್ಲಿ ರಾಜೇಂದ್ರ ವಿಜಯ ಪುರಾಣದೋಳ್ ಎಂದು ಪೂರ್ತಿಗೊಳ್ಳುವುದು. ಈ ಗ್ರಂಥದಲ್ಲಿ ಭೈರವರಾಜನ ಮತ್ತು ಚೋಳರ ಚರಿತ್ರೆಗಳನ್ನೇ ಅಧಿಕವಾಗಿ ಹೇಳಿದ್ದಾನೆ ೨೧-ಅಶ್ವಾಸಗಳಿಂದ ಕೂಡಿದೆ. ಸಿದ್ಧಲಿಂಗ ಶಿವಯೋಗಿಯ ಕಾಲ ಸುಮಾರು ೧೬೦೦ ವರುಷಗಳೆಂದು ಅಭಿಪ್ರಾಯ

ಕುಮಾರ ಚೆನ್ನಬಸವನು ಸಾಸಲೆ ಭೈರವೇಶ್ವರ ಚರಿತೆಯನ್ನು ಬರೆದಿರುವನೆಂದು (ಕ. ಕ. ಚ. ಕಾರರು) ಅಭಿಪ್ರಾಯಪಟ್ಟಿದ್ದಾರೆ ಅದು ನಮಗೆ ದೊರೆತಿರುವುದಿಲ್ಲ.

ಶಾಂತಲಿಂಗ ದೇಶಿಕನು ಶಾಲಿವಾಹನ ಶಕ ೧೫೫೪ನೇ ಪರಿಧಾವಿ ಸಂವತ್ಸರದಲ್ಲಿ "ಭೈರವೇಶ್ವರ ಕಥಾಸೂತ್ರ ರತ್ನಾಕರ" ಎಂಬ ಗದ್ಯಗ್ರಂಥ ವನ್ನು ಭೈರವೇಶ್ವರ ಕಾವ್ಯದ ಪದ್ಯಗಳನ್ನು ಸೂತ್ರರೂಪವಾಗಿ ಒಂದೊಂದು ಪದ್ಯಗಳನ್ನು ತೆಗೆದುಕೊಂಡು ಕಥೆಗಳನ್ನು ವಿಸ್ತಾರಮಾಡಿದ್ದಾನೆ.* ಕಥೆಗಳ ವಿಸ್ತಾರದ ಸಹಾಯಕ್ಕೆ ವೇದ, ಆಗಮ, ಉಪನಿಷತ್, ಪುರಾಣ, ಚಾರಿತ್ರ,

---

* ಬಸವಣ್ಣ ಚೆನ್ನಬಸವಣ್ಣ ಅಲ್ಲಮಪ್ರಭುದೇವರು ಮುಖ್ಯವಾದ ಪ್ರಮಥರು ಭೂಲೋಕದೊಳು ಶಿವಭಕ್ತಿಯನುದ್ಧರಿಸಿ ನಿಮ್ಮೊಳು ಬೆರಸಿದಂದಿಂಪ ಭೂಲೋಕದಲ್ಲಿ ವೀರಶೈವಾಚಾರದ ಕುರುಹು ಇಲ್ಲದಂತಾಯಿತು. ಪರಶಿವನೆ ನೀನೇ ಬಿಜಯಂಗೈದು, ಭೂಲೋಕದಲ್ಲಿ ವೀರಶೈವಾಚಾರವನ್ನುದ್ಧರಿಸಬೇಕು; ದೇವಾ ಎನಲಾತ ನಮಿಸಲಾ ಮುನಿಯ ಬಿನ್ನಪಂಗೇಳ್ದು, ಪರಶಿವಂ ನಸುನಗುತುಂ ಸುತ್ತಲಿರ್ದ ಪ್ರಮಥಗಣದ ಮೊತ್ತಮಂ ನೋಡುತ್ತ, ಕಾಲಸಂಹಾರನೆಂಬ ಗಣೇಶ್ವರನಂ ಕರೆದು ಮನ್ನಿಸುತ್ತುಂ ಮರ್ತ್ಯದೊಳು ನೀ ಪೋಗಿ ವೀರಶೈವಾಚಾರವನುಂಟುಮಾಡಿ, ಪರವಾದಿಗಳಂ ಗೆಲಿದು, ವಾದವಂ ಖಂಡಿಸಿ

ಕಾವ್ಯ, ಭಾಷ್ಯ ಮೊದಲಾದ ಗ್ರಂಥಗಳ ಸಾರದಿಂದ ಭೈರವೇಶ್ವರ ಕಾವ್ಯವನ್ನೇ ಆಧಾರವಾಗಿಟ್ಟುಕೊಂಡು ಕಥೆಗಳನ್ನು ರಚಿಸಿದ್ದೇನೆಂದು ಶಾಂತಲಿಂಗ ದೇಶಿಕನು ಹೇಳಿರುವನು ಉತ್ತರದೇಶದ ಬಸವಲಿಂಗ ದೇವನಿಂದ ವಿರಚಿತವಾದ ಬಸವೇಶ್ವರ ಪುರಾಣದ ಕಥಾಸಾಗರ ಇದನ್ನು ಭೈರವೇಶ್ವರ ಕಾವ್ಯದ ಆಧಾರದಿಂದಲೂ ಮತ್ತು ಹದಿನೆಂಟು ಪುರಾಣ, ಭಾರತ, ರಾಮಾಯಣ, ವೀರಶೈವಾಮೃತ ಪುರಾಣ, ಆರಾಧ್ಯ ಚಾರಿತ್ರೆ, ಗಣಾಡಂಬರ, ಸಿಂಗಿರಾಜನ ಕೃತಿ, ಶಿವತತ್ವಚಿಂತಾಮಣಿ, ಹರಿಹರನ ರಗಳೆ, ಸಿದ್ಧರಾಮೇಶ್ವರ ಚಾರಿತ್ರ,

---

ಗೆಲಿಮ ನೀನಿರುತಿರಲ್ಕೆ ನಾಂ ಬಂದು ಕೈಲಾಸಕ್ಕೆ ಕರೆದುಕೊಂಡು ಬರ್ಪೆನು ಪೋಗೆನಲು, ಶಿವಂಗೆರಗಿ, ಎನಗೆ ಜನ್ಮಸ್ಥಲವಾವುದು ದೇವಾ ' ಎನಲು, ಭೂಲೋಕದೊಳಾಂಪ್ರದೇಶದಲ್ಲಿ ಮೋಪೂರೆಂಬ ಪಟ್ಟಣದರಸು ಸಂಗಮರಾಜ ಹೈಮವತಿ ಎಂಬ ಸತಿಯುಳ್ಳ ಕ್ಷತ್ರಿಯ ಭೂಪಾಲಕನು ಪುತ್ರನ ಕಾಂಕ್ಷೆಯಿಂದೆ ನಮ್ಮ ಶ್ರೀ ಪದವ ಧ್ಯಾನಿಸುತಿರ್ಪನಾತಂಗೆ ಪುತ್ರನಾಗು ಪೋಗೆನಲು, ಶಿವನಿಗೂ ಪ್ರಮಥರಿಗೂ ನಮಸ್ಕರಿಸಿ ಬೀಳ್ಕೊಂಡು ಭೂಲೋಕಕೈಯ್ದಿ ಅವರಿಗೆ ಪುತ್ರನಾಗುದಿಸಿ ಭೈರವರಾಜನೆಂಬ ನಾಮದಿಂದೊಪ್ಪಿರುತ್ತುಂ, ಬಾಲಲೀಲೆಯಂ ಕಳೆದು, ಕರಿ ತುರಗ ಶಸ್ತ್ರಾಭ್ಯಾಸ ಚೌಷಷ್ಟಿ ಕಳಾಪರಿಣತನಾಗಿ, ಸಲ್ಲಕ್ಷಣ ಪೂರ್ಣವಪ್ಪ ಕನ್ನಿಕೆ ಮಹಾದೇವಿಯೆಂಬ ಸ್ತ್ರೀಯುಕ್ತವಾಗಿ ಸಕಲೈಶ್ವರ್ಯ ನಿಯೋಗವೆರಸಿ, ಖ್ಯಾತಿಯಿಂದಿರುತ್ತುಂ, ಸಕಲ ಶಾಸ್ತ್ರಂಗಳಂ ಕೇಳ್ವಾಕಾಂಕ್ಷೆಯುಳ್ಳಾತನಾಗಿ, ವೇದಶಾಸ್ತ್ರ ಪುರಾಣೇತಿಹಾಸಾದಿಕೋವಿದ ಪ್ರಬುದ್ಧಾಚಾರ್ಯನೆಂಬ ಪುರಾಣೀಕನಂ ಕರೆಸಿ, ತ್ಯಾಗ, ಭೋಗ, ವೀರವಿತರಣ ಪರಹಿತಚರಿತದಿಂದ ರಾಜ್ಯ ತೇಜ ಕೀರ್ತಿ ಪ್ರತಾಪದಿಂ, ರಾಜ್ಯವನಾಳಿದರಸುಗಳಾರೆಂದು ಕೇಳಲು, ಭೈರವರಾಜನೊಳು ಪುರಾಣಿ ಪೇಳುತಿರ್ದಪಂ
(ಇಲ್ಲಿಂದ ಮುಂದೆ ಭೈರವರಾಜನ ಮತ್ತು ಶಿವಶರಣರ ಮಹತ್ವದ ಕಥೆಗಳು ಬೆಳೆದಿದೆ ಗ್ರಂಥದ ಕೊನೇ ಭಾಗವನ್ನು ಇಲ್ಲಿ ತಿಳುಹಿಸಲಾಗಿದೆ.) ನಂದೀಶ್ವರನ ಚಿದಂಶದೆ ಧರೆಗೈತಂದು ಭಕ್ತಿ ಜ್ಞಾನ ವೈರಾಗ್ಯವೆ ರೂಪವೆತ್ತ ಷಟ್ಸ್ಥಲಾಚಾರ್ಯ ವಿರಕ್ತ ನಮಃ ಶಿವಾಯದೇವರೆಂಬ ಸದ್ಗುರು ಮೂರ್ತಿಯಲ್ಲಿ ಅವರ ಮಹಾನುಭಾವ ವಾಕ್ಯ ಪ್ರಸಂಗ ಪ್ರಸಾದಾಮೃತಮಂ ಸ್ವೀಕರಿಸಿ ತೃಪ್ತನಾದ ಶಾಂತಲಿಂಗ ದೇಶಿಕನು ಸಕಲ ವೀರ ಮಾಹೇಶ್ವರರುಗಳ ನಿರೂಪದಿಂದ ಭೈರವದೇವನ ಕಾವ್ಯದಲ್ಲಿ ಸೂಚನೆಯಾಗಿರ್ದ ಕಥೆಗಳನ್ನು ವಿಶಾಲವಾಗಿ ಬರೆದು ಸಂಗ್ರಹಿಸೆಂದು ನಿರೂಪಿಸೆ ಅವರ ನಿರೂಪವಿಡಿದು ಮೂಲ ದೃಷ್ಟವಾದ ಉಪ ಕಥೆಗಳಿಗೆ ದೃಷ್ಟವಾದ ಉಪ ಕಥೆಗಳನ್ನು ಸಂಗ್ರಹಿಸುವುದಕ್ಕೆ ಸಕಲ ವೇದಾಗಮ ಪುರಾಣೇತಿಹಾಸಂಗಳಲ್ಲಿ ಹದಿನೆಂಟು ಶೃಂಗಾರ ನವರಸಾರ್ಥ ಲಕ್ಷಣ ಶುದ್ಧವಾಗಿ ಪೇಳುವ ಛಂದಸ್ಸು, ಧಾತು, ಭರತ, ನಾನಾರ್ಥ, ಕವಿ ಕಂಠಾಭರಣ, ದಶನಿಘಂಟುಕಾರೋಕ್ತಿಗಳಲ್ಲಿ,

ಶೂನ್ಯ ಸಂಪಾದನೆ ಮೊದಲಾದುವುಗಳನ್ನು ಸಂಗ್ರಹಿಸಿ (೪೬೪) ನಾಲ್ಕುನೂರು ಅರವತ್ತುನಾಲ್ಕು ಕಥೆಗಳನ್ನು ರಚಿಸಿರುವೆನೆಂದು ಹೇಳಿರುವನು

ಇದೇ ಬಸವಲಿಂಗದೇವನಿಂದ ರಚಿತವಾದ ಭೈರವೇಶ್ವರ ಕಾವ್ಯದ ಕಥಾಸಾಗರ ಎಂಬ ಹೆಸರಿನಿಂದ ಭೈರವೇಶ್ವರ ಕಾವ್ಯದ ಪದ್ಯ ಸೂಚನೆಗಳನ್ನು ತೆಗೆದುಕೊಂಡು ಇದಕ್ಕೆ ಆಧಾರವಾಗಿ ಸ್ಕಾಂದಪುರಾಣದಲ್ಲಿಯ ಕಾಶಿಖಾಂಡ, ರೇಣುಕಖಾಂಡ, ಕೇದಾರಖಾಂಡ, ಅಸುರಖಾಂಡ, ವೀರಮಹೇಂದ್ರ ಖಾಂಡ, ಯುದ್ಧಖಾಂಡ, ಉಪದೇಶಖಾಂಡ ಮತ್ತೆ ಕೂರ್ಮ ಪುರಾಣ,

---

ತರ್ಕ, ವರದಬಟ್ಟಿ, ಚಿಂತಾಮಣಿ, ಶಬ್ದಮಣಿಸೂತ್ರ, ದಶವ್ಯಾಕರಣದಿಂದ ಲಕ್ಷಣ ಶುದ್ಧವಾಗಿ ಪೇಳಲುಪಟ್ಟ ವೀರಮಾಹೇಶ್ವರ ಸಿದ್ಧಾಂತ, ವೀರಮಾಹೇಶ್ವರ ತಂತ್ರ, ವೀರ ಮಾಹೇಶ್ವರಾಚಾರ ಸಂಗ್ರಹ, ಸೋಮನಾಥ ಭಾಷ್ಯ, ವಿವೇಕ ಚಿಂತಾಮಣಿ, ವೀರಶೈವ ಸುಧಾರ್ಣವ, ಗಣಭಾಷ್ಯ ರತ್ನಮಾಲೆ ಮೊದಲಾದುವು. ಸಂಸ್ಕೃತ, ಕನ್ನಡ, ಆರ್ಯಭಾಷೆ, ಆಂದ್ರಭಾಷೆ, ದ್ರಾವಿಡಭಾಷೆ, ಪ್ರಾಕೃತ ಇಂತೀ ಭಾಷೆಗಳಿಂದ ಸಂಗ್ರಹಿಸಿದ ಪ್ರಕರಣದಲ್ಲಿ ಪೇಳುತಿರ್ದ ಕಥೆಗಳನ್ನೂ, ಭಾರತ, ಮಹಾಭಾರತ, ರಾಮಾಯಣ, ಮಹಾಭಾಷ್ಯ, ಪಂಚವಾಕ್ಯ, ಪಂಚತಂತ್ರ, ಬತ್ತೀಸಪುತ್ಥಳಿವೇತಾಳ ಕಥೆಗಳಲ್ಲಿಯೂ, ಸೂಪುಸಿಲುಪು, ಕಕೋಕ, ವೈದ್ಯ, ಮಂತ್ರ, ಗಾರುಡ, ಯಂತ್ರ, ಶಕುನ, ಶಾಸ್ತ್ರ, ಷಡ್ದರ್ಶನಶಾಸ್ತ್ರ, ಹದಿನೆಂಟು ಮತತಂತ್ರ, ಹತ್ತೊಂಬತ್ತು ಧರ್ಮಶಾಸ್ತ್ರ, ಎಂಟು ವೇದ, ಹದಿನೆಂಟು ಪುರಾಣ, ಇಪ್ಪತ್ತೆಂಟು ಆಗಮ, ಮೂವತ್ತೆರಡು ಉಪನಿಷತ್ತುಗಳಲ್ಲಿ ಹೇಳುವ ಕಥೆಗಳನ್ನೊಳ ಕೊಂಡು ಒಪ್ಪುತಿರ್ದ, ಬಸವೇಶ್ವರನ ಪುರಾಣ, ಗಿರಿಜಾಕಲ್ಯಾಣ, ವೀರಶೈವಾಮೃತಪುರಾಣ, ಆರಾಧ್ಯ ಚರಿತ್ರೆ, ನನ್ನಯ್ಯನ ಕಾವ್ಯ, ಬಸವ ಚಾರಿತ್ರ, ಸಿಂಗಿರಾಜನ ಕೃತಿ ಮೊದಲಾದ ಸಮಸ್ತ ಸಾಂಗತ್ಯ, ಚಾರಿತ್ರ ಕಥೆಗಳಿಗೆ ಮಾತೃಸ್ಥಾನವಾಗಿಪ್ಪುದು ಬಸವಾದಿ ಪುರಾತನರು ನಿರೂಪಿಸಿದ ಶೂನ್ಯ ಸಂಪಾದನೆ ಮೊದಲಾದ ವಚನಾಮೃತ ಸಾರದಲ್ಲಿ ಪೇಳುತಿರ್ದ, ಕಂದ, ವೃತ್ತ, ಗ್ರಂಥ, ಶೃತಿ, ಸ್ಮೃತಿ, ಪದ, ಪದ್ಯ, ವಚನ, ರಗಳೆ, ಷಟ್ಪದ, ತ್ರಿವಿಧಿ, ಚೌಪದ, ದ್ವಿಪದ, ದಂಡಕ, ಅಷ್ಟಕ, ವಿಷಮಪದ, ಪ್ರಬಂಧ, ಉದ್ದಂಡಷಟ್ಪದ, ಪಂಚರತ್ನ, ಸ್ವರಪದ, ತಾರಾವಳಿಗಳು ಮೊದಲಾದವರಲ್ಲಿ ಹೇಳಲ್ಪಟ್ಟ ಕಥೆಗಳಂ ನೋಡಿ ಪುರಾತನರ ವಚನದ ಮೇಲ್ಪಂತಿವಿಡಿದು ಭೈರವೇಶ್ವರ ಕಾವ್ಯದ ಕಥಾಸಂಗ್ರಹಕ್ಕೆ ಬೇಕಾದವಂ ತೆಗೆದುಕೊಂಡು ಸಂಗ್ರಹಿಸಿದೆನು. ಇದು ಶರಣ ಸತಿಯ ರತಿ ಸಂಯೋಗಕ್ಕೆ ಪತಿ ಶಿವಲಿಂಗ ವೆಂಬ ಅಪ್ರತಿಮ ಕಂದರ್ಪನೆಸೆವ ಚತುರ ನೂತನ ಬಾಣವಿದುವಾಗಿ ಸಂದ ಶಾಲಿವಾಹನ ಶಕ ೧೫೫೪ ನೆಯ ಪರಿಧಾವಿ ಸಂವತ್ಸರದ ಮಾರ್ಗಶಿರ ಮಾಸದ ಶುದ್ಧ (೧೦) ಉತ್ತರ ಭಾದ್ರಪದ ನಕ್ಷತ್ರ ಶನಿವಾರದಲ್ಲಿ ಸಂಗ್ರಹಿಸಿ ಸಂಪೂರ್ಣವಾಯಿತು. . .(ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದ ಅಂತ್ಯದಲ್ಲಿ ಶಾಂತಲಿಂಗ ದೇಶಿಕನು ಹೀಗೆ ಹೇಳಿದ್ದಾನೆ.)

ಆದಿತ್ಯ ಪುರಾಣ, ಗಾರುಡ ಪುರಾಣ, ಲಿಂಗ ಪುರಾಣ, ಬ್ರಹ್ಮ ಪುರಾಣ, ಪೂರ್ವರಾಮಾಯಣ, ಉತ್ತರರಾಮಾಯಣ, ಮಹಾಭಾರತ ಮೊದಲಾದವರ ಸಾಕ್ಷಿಯ ಕಥೆಗಳು (೩೧೬) ಉಚಿತ ಕಥಗಳು (೭೪) ಹೀಗೆ ಕಥೆಗಳ ಸಂಖ್ಯೆಯಲ್ಲೂ, ಆಧಾರ ನೋಡಿರುವುದರಲ್ಲೂ, ಬಸವಲಿಂಗದೇವನೆ ಮುಂದೆ ಹೋಗಿದ್ದಾನೆಂದು ಹೇಳಬಹುದು ಕರ್ಣಾಟಕ ಕವಿ ಚರಿತೆಕಾರರ ಅಭಿಪ್ರಾಯದಂತೆ ಕ್ರಿ ಶ. (೧೬೦೦) ವರುಷದಲ್ಲಿ ಕಥಾಸಾಗರವನ್ನು ರಚಿಸಿದ್ದರೆ, ಭೈರವೇಶ್ವರ ಕಾವ್ಯದ ಸಂಜುಂಡದೇವನಿಗೆ " ಭೈರವೇಶ್ವರ ಪುರಾಣ " ವ ಸಿದ್ಧಲಿಂಗ ಶಿವಯೋಗಿಯೂ ಮತ್ತು ಉತ್ತರದೇಶದ ಬಸವಲಿಂಗ ಇವರುಗಳು ಎರಡನೆಯವರೆಂದು ಹೇಳಬಹುದು. ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರವನ್ನು ಶಾಂತಲಿಂಗದೇವನು, ಕ್ರಿ. ಶ (೧೬೭೨)ರಲ್ಲಿ ರಚಿಸಿರುವನೆಂದು ಹೇಳಿರುವ ಕಾರಣ ಇವನು (೭೨) ವರುಷಗಳ ಕೊನೆಯ ಕಾಲದವನೆಂದು ನೆನಹಿಗೆ ಬರುವುದು.

ಈ ಭೈರವೇಶ್ವರ ಕಾವ್ಯದ ಶೋಧನೆಗಾಗಿ ಹತ್ತು ತಾಡಾ ಓಲೆ ಪ್ರತಿಗಳನ್ನು ಸಂಗ್ರಹಿಸಿದ್ದೇವೆ. ಈ ಓಲೆ ಪ್ರತಿಗಳಿಗೆ ಅನುಕ್ರಮವಾಗಿ (ಅ, ಇ, ಉ, ಎ, ಒ, ಕ, ಗ, ಚ, ಜ, ಟ-) ಹೀಗೆ ಮಾತೃಕೆಗಳ ಸಂಕೇತಾಕ್ಷರಗಳನ್ನು ಉಪಯೋಗಿಸಿದ್ದೇವೆ ಈ ಪ್ರತಿಗಳ ಹೋಲಿಕೆಯ ಕಾಲದಲ್ಲಿ ದೊರೆತಿರುವ ಶಬ್ದಗಳನ್ನು ಮತ್ತೊಮ್ಮೆ ಪರಿಶೀಲಿಸಿ ಕವಿಯ ಮೂಲ ಪಾಠಗಳನ್ನು ಸಾಧ್ಯವಾದ ಮಟ್ಟಿಗೂ ಗುರುತಿಸಿ ಉತ್ತಮ ವರ್ಗದ ಶಬ್ದಗಳನ್ನು ಪಙ್ತಿಯಮೇಲೆ ಬಳಕೆಯಲ್ಲಿಟ್ಟು ಮಧ್ಯಮ ವರ್ಗದ ಶಬ್ದಗಳನ್ನು ಪಾಠಾಂತರದಲ್ಲಿ ಇರಿಸಿದ್ದೇವೆ ಗ್ರಾಮ್ಯ ಶಬ್ದಗಳ ಪ್ರಯೋಗ ವಿಶೇಷವಿದ್ದುದರಿಂದ ಅವುಗಳ ಶುದ್ಧತಗೆ ಸ್ವತಂತ್ರ ಪಾಠಗಳ ಪ್ರಯೋಗವು ಆಗಿರುವುದುಂಟು, ಅವುಗಳು ಹೆಚ್ಚಿಗೆ ಬದಲಾವಣೆಗಳಿಲ್ಲವಾದುದರಿಂದ ಗ್ರಾಹಕರ ಸಂದೇಹಕ್ಕೆ ಎಡೆ ಇರುವುದಿಲ್ಲ.

ಈ ಗ್ರಂಥ ಶೋಧನೆಗೆ ಪ್ರಾಚೀನ ಓಲೆ ಪ್ರತಿಗಳನ್ನು ಸಹಾಯ ಮಾಡಿದವರ ಪಟ್ಟಿಯನ್ನು ಪ್ರತ್ಯೇಕವಾಗಿ ಇಡಲಾಗಿದೆ. ವಾಚಕರು ಅಲ್ಲಿ ಗುರುತಿಸುವುದು.



# ಸಾಸಲಿನ ಸ್ಥಳ ಪರಿಶೀಲನೆ ವಿಚಾರ

ಸಾಸಲು ಹಿಂದೆ ಜಿನದೇವರಿಂದ ಜೈನರೇ ವಾಸವಾಗಿರುವ ಊರಾಗಿದ್ದಿತು ಅವರ ಮಧ್ಯ ಲಿಂಗಾಯತನಾಗಿ ಆದಿಶೆಟ್ಟಿಯೊಬ್ಬನೆ ಇದ್ದನು. ಜೈನರು ಆದಿಶೆಟ್ಟಿಯನ್ನು ನಮ್ಮ ದೇವರಿಗೆ ಪೂಜೆ ಕೊಡಬೇಕೆಂದು ವಾದಿಸುತ್ತಿದ್ದರು. ಆದಿಶೆಟ್ಟಿಗೆ ಸೌರಾಷ್ಟ್ರ ಸೋಮನಾಥನೆ ಇಷ್ಟದೈವವಾದ ಕಾರಣ ಪರದೈವಕ್ಕೆ ಪೂಜೆಕೊಡಲು ಒಪ್ಪುತ್ತಿರಲ್ಲಿಲ್ಲ. ಆದಿಶೆಟ್ಟಿಯ ಹಟವನ್ನು ಜೈನರು ನೋಡಿ ಕೋಪದಿಂದ ಚಿತ್ರಹಿಂಸೆಯನ್ನು ಕೊಡಲು ಪ್ರಾರಂಭಿಸಿದರು. ಇವರ ಹಿಂಸೆ ತಡೆಯಲಾರದೆ ಅವರ ಕಟ್ಟಿಗೆ ಒಪ್ಪಿದಂತೆ ಶೆಟ್ಟಿಯು ಒಪ್ಪಿತ ನಾದನು. ಮತ್ತೊಂದುದಿನ ಇಗೋ ಪೂಜೆ ಕೊಡು ಎಂದು ಕೇಳಿದುದಕ್ಕೆ ನಿರಾಕರಿಸಿದನು. ಜೈನರೆಲ್ಲ ಸೇರಿ ನೀನು ಸೌರಾಷ್ಟ್ರ ಸೋಮೇಶ್ವರನ ಭಕ್ತನಾದರೆ' ಆ ಸೋಮನಾಥನನ್ನು ಇಲ್ಲಿ ತೋರಿಸು ಇಲ್ಲವಾದರೆ'' ಪೂಜೆ ಕೊಟ್ಟು ಭಕ್ತನಾಗು, ಇದಕ್ಕೂ ನೀನು ನಿರಾಕರಿಸುವುದಾದರೆ''' ನಮ್ಮ ಊರನ್ನು ಈ ಕ್ಷಣವೆ ಬಿಟ್ಟು ಹೊರಟುಹೋಗು, ಎಂದು ಖಾಯಿದೆಯನ್ನು ಮಾಡಿದರು. ಆಗ ಆದಿಶೆಟ್ಟಿಯು ಸೋಮನಾಥನನ್ನು ತೋರಲು, ಒಂದು ವಾಯಿದೆಯನ್ನು ಮಾಡಿಕೊಂಡು, ಸೋಮನಾಥನ ಚಿಂತಾಕ್ರಾಂತನಾಗಿ ಅನ್ನೋದಕಾದಿಗಳಂ ಬಿಟ್ಟು ಸೋಮನಾಥನ ನೆನೆಯುತ್ತ ಸೌರಾಷ್ಟ್ರಕ್ಕೆ ಹೊರಟನು ಅನಂತಕಾಲ ನಡೆದು ಸಾಕಾಗಿ ಕುಳಿತು ತವೆಯುತ್ತಲೂ ಮತ್ತು ಮಲಗಿ ಉರುಳುತ್ತಾ ಸೋಮನಾಥನ ನೆನೆಯುತ್ತಾ ಹೋಗುತ್ತಿದ್ದನು. ಆ ಅರಣ್ಯದಲ್ಲಿ ಒಬ್ಬ ಜಂಗಮನ ಲೀಲೆಯಿಂದ ಸೋಮನಾಥನು, ಅಯ್ಯಾ ನೀನು ಯಾರು ಏಕೆ ಹೀಗೆ ಉರುಳುತ್ತಾ ಎಲ್ಲಿಗೆ ಹೋಗುವೆ ಎಂದು ಕೇಳಿದನು. ಆಗ ಶೆಟ್ಟಿಯು ನೋಡಿ ಜೈನರಿಗೂ ತನಗೂ ನಡೆದಿರುವ ವಾದವಿವಾದಗಳನ್ನೂ ಅರಿಕೆ ಮಾಡಿದನು ಅಯ್ಯಾ ಸೌರಾಷ್ಟ್ರವೆಲ್ಲಿ ಸೋಮನಾಥನೆಲ್ಲಿ ನೀನು ತಲುಪುವುದು ಸಾಧ್ಯವೆ, ಬಳಲಬೇಡ ಹಿಂದಕ್ಕೆ ಹೋಗು ಎಂದು ಹೇಳಿದನು. ಸ್ವಾಮಿ ಅವನ ನೆನಹಿನಲ್ಲೇ ನನ್ನ ಪ್ರಾಣ ಅಡಗಿದರೂ ನಾನು ಹಿಂದಿರುಗುವುದಿಲ್ಲ ಎಂದು ಹೇಳಿದನು. ಆಗ ಜಂಗಮನು ಅಯ್ಯಾ ನಾನು ಸೋಮನಾಥನನ್ನು ಇಲ್ಲೇ ತೋರುವೆನು, ನನ್ನ ಜತೆಗೆ ಎದ್ದು ಈ ಎತ್ತರವಾದ ಸ್ಥಳದಲ್ಲಿ ನಿಂತುನೋಡು ಎಂದು ಹೇಳಿದನು. ಆಜ್ಞೆಯಂತೆ ಶೆಟ್ಟಿಯು ನೋಡಿದನು. ಸೋಮನಾಥನ ಗುಡಿಯ ಶಿಖರದ ಹೊಳಪು, ಕಣ್ಣಿಗೆ ರಮ್ಯವಾಗಿ ಶೆಟ್ಟಿಗೆ ಕಾಣಿಸಿತು.

ಶೆಟ್ಟಿಯು ಆನಂದಚಕಿತನಾಗಿ ಬೇಗ ಹೋಗುವೆನೆಂದು ಆತುರಿಸಿದನು. ಅಯ್ಯಾ ನೀನು ಒಪ್ಪಿರುವದಿನಕ್ಕೆ ಮೊದಲೆ, ಸೋಮನಾಥನು ಸಾಸಲಿಗೆ ಬರುವನು, ನೀನು ಹಿಂದಿರುಗು ಎಂದು ಹೇಳಿದನು. ಸೋಮನಾಥನು ಬರುವ ಕುರುಹು ಹೇಗೆ ? ನಾನು ನಂಬುವುದೆಂತು ? ಸ್ವಾಮಿ ಎಂದು ಕೇಳಿದನು. ಸೋಮನಾಥನು ಬಂದು_ನೆಲಸಿದೊಡನೆ ಆ ಜೈನರ ಗುಡಿಯ

ಬಾಗಿಲುಗಳು ಭಂದಾಗುವುದು ಆವಾಗ ನಿನಗೆ ಅದೇ ಕುರುಹಾಗಿ ಸೋಮನಾಥನ ದರ್ಶನ ವಾಗುವುದು ನೀನು ಹೋಗು—ಎಂದು ಹೇಳಿ ಜಂಗಮನು ನಿರ್ವಯಲಾದನು. ಆದಿಶೆಟ್ಟಿಯು ಆಶ್ಚರ್ಯಚಕಿತನಾಗಿ ಓಹೋ! ಈತನು ಸೋಮನಾಥನು ಎಂದು ನಂಬಿ ಹರುಷಿತನಾಗಿ ಹಿಂದಿರುಗಿ ಸಾಸಲಿಗೆ ಬಂದನು. ಜೈನರು ಶೆಟ್ಟಿಯನ್ನು ನೋಡಿ ಚೇಷ್ಟೆಮಾತುಗಳನ್ನು ಆಡಿಕೊಳ್ಳಲು ಪ್ರಾರಂಭಿಸಿದರು ಹೀಗಿರುವಾಗಲೇ ಜೈನರ ಜಿನಗುಡಿಯ ಬಾಗಿಲುಗಳು ಭಂದಾದುವು. ಜೈನರು ಭ್ರಾಂತರಾಗಿ ಎಲ್ಲರು ಸೇರಿ ಬಾಗಿಲುಗಳನ್ನು ತೆಗೆಯಲು, ಅನಂತ ಸಾಧನಗಳಿಂದ ಪ್ರಯತ್ನಪಟ್ಟರೂ ಬಾಗಿಲು ತೆರೆಯಲಿಲ್ಲ. ಆಗ ಜೈನರು ಆದಿಶೆಟ್ಟಿಯು ಮಾಡಿರುವ ಮಾಟ, ಯಾವ ಕಡೆಯೊ ಹೋಗಿದ್ದು ಬಂದಿರುವನು, ಅವನನ್ನು ಎಳೆದು ಕೊಂಡು ಬನ್ನಿ ಮಾಟವು ಗೊತ್ತಾಗುವುದೆಂದು—ಎಳೆದು ತಂದರು, ಆಗ ಆದಿಶೆಟ್ಟಿಯು ಜಿನದೇವಾಲಯದ ಮುಂದೆ ನಿಂದು ಸೋಮನಾಥನನ್ನು ಧ್ಯಾನಿಸಿ ಕದಗಳ ಮೇಲೆ ಕೈಯೂರಿದನು ಆಕ್ಷಣವೆ ಬಾಗಿಲುಗಳು ರಭಸವಾಗಿ ಹಿಂದೆಗೆದವು. ಗರ್ಭ ಗೃಹದ ಮಧ್ಯದಲ್ಲಿ ಆ ಜಿನ ವಿಗ್ರಹಗಳು ತಲೆ ಕೆಳಗಾಗಿ ಮುಂದೆ ಬಿದ್ದಿದ್ದವು ಮೂಲಪೀಠದಲ್ಲಿ ಸೋಮನಾಥನು ಸ್ವಪ್ರಕಾಶಮಾನನಾಗಿ ಎಲ್ಲರಿಗೂ ದರ್ಶನವಿತ್ತನು. ಆಗ ಜಿನದೇವಾಲಯ ಎಂಬ ಹೆಸರು ಹೋಗಿ ಸೋಮನಾಥ ದೇವಾಲಯವಾಯಿತು. ಸಾಸಲು ಆವಾಗ ಶಾಂತ ಬ್ರಹ್ಮಕ್ಷೇತ್ರ. ಎಂಬ ಹೆಸರನ್ನು ಪಡೆಯಿತು ಜೈನರು ಸೋತ ತಪ್ಪಿಗಾಗಿ ತಮ್ಮ ಜಿನ ದೇವರುಗಳನ್ನು ತೆಗೆದುಕೊಂಡು ಸಾಸಲ ಗ್ರಾಮವನ್ನು ಬಿಟ್ಟು ಪೂರ್ವಕ್ಕೆ ಸಾಧಾರಣ ನಾಲ್ಕು ಮೈಲಿ ದೂರದಲ್ಲಿ ನೆಲಸಿದರು. ಅದೇ ಈವಾಗ ಶ್ರವಣ ಬೆಳಗೊಳವೆನಿಸಿ ಪ್ರಸಿದ್ಧಿ ಯಾಗಿದೆ ಎಂದು ಹೇಳುತ್ತಾರೆ. "ಈ ಊರು ಗೋಮಟೇಶ್ವರನ ಗುಡ್ಡದ ಹತ್ತಿರ ಇದೆ."

## ಇನ್ನು ಭೈರವರಾಜನನ್ನು ಕುರಿತು ಹೇಳಿದ ಹೇಳಿಕೆಗಳು.

ಭೈರವರಾಜ (ಭೈರರಾಜಯ್ಯ) ನು ಆಂಧ್ರದೇಶದ ಕಡೆಯಿಂದ ಋಷೀಶ್ವರನಂತೆ ಮಹಾದೇವಿ ಎಂಬ ಹೆಂಡತಿಯಿಂದ ಕೂಡಿದವನಾಗಿ ಬಂದ ಋಷಿ ಎಂದೂ ಈ ಊರಿನಲ್ಲಿ ನೆಲಸಿರುವ ಸೋಮನಾಥನಿಗೂ ಭೈರರಾಜಯ್ಯನಿಗೂ ಪವಾಡಗಳ ವಿಷಯವಾಗಿ ವಾದ ವಿವಾದ ಬೆಳದವೆಂದೂ ಭೈರರಾಜಯ್ಯನು ಗೆದ್ದನೆಂದೂ ಸೋಮನಾಥನಿಗೂ ಮಿಗಿಲಾದ ಪವಾಡ ಪುರುಷನಾದನೆಂದೂ ಸೋಮನಾಥನು ಇವನ ಭಕ್ತಿ ಮಹತ್ವಕ್ಕೆ ಮೆಚ್ಚಿ ನಿಜರೂಪು ದೋರಿ ಕೈಲಾಸಕ್ಕೆ ಕರೆದನೆಂದೂ ನಾನು ಈ ಸಮಯದಲ್ಲಿ ಬರುವುದಿಲ್ಲ. ಜಗತ್ತಿನ ಜನಗಳಿಗೆಲ್ಲ ಕಾಣುವಂತೆ ಬರುವೆನೆಂದು ಹೇಳಿದ ಪ್ರತೀತಿ ಇದೆ. ಆಗ—ಭೈರರಾಜಯ್ಯನು ತನ್ನ ಹೆಂಡತಿ ಮಹಾದೇವಿಯನ್ನು ಕೈಲಾಸಕ್ಕೆ ಕರೆದನೆಂದೂ ನಾನು ಇನ್ನೂ ಕೆಲವುಕಾಲ ಭೂಲೋಕದಲ್ಲಿ ಇರಬೇಕೆಂಬ ಆಸೆ ಇರುವುದಾಗಿ ಹೇಳಿದಳೆಂದೂ ಅವಳಿಗೆ ಸೋಮನಾಥನ ಗುಡಿಯ ಸ್ವಲ್ಪದೂರ (ಊರಮಧ್ಯ)ದಲ್ಲಿ ಒಂದು ಗುಡಿಯನ್ನು ಕಟ್ಟಿಸಿ ಆ ಗುಡಿಯಲ್ಲಿ ಒಂದು ಪ್ರಸಾದದ ಕುಂಡ [illegible]

ಇದರಲ್ಲಿ ನಿನಗೆ ಬೇಕಾದ ಇಷ್ಟಿಯ ಪ್ರಸಾದಗಳು ದೊರೆಯುವುದೆಂದೂ ಸೋಮನಾಥನ ನೆನಹಿನಿಂದ ಕೈಹಾಕಿ ತೆಗೆದುಕೊಳ್ಳಬೇಕೆಂದೂ ಅದನ್ನು ಬಾಯ್ದೆಗೆದು ನೋಡಬಾರದೆಂದೂ ಅಜ್ಞೆಯಿತ್ತು ಸಾಸಲಿಗೆ ಸಾಧಾರಣ ಎರಡು ಫರ್ಲಾಂಗ್ ದೂರದಲ್ಲಿ ಅಗ್ನಿಮೂಲೆಯಲ್ಲಿರುವ ಶಂಭುಲಿಂಗನ ದೇವಸ್ಥಾನದ ಮೈದಾನದಲ್ಲಿ ಎಲ್ಲಾ ಜನಗಳು ಕಾಣುವಂತೆ ಕಾಯಸಹಿತ ಕೈಲಾಸಕ್ಕೆ ಹೋದನೆಂದೂ, ಅಲ್ಲಿ ದಕ್ಷಿಣದಲ್ಲಿ ಸಾಧಾರಣ ಎಂಟು ಅಡಿ ಎತ್ತರದ ಅಡ್ಡಗಲ್ಲಿನ ಮೇಲೆ ಕುಳಿತಿರುವ ಒಂದು ಕಲ್ಲಿನ ಬಸವನು ಸ್ವಲ್ಪ ತಲೆ ಎತ್ತಿದಹಾಗೆ ಇದೆ, ಅದಕ್ಕೆ ನಾನು ಹೋದುದಕ್ಕೆ ನೀನು ಸಾಕ್ಷಿಯಾಗಿರು ಎಂದು ಹೇಳಿ ಹೋದನೆಂದು ಪ್ರತೀತಿ.

ಈ ಕಡೆ ಮಹಾದೇವಿ ಕೆಲವು ದಿನಗಳಮೇಲೆ ಪ್ರಸಾದ ಕುಂಡದ ಒಳಗೆ ಏನಿರುವುದೋ'' ನೋಡಬೇಕೆಂಬ ಇಚ್ಛೆಯಾಯಿತೆಂದೂ ನೋಡಿದನಂತರ ಮಹಾದೇವಿಗೆ ದೊರೆಯುತ್ತಿದ್ದ ಪರುಷ ಪ್ರಸಾದವು ಬಯಲಾಯಿತ್ತೆಂದೂ ಅವಳು ಸಹ ಸೋಮನಾಥನಲ್ಲಿ ಬೆರೆದಳೆಂದು ಪ್ರತೀತಿ ಆ ಗುಡಿಯು ಈಗ ಸಿಥಿಲವಾಗಿ ಕಲ್ಲುಗಳೆಲ್ಲ ಕಳೆದುಬಿದ್ದು ಭೂ ಸಮವಾಗಿದೆ.

## ಇನ್ನು ಸೋಮನಾಥನ ಗುಡಿಯಲ್ಲಿರುವ ದೃಶ್ಯಗಳ ವಿಚಾರ

ಮಹಾದೇವಿಯು ಬೈಲಾದ ತದನಂತರ ಪ್ರಸಾದಕುಂಡದ ಗುಡಿಯಲ್ಲಿ ಒಂದು ವಿಭೂತಿಯ ಘಟ್ಟಿ ಇದ್ದಿತೆಂದೂ ಅದನ್ನು ತೆಗೆದುಕೊಂಡು ಬಂದು ಸೋಮನಾಥನ ಪೀಠದ ಬಲದ ಭಾಗದಲ್ಲಿ ಇಡಲಾಗಿದೆ ಅದು ಸಾ. ಮುಕ್ಕಾಲು ಅಡಿ ಎತ್ತರವಾಗಿಯೂ ಅರ್ಧ ಅಡಿ ಅಗಲವಾಗಿಯೂ ಹೊರಗಣ ಭಾಗವೆಲ್ಲ ಕಪ್ಪಾಗಿ ಮೇಲುಭಾಗ ಬಿಳುಪಾಗಿದೆ. ಈ ವಿಭೂತಿಯನ್ನು ಸರ್ಪ ಕಚ್ಚಿದವರಿಗೆ ಮಾತ್ರ ಬಿಲ್ವಪತ್ರೆ ದಳಗಳನ್ನು ತೆಗೆದು ಅದರ ಮೇಲೆ ಉಜ್ಜಿ (ತಿಕ್ಕಿ) ಆ ದಳಗಳನ್ನು ಪ್ರಸಾದವೆಂದು ಬಾಯಿಗೆ ಹಾಕಿ ತಿನ್ನಿಸುವುದಾಗಿಯೂ ಸ್ವಲ್ಪ ಹೊತ್ತಿನಲ್ಲೆ ವಿಷಜ್ವಾಲೆ ಇಳಿದು ಸುಖವಾಗಿ ಹೋಗುವರೆಂದೂ ಈಗಲೂ ಬಹಳ ದೂರಗಳಿಂದ ಜನಗಳು ಬರುವರೆಂದೂ ಈ ಭಸ್ಮವನ್ನು ಇದಕ್ಕಲ್ಲದೆ, ದೇವರಿಗಾಗಲೀ ಬೇರೆ ವ್ಯಾಧಿಗಳಿಗಾಗಲೀ ಈ ಭಸ್ಮವನ್ನು ಉಪಯೋಗಿಸುವುದಿಲ್ಲವೆಂದು ಹೇಳುತ್ತಾರೆ ಸೋಮನಾಥನ ಮೊದಲ ನವರಂಗ ಅಂಕಣದ ದಕ್ಷಿಣಭಾಗದಲ್ಲಿ ಪುರಾತನವಾದ ಒಂದು ಸಮಾಧಿಯು ಸಹ ಇದೆ.

ಆ ದೇವಸ್ಥಾನದ ದಕ್ಷಿಣಭಾಗದಲ್ಲಿ ಸಾ. ನೂರ ಇಪ್ಪತ್ತು ಗಜದ ದೂರದಲ್ಲಿ ಒಂದು ಕೊಳ ಇದೆ. ಅದು ಸಾಧಾರಣವಾದ ಕಟ್ಟಡದಿಂದ ಕೂಡಿದೆ, ಸುತ್ತಲೂ ಕಾಂಪೋಂಡಿನಂತೆ. ಕಲ್ಲುಗಳನ್ನು ನಿಲ್ಲಿಸಿದೆ. ಈಶಾನ್ಯಮೂಲೆಯಲ್ಲಿ ಒಬ್ಬರು ಹೋಗಿ ಬರುವಂತೆ ಕನ್ನವಿದೆ. ನಾಗರ ಸಿಕ್ಕು ಮೊದಲಾದ ಚರ್ಮವ್ಯಾಧಿಯುಳ್ಳವರು ಸೋಮನಾಥನಿಗೆ ಅರಿಕೆ ಇಟ್ಟು ಒಪ್ಪಿಸಿ ನೀರಿನಲ್ಲಿ ಮುಳುಗಿಹೋದರೆ ! ಗುಣವಾಗುವುದೆಂದೂ ಈವಾಗ ನೀರನ್ನು ಮೇಲಕ್ಕೆ ತಂದು ತಲೆಯಮೇಲೆ ಹುಯ್ಯುವುದಾಗಿ ಹೇಳುತ್ತಾರೆ. (ಇದು ಊರಿನ ಕಟ್ಟು)ಈ ಕೊಳದ ದಕ್ಷಿಣ ಭಾಗದಲ್ಲಿ ಆರು ಕಲ್ಲುಗಳನ್ನು ಭೂಮಿಯಲ್ಲಿ ನಟ್ಟಿದೆ, ಅವುಗಳಲ್ಲಿ ಸೋಮನಾಥ ಲಿಂಗವನ್ನು ಆದಿಶೆಟ್ಟಿ ಪೂಜೆಮಾಡುತ್ತಿರುವ ಹಾಗೂ ಮತ್ತೊಂದು ಕಲ್ಲಿನಲ್ಲಿ ಲಿಂಗ ಬಸವ ಇದ್ದು ಅದರ ಮಧ್ಯದಲ್ಲಿ ಅಗ್ಗಣಿ ಹೊನ್ನಮ್ಮ ತಪಸ್ಸಿನಲ್ಲಿರುವಂತೆ ಕೈಮುಗಿದು ಕುಂತಿರು

ವಂತೆ ಇದೆ. ಅದರ ಅಡಿಯಲ್ಲಿ ಭೈರವರಾಜನು ಒಂದು ಕುದುರೆಮೇಲೆ ತನ್ನ ಮಂತ್ರಿಯೊಡನೆ ಸ್ವಾರಿ ಹೋಗುವಂತೆ ಇದೆ. ಎಲ್ಲಾ ಕಲ್ಲುಗಳಲ್ಲಿಯೂ ಖಡ್ಗ, ಬಿಲ್ಲು, ಹಿಡಿದು ಯುದ್ಧ ಕಾಯುವಂತೆ ಇವೆ ಇವುಗಳನ್ನು ಓದಿದವರಿಗೆ ಫೋಟೋ ತೆಗೆದು ಸೇರಿಸಬೇಕಾಗಿತ್ತು ಎಂದು ಅರಿವಾಗಬಹುದು. ಕಥಾನಾಯಕನ ಮತ್ತು ಕವಿಯ ಸ್ಥಳಗಳು ಸರಿಯಾದ ರೀತಿಯಿಂದ ಕಾಣಲಿಲ್ಲವಾದಕಾರಣ ಬಿಡಲಾಗಿದೆ.

ಸೋಮನಾಥನ ಗುಡಿಯ ಮಧ್ಯ ನವರಂಗದ ಬಲದ ಭಾಗದಲ್ಲಿ ಒಳಗಡೆ ಹೋಗುವಾಗ ಪ್ರಥಮದಲ್ಲಿ ರುದ್ರದೇವರೆಂದೂ ಅವಕ್ಕೆ ಗಡ್ಡವೂ ರುದ್ರಾಕ್ಷಿ ಮಾಲೆಯೂ ರುದ್ರಾಕ್ಷಿ ಕಿರೀಟವೂ ಇರುವಂತೆ ಕಲ್ಲಿನ ವಿಗ್ರಹ ಕುಳಿತಿರುವಂತೆ ಇದೆ. ದ್ವಿತೀಯದಲ್ಲಿ ಆದಿಶೆಟ್ಟಿ ವಿಗ್ರಹವೆಂದೂ ರುದ್ರಾಕ್ಷಿಮಾಲೆಯಿಂದ ಕೂಡಿ ಕೈಮುಗಿದು ಕುಳಿತಿರುವಂತೆ ಇದೆ ತೃತೀಯದಲ್ಲಿ ಅಗ್ಗಣಿ ಹೊನ್ನಮ್ಮನೆಂದೂ ರುದ್ರಾಕ್ಷಿಸರದೊಡನೆ ಕುಳಿತು ಕೈಮುಗಿದಿರುವಂತೆ ಇದೆ. ಚತುರ್ಥದಲ್ಲಿ ಕೋರಿಶೆಟ್ಟಿ ವಿಗ್ರಹವೆಂದೂ ಅದು ಅದೇರೀತಿಯಿಂದ ಕುಳಿತಿದೆ ಈ ಕೋರಿಶೆಟ್ಟಿಯ ಪೀಳಿಗೆಯವರೆ ಪೂಜೆಮಾಡುತ್ತಾಬಂದಿರುವರೆಂದೂ, ಕೋರಿಶೆಟ್ಟಿಯೆ ಆ ಶಂಭುಲಿಂಗನ ದೇವಸ್ಥಾನವನ್ನು ಕಟ್ಟಿಸಿದನೆಂದೂ ಪ್ರತೀತಿ ಈ ಶಂಭುಲಿಂಗನ ದೇವಸ್ಥಾನದ ಅಗ್ನಿಮೂಲೆಯಲ್ಲಿ ಒಂದು ಕಲ್ಲಿನ ಗಾಣವಿದೆ ಅದಕ್ಕೆ ಎತ್ತುಗಳನ್ನು ಕಟ್ಟಿ ಎಣ್ಣೆ ತೆಗೆಯುವುದಿಲ್ಲವೆಂದೂ ಲಿಂಗಾಂಗಿಗಳಾದವರೆ' ಗಾಣ ತಿರುಗಿಸಿ ಎಣ್ಣೆತೆಗೆದು ಶಂಭುಲಿಂಗನ ಮತ್ತು ಸೋಮನಾಥನ ಅಭಿಷೇಕಕ್ಕೆ ಉಪಯೋಗಿಸುವರೆಂದು ಹೇಳಿದರು.

ಸೋಮನಾಥನ ಎಡೆಗೆ ಬಹಳ ನೇಮದಿಂದಲೂ, ಪಕ್ಕಾ ಮಡಿಯಿಂದಲೂ ಪೂಜಾರಿಗಳು ವಾಸವಿಲ್ಲದೆ ಇರುವ ಬೇರೆ ಗೃಹದಲ್ಲಿ ಅಡಿಗೆಮಾಡಬೇಕೆಂದೂ ಲಿಂಗಾಯಿತರಾದರೂ ತಮ್ಮ ಮನೆಯಲ್ಲಿ ಮಾಡಿದ ಶಾಖಾದಿಗಳನ್ನು ಎಡೆಗೆ ಇಡಕೂಡದೆಂದೂ, ಗರ್ಭಗೃಹಕ್ಕೆ ಪೂಜಾರಿಗಳಲ್ಲದೆ ಇನ್ನಾರು ಹೋಗಬಾರದೆಂದೂ ಹೇಳುತ್ತಾರೆ. ಮತ್ತು ಕಾರದ ಪದಾರ್ಥಗಳನ್ನು ಎಡೆಗೆ ಇರಿಸಲಾಗದೆಂದೂ ಅನ್ನ, ಹಾಲು, ಮೊಸರು, ಜೇನು, ಸಕ್ಕರೆ, ಫಲ ಮೊದಲಾದ ಯಾವ ಪದಾರ್ಥಗಳನ್ನಾದರೂ ಎಡೆಗೆ ಉಪಯೋಗಿಸುವುದಾಗಿ ಹೇಳಿದರು. ಗರ್ಭಗೃಹದ ದೀಪಸ್ತಂಭಕ್ಕೆ ಹರಳೆಣ್ಣೆ ಉಪಯೋಗ ಮಾಡುವುದಿಲ್ಲವೆಂದೂ, ಬ್ರಾಹ್ಮಣ ಮುಸಲ್ಮಾನರಾದಿಯಾಗಿ ಸೋಮನಾಥನಿಗೆ ಅರಿಕೆ, ಪೂಜೆ, ಅರ್ಪಿಸುವರೆಂದು ಪ್ರತೀತಿ ಜಾತ್ರೆಯು ಪ್ರತಿ ವರುಷ ಚೈತ್ರ ಶುದ್ಧದ ಕೊನೆಯಲ್ಲಿ ನಡೆಯುವುದಾಗಿ ತಿಳುಹಿಸಿದರು. ಈ ಸೋಮನಾಥನಿಗೆ ಹಾಲಸೋಮನಾಥನೆಂದು ಪರ್ಯಾಯನಾಮವಿರುವುದೆಂದು ಗೊತ್ತಾಗುತ್ತಿದೆ.

ಈ ದೇವಾಲಯಗಳೆರಡರಲ್ಲೂ ಒಂದೊಂದು ಶಾಸನಗಳು ಸಹ ಇರುತ್ತವೆ ಇದನ್ನು ಮೈಸೂರು ಆರ್ಕಿಲಾಜಿಕಲ್ ಡಿಪಾರ್ಟ್‌ಮೆಂಟ್ ಇವರು ೧೯೧೪-೧೫ ವರ್ಷದ ವರದಿ-ಶಾಸನ-ನಂ. ೬೨. ಪುಟ ೨೨. ಪ್ಯಾರಾ ೨೮ ರಲ್ಲಿ ತಿಳಿಸಿರುತ್ತಾರೆ ಈ ಎಲ್ಲಾ ಪರಿಶೀಲನೆಯನ್ನು ತಾ|| ೨೧-೩-೧೯೫೪ ರಲ್ಲಿ ಮಾಡಿದ ವರದಿ

ಸಂಪಾದಕರು:

# ಕಥಾ ಸಾರಾಂಶ

ಸಕಲ ಸಂಪತ್ತುಗಳಿಂದ ಕೂಡಿದ ಪೋಪ್ಪೂರಿಗೆ ಅಧಿಪತಿಯಾದ ಮತ್ತು ಕೀರ್ತಿವಂತನಾದ ಸಂಗಮರಾಜನ ಪುತ್ರ ಭೈರವರಾಜನು, ಅವನ ಹೆಂಡತಿ ಮಹಾದೇವಿಯೂ, ಸಕಲ ವೈಭವದಿಂದ ದಾನಶೀಲರಾಗಿರುವಾಗ, ಒಂದಾನೊಂದು ದಿನದಲ್ಲಿ ವೇದ, ಆಗಮ, ಶಾಸ್ತ್ರ, ಪುರಾಣಗಳನ್ನು ಬಲ್ಲ ಪಂಡಿತರನ್ನು ತನ್ನ ಆಸ್ಥಾನಕ್ಕೆ ಕರೆಯಿಸಿ, ರಾಜರುಗಳಲ್ಲಿ ದಾನಶೀಲರಾಗಿ ಸತ್ಯದಿಂದ ಕೀರ್ತಿಗಳಿಸಿದವರಾರು, ಎಂದು ಪ್ರಸ್ತಾಪಿಸುವನು ಆಗ ಒಬ್ಬ ಪುರಾಣಿಯು ಹರಿಶ್ಚಂದ್ರ, ನಳನೃಪತಿ, ಪುರಪುಜ್ಞರಾಯ ಮುಂತಾದ ಕೆಲವು ರಾಜರುಗಳ ಕಥೆಗಳನ್ನೂ ಹೇಳಿ, ಕರ್ಣನೊಬ್ಬನೇ ಅತಿ ತ್ಯಾಗಿಯಾಗಿ ಕೀರ್ತಿಗಳಿಸಿದನೆಂದು ಹೇಳುವನು. (ಸಂ ೧–ಪ. ೮೬–೧೦೩)

ರಾಕ್ಷಸರುಗಳಲ್ಲಿ ನಿತ್ಯಪದ ಗಳಿಸಿದವರಾರು ಮತ್ತು ಶೈವರುಗಳಲ್ಲಿ ಮುಕ್ತಿ ಗಳಿಸಿದವರು ಆರಾರು, ಎಂದು ಕೇಳುವಲ್ಲಿ ಕರಿಕಾಲಚೋಳ ಮುಂತಾದ ಚೋಳರ ಕಥೆಗಳನ್ನು ತುಸುವಾಗಿ ಹೇಳುವನು (ಸಂ ೧–ಪ ೧೧೯-೨೧೩) ಮುಂದೆ ಕಳಚಂಗ ಪೆರುಮಾಳೆಯರ ಚರಿತೆಯನ್ನು ಕೇಳಲು ಹೇಳಿ, ಸತ್ಯೇಂದ್ರಚೋಳನ ಕಥೆಯನ್ನೂ ವಿವರಿಸಿ, ವೀರಪಾಂಡ್ಯನ ಕಥೆಯನ್ನು ಹೇಳುವನು (ಸಂ. ೧–ಪ ೩೨೮.) ರುದ್ರಪಶುಪತಿ, ನಕ್ಕನಾರು, ಶಿವರಾತ್ರಿ ಸಂಕಣ್ಣ ಮುಂತಾದ ಕಥೆಗಳನ್ನು ಹೇಳುವಾಗ, ಭೈರವರಾಜನು ಕೇಳುತ್ತಾನೆ ಅಯ್ಯಾ ಪುರಾಣಿ ಶೈವರುಗಳ ಭೇದಾಭೇದಗಳಿಗೆ ಅತಿ ಮಿಗಿಲಾದ ವೀರ ಶೈವರಲ್ಲಿ ಲಿಂಗಾಂಗಸಾಮರಸ್ಯದಿಂದ ಮೋಕ್ಷರೂಪಿಗಳಾದ ಶಿವಶರಣರು ಆರಾರೆಂದು ಬೆಸಗೊಳ್ಳಲು, ಉಂಡು ಉಪವಾಸಿ ಒಳಸಿ ಬ್ರಂಹಚಾರಿಯರ ಕಥೆ ಪ್ರಾರಂಭಮಾಡಿ, ಅನಂತ ಶಿವಶರಣರ ಪರಿಚಯುವನ್ನು ಸಂಕ್ಷಿಪ್ತವಾಗಿ ಹೇಳುವನು. (ಸಂ ೧–ಪ ೩೬೫) ಮುಂದೆ ಮೋಳಿಗೆಮಾರಯ್ಯಗಳ ಕಥೆಯನ್ನು ವಿಸ್ತಾರವಾಗಿ ಹೇಳಿದುದನ್ನು ಕೇಳಿ, ಆಹ! ಈ ಸಂಸಾರಬಂಧಮೋಚನವು ತೊಲಗಿ ನಾನು ಎಂದಿಗೆ ಭಕ್ತನೆನಿಸಿಕೊಳ್ಳುವೆನೋ ಎಂದು ಪ್ರಲಾಪಿಸುವನು. ಅಂತಲ್ಲಿ ಒಂದು ದಿನ ಸ್ವಪ್ನದಲ್ಲಿ ಸೋಮನಾಥನು ಅಯ್ಯಾ ರಾಜ

ನೀನು ಮಲ್ಲಿಪಟ್ಟಣಕ್ಕೆ ನಡೆ, ಅಲ್ಲಿ ನಿನಗೆ ಶ್ರೀ ಗುರು ಕೃಪೆಯುಂಟಾಗುವುದು. ಪುನಹ ಸಾಸಲಿಗೆ ಬಂದು ಸುಖದಿಂದಿರುವಾಗಲೇ ಕೈಲಾಸಕ್ಕೆ ಕರೆದೊಯ್ಯುವೆನು ಎಂದು ಸ್ವಪ್ನದಲ್ಲಿ ಸೋಮನಾಥನು ಹೇಳಿದಂತೆ ಆಗಲು, ಭವಶರಧಿಯನ್ನು ದಾಂಟುವ ಸುಯೋಗವು ಬಂದೊದಗಿತೆಂದು, ಆನಂದದಿಂದ ಮಹಾದೇವಿಯೊಡಗೂಡಿ ಸೋಮನಾಥನ ಧ್ಯಾನವನ್ನು ಮನದಲ್ಲಿ ಧರಿಸಿ ವೇಗದಿಂದ ಹೊರ ಹೊರಡುವರು ಮಲ್ಲಿಪಟ್ಟಣಕ್ಕೆ ದಂಪತಿಗಳೀರ್ವರು ಬಂದು ಚಂದ್ರಶೇಖರನನ್ನು ಕಂಡು ಸಾಷ್ಟಾಂಗವೆರಗುವರು. ಶಿವನು ಆಶೀರ್ವದಿಸಿ ಒಂದು ಪುಷ್ಪವನ್ನು ಕೊಟ್ಟು ಸಂಮ್ಮತಿಸುವನು.

ಶಿವಸನ್ನಿಧಿಯಲ್ಲಿ ಸಂತೋಷದಿಂದಿರುವಾಗ ವೈಹಾಳಿಹೋಗಬೇಕೆಂದು ಹೊರಡುವನು. ಮಲ್ಲಿಪಟ್ಟಣದ ಅರಸಾದ ರಾಮರಾಜನು, ಇವನ ವೈಹಾಳಿಯನ್ನು ಕಾಣುವನು. ಭೈರವರಾಜನ ಪರಾಕ್ರಮದ ಬಿರುದುಗಳನ್ನು ಜನರು ಕೊಂಡಾಡುತಿರೆ ರಾಮರಾಜನ ಭಟರು ತಡೆದು ನಿಲ್ಲಿಸುವರು.

ಭೈರವರಾಜನು ರಾಮರಾಜನ ಕೂಡೆ ಯುದ್ಧ ಬೆಳೆಸುವನು. ಭೈರವ ರಾಜನ ಪರಾಕ್ರಮಕ್ಕೆ ರಾಮರಾಜನು ಮೆಚ್ಚಿ ಉಡುಗೊರೆಗಳನ್ನು ಕೊಟ್ಟು ಸ್ನೇಹಿತನಾಗುವನು. ಆ ರಾಮರಾಜನನ್ನು, ಭೈರವರಾಜ ತನ್ನ ಸಹಾಯಕ್ಕೆ ತೆಗೆದುಕೊಂಡು, ವನಬೇಂಟೆಗೆ ಹೊರಡುವನು ಅಲ್ಲಿ ಒಂದು ಹರಿಣವನ್ನೊ ಹರಣಗಳೆವನು. (ಸಂ. ೩–ಪ. ೫–೩೯.)

ರಾಮರಾಜನ ಅಪೇಕ್ಷೆಯಂತೆ ಭೈರವರಾಜನು ಧನಧಾನ್ಯ ವಸ್ತ್ರವಾಹನಾದಿ ಉಪಚಾರಗಳನ್ನೆಲ್ಲ ಕೈಕೊಂಡು, ನಾನು ಸಾಸಲಿಂದ ಬಂದು ಗುರುವಾಗಿ ನಿನಗೆ ಲಿಂಗಧಾರಣ ಮಾಡುವೆನೆಂದು ಬೀಳ್ಕೊಡುವನು.

ಹಾಲಸೋಮನಾಥನ ಪ್ರಲಾಪದಿಂದ ಪ್ರಸನ್ನತೆಯನ್ನು ಪಡೆಯುವನು ಇವನ ದೈನ್ಯಭಾವಕ್ಕೆ ಸೋಮನಾಥನು ಭೈರವರಾಜನಿಗೆ ಮಂತ್ರೋಪದೇಶ ಮಾಡಿ, ನಿನಗೆ ನಾನು ಗುರು ನೀನು ಜಗಕೆಲ್ಲ ಗುರುವಾಗು ಎಂದು ಹರಸುವನು. (ಸಂ. ೩–ಪ. ೧೧೮–೧೨೧.) ಭೈರವರಾಜನಿಗೂ ಪತ್ನಿ ಮಹಾದೇವಿಗೂ ಅಷ್ಟಾವರ್ಣ, ಷಟ್ಸ್ಥಳ, ಪಂಚಾಚಾರ, ಲಿಂಗಾಂಗ ಸಾಮರಸ್ಯದ ಬೋಧೆಯನ್ನು ಬೋಧಿಸಿ ಸೋಮನಾಥನು ಹೋಗುವನು. (ಸಂ. ೩–ಪ. ೧೫೬–೧೬೩)

ಗುರು ನೆನಹಿನಿಂದ ಸಾಸಲಿಗೆ ಬರುವಾಗ ಹೇಮಾವತಿಯ ಪ್ರವಾಹವು ಅಡ್ಡ ಇರುವುದನ್ನು ತಡೆದು ಶಿವಗಣಸಹಿತ ಭಕ್ತರೊಡನೆ ಹೊರಗೆ ಬರುವನು ಮಲ್ಲಿಪಟ್ಟಣದಿಂದ ಬಂದಿದ್ದ ಸೇನೆ ಮತ್ತು ಜನಸಮೂಹವನ್ನು ಹಿಂದಕ್ಕೆ ಬೀಳ್ಕೊಡುವನು. ಈ ಕಡೆ ಸಾಸಲಿಗೆ ಬರುವ ಮುನ್ನ ಜಕ್ಕಣಾರ್ಯನಿಗೆ ಭೈರವೇಶ್ವರನನ್ನು ಇದುರುಗೊಳ್ಳಿ ಎಂದು ಸೋಮನಾಥನು ಹೇಳುವನು ಜಕ್ಕಣಾರ್ಯನು ಸಕಲ ಶೋಭನ ಸನ್ನಾಹದೊಡನೆ ಭಕ್ತಮಹಾತ್ಮರರ ಸಂಘಣಿಯಿಂದ ಇದುರುಗೊಳ್ಳುವನು. (ಸಂ. ೩–ಪ. ೧೯೮–೨೦೫.) ಸೋಮನಾಥನ ಧ್ಯಾನಪರನಾಗಿ ಸನ್ನಿಧಿಯಲ್ಲಿ ಇರುವಾಗ ಕೆಲವು ದಿನಗಳಲ್ಲಿಯೆ ಸೋಮನಾಥನು ಅಯ್ಯಾ ರಾಜ, ನಿನಗೆ ಒಂದು ನಿರ್ಮಲವಾದ ಲಿಂಗ ಮುದ್ರಾಂಕಿತ ಗೃಹವನ್ನು ಕೊಡುವೆನು, ಅಲ್ಲಿ ನೀನು ಜಂಗಮ ದಾಸೋಹ ವನ್ನು ಮಾಡು ಎಂದು ಬೀಳ್ಕೊಡುವನು. (ಸಂ. ೪–ಪ. ೧೩ )

ಭೈರವರಾಜನ ಭಕ್ತಿಯ ಖ್ಯಾತಿಯು ಎಲ್ಲಾ ಕಡೆಯು ಆವರಿಸಿದ ಪ್ರಯುಕ್ತ ಮಹಾತ್ಮರು ಲಿಂಗಾನುಭಾವಿಗಳು ಮತ್ತು ಶಿವಶರಣರ ತಂಡೋಪತಂಡವು ಬಂದು ಸೇರುವುದು. ಭೈರವರಾಜನು ಮಹಾದೇವಿಯರು ಸ್ವಲ್ಪವು ಬೇಸರವಿಲ್ಲದೆ ಜಂಗಮ ತೃಪ್ತಿಪಡಿಸುತ್ತ ಏನೇನು ಬೇಡುವರೊ ಅದನ್ನೆಲ್ಲ ಮನದಣಿಯ ಕೊಡುವರು. ಭೈರವರಾಜನ ಭಕ್ತಿಗೆ ಸೋಮ ನಾಥನು ಮೆಚ್ಚಿ ಜಂಗಮ ಲೀಲೆಯಿಂ ಬಂದು ಮಗನೆ! ನಿನ್ನ ಭಕ್ತಿಗೂ ನಿನ್ನ ನಿಷ್ಠೆಗೂ ನಾನು ಮೆಚ್ಚಿದೆನು. ನೀ ನೆನೆದ ಕಾರ್ಯಗಳು ಕೈಗೂಡಲಿ, ಮತ್ತು ತಪನಿಧಿಯು ಕುಂದದಿರಲಿ, ಪಾರ್ವತೀವಲ್ಲಭನ ಕರುಣವು ನಿನಗೆ ಹೆಚ್ಚಾ ಗಿರಲಿ, ಎಂದು ಜಂಗಮ ಲೀಲೆಯ ಸೋಮನಾಥನು ಹರಸಿ ಹೋಗುವನು. (ಸಂ. ೪–ಪ. ೩೦.) ಭೈರವರಾಜನು ದಾಸೋಹದಲ್ಲಿ ನಿರತನಾಗಿಯೂ, ಇಷ್ಟಲಿಂಗಾರ್ಚನೆಯಲ್ಲಿ ನಿಷ್ಠನಾಗಿ ಗುರುಸ್ತೋತ್ರಪರನಾಗುವನು. (ಸಂ. ೪–ಪ. ೧೦೧.)

ಸೋಮನಾಥನು ಇವರ ಮನ ಪರೀಕ್ಷೆಗಾಗಿ ಆಭರಣಗಳೊಳಗೆ ಒಂದು ಸರ್ಪವನ್ನು ಕಳುಹುವನು. ಆ ಆಭರಣವಿಟ್ಟು ನೋಡುವಲ್ಲಿ ಸರ್ಪವು ಆರ್ಭಟಿಸಿ ಹೂವ್ವಿನ ತೋಟದಕಡೆ ಹರಿಯುವುದು. ಓಹೊ!

ಈ ಭುಜಂಗನಿಗೆ ಬಹಳ ಹಸಿವಾಗಿದೆಯೆಂದು ಭೈರವರಾಜನು ಹತ್ತಿರಕ್ಕೆ ಬರುವನು. ಆ ಸರ್ಪವು ನೋಡಿ ಅವನ ಪಾದದ ಬೆರಳನ್ನು ಕಚ್ಚಿ ವಿಷ ಪ್ರವಿಸುವುದನ್ನು ನೋಡಿ ಭೈರವರಾಜನು ಹಾಹ!! ಹಸುವು ನಿಲ್ಲಲಿ ತೃಪ್ತಿ ಹೊಂದಲಿಯೆಂದು ಸುಮ್ಮನೆ ನಿಲ್ಲುವನು. ಸರ್ಪವು ತನಗೆ ತಾನೆ ದಣಿದು ಮುಂದಕ್ಕೆ ಹೊರಟುಹೋಗುವುದು. ಭೈರವರಾಜನು ಸುಖವಿರಲಿತ್ತ ಸರ್ಪವು ಪ್ರಾಣಬಿಟ್ಟಿರುವುದನ್ನು ಜನರು ನೋಡಿ ಹೇಳುವರು ಭೈರವ ರಾಜನ ಮನನೊಂದು ಭಕ್ತಮಹೇಶ್ವರರೊಡಗೂಡಿ ಬಂದು ಹೆಣವಾಗಿರುವ ಸರ್ಪವನ್ನು ನೋಡಿ ಶ್ರೀ ಗುರುಧ್ಯಾನದಿಂದ ಮೈ ಮುಟ್ಟಿ ಸವರುವನು ಆಗ ಸರ್ಪವು ಹೆಡೆಯೆತ್ತಿನೋಡಲು, ಮುಂದಕ್ಕೆ ಹೋಗು ಎಂದು ಹೇಳುವನು. ಅದು ಹೋಗುವುದು. ಜನರು ಕೊಂಡಾಡುವರು (ಸಂ ೪–ಪ ೧೧೨-೧೧೮.)

ಮತ್ತೊಂದು ದಿನ ಭೈರವರಾಜನು ಶಿವಾನುಭವಗೋಷ್ಠಿಯಲ್ಲಿರುವಾಗ, ಸೋಮನಾಥನು ಪರಾಕ್ರಮಿಯಾದ ಒಬ್ಬ ಜಂಗಮನನ್ನು ನಿರ್ಮಿಸಿ, ನೀನು ಭೈರವರಾಜನಲ್ಲಿಗೆ ಹೋಗಿ ಉಗ್ರಕೋಪ ಬರುವಹಾಗೆ ಮಾತನಾಡಿ ನನ್ನ ಕೂಡೆ ಯುದ್ಧಮಾಡು ಎಂದು ಕೇಳುವಂತೆ ಹೇಳಿ ಕಳುಹುವನು ಅದರಂತೆ ಜಂಗಮನು ನುಡಿಯುವನು.

ಶಿವ ಶಿವ! ಜಂಗಮರಲ್ಲಿ ಯುದ್ಧವೆ!! ನಾನು ಒಲ್ಲೆಯೆಂದು ಭೈರವರಾಜನು ಹೇಳುವನು. ಜಂಗಮನು ಆಣೆ ಇಡುವನು. ಜಂಗಮರ ಇಷ್ಟದಂತೆ ನಡೆಯಬೇಕೆಂದು ಸೋಮನಾಥನ ಆಜ್ಞೆಯಿರುವುದು, ಮೀರಲು ಶಕ್ಯವಿಲ್ಲ ಇದು ನಿನ್ನ ಆಜ್ಞೆ ಎಂದು ಭಾವಿಸಿ, ಸುರಗಿಯನ್ನು ಪಿಡಿದು ಯುದ್ಧಪ್ರಾರಂಭಿಸುವನು. ಸುರಗಿಯ ಪೆಟ್ಟನಿಂದ ಉದರವು ಸೀಳಿ ಜಂಗಮನು ಮಡಿದುಹೋಗುವನು. ಓ ಹೊ! ಜಂಗಮನನ್ನು ಕೊಂದವನು ಭಕ್ತನೆ !! ಎಂದು ಕೆಲವರು ಕಠಿಣವಾಗಿ ನುಡಿಯುವರು ಅರ್ಜುನನ ಹೊಡೆತಕ್ಕೆ ಶಿವನು ಗುರಿಯಾಗಲಿಲ್ಲವೆ ಎಂದು ಕೆಲವರು ಹೇಳುವರು ಶಿವಾಜ್ಞೆ ಮೀರಬಾರದೆಂದು ಕೆಲವರು ನುಡಿಯುವರು ಈ ಕಡೆ ಪತ್ನಿ ಮಹಾದೇವಿಯು ಅಡಿಗೆಯಾಯಿತು, ಜಂಗಮರನ್ನು ಆಪ್ಯಾಯನಕ್ಕೆ ಕರೆದು ಕೊಂಡು ಬರಬೇಕೆಂದು ಹೇಳುವಳು. ಭೈರವರಾಜನು ಗಣಸಮೂಹ

ದೆಡೆಗೆ ಬಂದು ಸಾಷ್ಟಾಂಗವೆರಗಿ ಕರೆಯುವನು. ಛೀ! ಜಂಗಮದ್ರೋಹಿ, ಪ್ರಸಾದಕ್ಕೆ ಬರುವುದುಚಿತವೆ!! ಎಂದು ಕನಲುವರು. ದೇವ ನಿಮ್ಮಾಜ್ಞೆ ಯಲ್ಲದೆ ನಾನು ಮೀರಿರುವುದಿಲ್ಲ, ಆ ಜಂಗಮರು ಬರುವರು. ತಾವು ಚಿತ್ತೈಸಬೇಕು ಎಂದು ಹೊರಡಿಸುವನು. ಇತ್ತ ಬಿದ್ದಿರುವ ಜಂಗಮದ ಬಳಿಗೆ ಬಂದು ಶಿವಶರಣರು ಬಂದಿರುವರು. ಅವರೊಕ್ಕ ಪ್ರಸಾದವನ್ನು ಕೊಳ್ಳುವುದಕ್ಕೆ ಎದ್ದು ಬರಬೇಕೆಂದು ನುಡಿದು ಮಣಿಯುವನು. ಆಗ ಜಂಗಮನು ಮೈಮುರಿ ದೆದ್ದು ಬಂದು ಶರಣರಿಗೆ ಸಾಷ್ಟಾಂಗವೆರಗುವನು ಶರಣರು ಉಘೆ! ಉಘೆ!! ಎಂದು ಹೊಗಳುವರು. (ಸಂ ೪-ಪ. ೧೧೯-೧೪೬.)

ಮತ್ತೊಂದುದಿನ ಭೈರವರಾಜನು ಶರಣರ ಗೋಷ್ಠಿಯಲ್ಲಿರುವಾಗ ಶಿವನು ಜಂಗಮರೂಪಿನಿಂದ ಬಂದು ಅಕಾಲದ ವೇಳೆಯಲ್ಲಿ ಮಾವಿನ ಹಣ್ಣು ಬೇಕೆಂದು ಕೇಳುವನು. ಓ ಹೊ! ಈ ಮರದ ಹಣ್ಣು ಬಹು ಸವಿಯಾದುದೆಂದು ಹೇಳಿ ಮರಕ್ಕೆ ಹತ್ತಿ ಭಿಕ್ಷಬೇಡಿ ತಂದುಕೊಡುವನು. ಎಲ್ಲಾ ಭಕ್ತಮಹೇಶ್ವರರು ಸವಿದು ಲಿಂಗತೃಪ್ತಿಹೊಂದಿ ಕೊಂಡಾಡುವರು. (ಸಂ ೪-ಪ. ೧೬೦-೧೬೬).

ಮತ್ತೊಂದುದಿನ ಸೋಮನಾಥನು ವೃದ್ಧಾಪ್ಯ ಜಂಗಮಲೀಲೆಯಿಂ ಬಂದು ನಿಲ್ಲಲು, ಭೈರವರಾಜನು ಶರಣೆಂದು ಉಪಚರಿಸಿ ಆರೋಗಣೆಮಾಡಿಸಿ ತಾವು ಯಾವ ದೇಶದಿಂದ ಬಂದಿರಿ ಎಂದು ಬಂದ ಕಾರಣವನ್ನು ಬೆಸೆಗೊಳ್ಳಲು, ಅಯ್ಯಾ ರಾಜ ನಾನು ಸಿಂಧುದೇಶದಿಂದ ಬಂದೆನು, ಇಗೋ! ಹಿಡಿ ಒಳ್ಳೇ ಸುವಸ್ತುವಾದ ಅವರೆಯ ಫಲದ ಬೀಜವು, ಇದನ್ನು ಬಿತ್ತಿ ಬೆಳೆ ಎಂದು ಕೊಟ್ಟು ಹೊರಟುಹೋಗುವನು. ಅದನ್ನು ಬಿತ್ತಿ ಸಾಕಿ ಬಂದ ಫಲವನ್ನು ಭಿಕ್ಷಬೇಡಿ ತಂದು ಜಂಗಮರಿಗೆ ಲಿಂಗತೃಪ್ತಿಪಡಿಸುವರು ಕೆಲವು ಕಾಲದ ಮೇಲೆ ಗಿಡವು ಒಣಗಿಹೋಗುವುದು ಅಷ್ಟರಲ್ಲಿ ಸೋಮನಾಥನು ಬಂದು ಮನೆಯ ಬಾಗಿಲಲ್ಲಿ ನಿಂತಿರುವನು. ಮಹಾದೇವಿಯು ಶಿವನನ್ನೂ ಶಿವಶರಣ ಶರಣೆಯರನ್ನು ಸ್ತೋತ್ರದೊಡನೆ ಭತ್ತ ತಳಿಸುತ್ತಾ ಇರುವಳು, ಸೋಮನಾಥನು ಮಹಾದೇವಿ! ಮಹಾದೇವಿ ಎಂದು ಕೂಗುವನು, ಮಹಾದೇವಿಯು ಕೈಯ್ಯಲಿದ್ದ ವನಕೆಯನ್ನು ಗಾಬರಿಯಿಂದ ಅಂತರದಲ್ಲೆ ಬಿಟ್ಟು ಬಂದು ಸೋಮನಾಥನ ಶ್ರೀ ಪಾದಕ್ಕೆ ಎರಗಿ ಉನ್ನತಾಸನವಿತ್ತು ಮೂರ್ತಗೊಳ್ಳ

ಬೇಕೆಂದು ಅರಿಕೆಮಾಡುವಳು. ಶಂಭುವು ಅಲಂಕೃತನಾಗಿ ಕುಳಿತು ಅತ್ತ ತಿರುಗಿನೋಡುವನು. ಅಂತರದಲ್ಲಿ ಒನಕೆ ನಿಂತಿರುವುದನ್ನು ನೋಡಿ ಇದೇನಾಶ್ಚರ್ಯವೆಂದು ಕೇಳುವನು ಆಗ ಮಹಾದೇವಿ ಸೋಮನಾಥನ ಪಾಡುತ್ತ ಅಂತರದಲ್ಲಿದ್ದ ಒನಕೆಯನ್ನು ತೆಗೆದು ತಳಕ್ಕೆ ಇರಿಸಿ, ಶಾಖಾದಿಗಳನ್ನು ಮಾಡತೊಡಗುವಳು ಆವಾಗ ಸೋಮನಾಥನು ಅವರೆಯು, ಫಲವ ಬಿಟ್ಟಿರುವುದೇ? ಎಂದು ಕೇಳುವನು ಆಗ ಭೈರವರಾಜನು ಸ್ವಾಮಿ ಆಗಮಿಸಿದರೆ! ತೋರುವೆನು, ಎಂದು ಬಿನ್ನವಿಸುವನು. ಭೈರವರಾಜನ ಮನಸ್ಸಿಗೆ ಆಲೋಚನೆಯು ಬರುವಮುನ್ನವೆ ಗಿಡವು ಚಿಗುರೊಡೆದು ಕುಡಿಹಬ್ಬಿ ಫಲವು ಜೋತೊರಗಿರಲು ಕಂಡು ಭೈರವರಾಜನು ಹರುಷಿತನಾಗಿ ತೋರುವನು. ಶಿವನು ಶಿವಶರಣರು ನೋಡಿ ಕೊಂಡಾಡುವರು. ಅವರೆಯ ಫಲವನ್ನು ಭಿಕ್ಷಬೇಡಿತಂದು ಶಾಖಪಾಕಾದಿಗಳಂ ಮಾಡಿ ಶಿವಗಣಾಧೀಶ್ವರರಿಗೆ ಎಡೆ ಮಾಡಲು, ಲಿಂಗತೃಪ್ತಿಯಂ ಹೊಂದಿ ದಣಿವಾಗುವಂತೆ ಸವಿದು ಆ ಸವಿಯು. ಸೋಮನಾಥನಿಗೆ ಸಲ್ಲಲಿ ಎಂದು ನೆನೆಯುತ್ತ-ಮಹಾದೇವಿಯನ್ನೂ ಭೈರವರಾಜನನ್ನೂ ಗಣಾಧೀಶ್ವರರು ಕೊಂಡಾಡುವರು ಆಗ ಮಹಾದೇವಿ-ಭೈರವರಾಜನು ಪಾದತೀರ್ಥ ಪ್ರಸಾದವಂ ಸವಿದಾ ಸವಿಯಂ ಸೋಮನಾಥನಿಗೆ ಅರ್ಪಿಸುತ್ತಿರುವರು. (ಸಂ. ೪-ಪ. ೧೮೦-೨೪೯.)

ಕಿಕ್ಕೇರಿಯಿಂದ ಅಣ್ಣ ಮಲ್ಲಣಾರ್ಯನು ಭೈರವರಾಜನಲ್ಲಿಗೆ ಬರುವನು. ಭೈರವರಾಜನು ಸಾಷ್ಟಾಂಗವೆರಗುವನು. ಮಹಾದೇವಿಯು ಶರಣೆಂದು ಸತ್ಕರಿಸುವಳು. ಗಣಾಧೀಶ್ವರರ ಸಂದಣಿಗೂಡಿ ಮಲ್ಲಣಾರ್ಯ ಮತ್ತು ಭೈರವರಾಜ ಇವರು ಲಿಂಗತೃಪ್ತಿಯಲ್ಲಿರುವಾಗ ಸೂರ್ಯನು ಪಶ್ಚಿಮಾಂಬುಧಿಯನ್ನು ಸೇರುವನು. ಕತ್ತಲೆಯು ಮುಸುಗುವುದು. ಮೀರಿದ ಕತ್ತಲೆಯಲ್ಲಿ ಮಲ್ಲಣಾರ್ಯನು ಭೈರವರಾಜನು ಸೋಮನಾಥನ ಸನ್ನಿಧಿಗೆ ಹೊರಡುವರು. ಸೋಮನಾಥನು ಭೈರವರಾಜನ ಪರಾಕ್ರಮವನ್ನು ನೋಡಬೇಕೆಂಬ ನೆವದಿಂದ ಅಖಿಳ ಮಾರ್ಬಲದೊಡನೆ ಆವರಿಸಿ ಯುದ್ಧಕಾಯುವಂತೆ ಪ್ರಮಥಾದಿಗಳಿಗೆ ಹೇಳಿ ಕಳುಹುವನು. ಪ್ರಮಥರು ಬಂದು ಮುತ್ತಿಗೆ ಹಾಕುವರು ಅಣ್ಣಾ ಮಲ್ಲಣಾರ್ಯ ನೋಡು! ಈ ಕ್ಷಣದಲ್ಲಿ ಇವರನ್ನು ಸಂಹಾರಮಾಡುವೆನೆಂದು ಪ್ರಮಥಾದಿಗಳ ಕೂಡೆ ಯುದ್ಧಕಾಯುವನು.

ಮಲ್ಲಣಾರ್ಯನು ಹೆದರುವನು. ರಾಜನು ಸಂತೈಸಿದರೂ ಮಲ್ಲಣಾರ್ಯನು ನಿಲ್ಲಲಾರದೆ ಮಣಿದು ಓಡಿಹೋಗುವನು. ಈ ಕಡೆ ಭೈರವರಾಜನು ರಣಾಗ್ರದಲ್ಲಿ ಅನಂತ ಪಟುಭಟರಿಗೆ ಸೋಲುಂಟುಮಾಡುವನು ಕೆಲವರನ್ನು ಇರಿದು ತರಿದು ರಾಶಿಮಾಡುವನು ಆ ವೇಳೆಯಲ್ಲಿ ಕೆಲವರು ಹೆದರಿ ತಿರುಗಿ ಓಡಿಹೋಗುವುದನ್ನು ಸೋಮನಾಥನು ನೋಡಿ ಭೈರವರಾಜನ ಇದಿರು ಪ್ರಸನ್ನನಾಗಲು, ರಾಜನು ಸಾಷ್ಟಾಂಗವೆರಗುವನು. ಸೋಮನಾಥನು ಮೆಚ್ಚಿ ಮೈದಡವಿ ಮಗನೆ! ನಡೆ ಕೈಲಾಸಕ್ಕೆ ಹೋಗುವೆವು ಎಂದು ಪ್ರೀತಿಸುವನು. ದೇವ ನಾನು ಈ ರೀತಿಯಾಗಿ ಬರುವುದಿಲ್ಲ ಪ್ರಪಂಚವೆಲ್ಲ ಚೋದ್ಯವಾಗುವಂತೆ ಇಂದಿಗೆ ತಿಂಗಳಿಗೆ ಸತಿಸಹಿತ ಬರುವೆನು ಎಂದು ಅರಕೆಮಾಡುವನು. ಸೋಮನಾಥನು ಅಂತಾಗಲೆಂದು ಹೊರಟುಹೋಗುವನು. (ಸಂ ೫-ಪ. ೬-೪೫)

ಆಹ! ಶಿವನು ಪ್ರಸನ್ನನಾಗುವುದೇ ಕಷ್ಟ ಈಗ ನಾನು ಬರುವುದಿಲ್ಲವೆಂಬ ಮಾತು ಎಂಥ ನಿರಾಸೆಯುಳ್ಳುದು! ಎಂದು ಕೆಲವರು ನುಡಿಯುತ್ತಿರುವರು ಮತ್ತು ಕೆಲವು ಪರವಾದಿಗಳು ವ್ಯಂಗ್ಯವಾಗಿ ಹಾಡುತ್ತಿರುವರು. ಇದನ್ನು ಕೇಳಿ ಭೈರವರಾಜನು ಅವರನೆಲ್ಲ ವಾದದಿ ಸೋಲಿಸುತ್ತಿರಲು, ಅವರುಗಳಲ್ಲಿ ಒಬ್ಬ ಬ್ರಾಹ್ಮಣನು ರಾಜ ನೀನು ಮನಬಂದಂತೆ ನುಡಿಯುವುದು ಯುಕ್ತವಲ್ಲವು ದೃಷ್ಟವಾಗಿ ತೋರಿಸು ಎಂದು ಕೇಳುವನು. ಕೂಡಲೆ ಭೈರವರಾಜನು ಉತ್ಸಾಹಗೊಂಡು ಎಲ್ಲಾ ಭಕ್ತ ಮಹೇಶ್ವರರನ್ನು ಕರೆಯಿಸುವನು. ಎಲ್ಲರು ಬಂದು ನೆರೆಯುವರು ಭೈರವರಾಜನು ಸೋಮನಾಥನ ಧ್ಯಾನಪರನಾಗಿ ಬಿನ್ನಹಮಾಡುವನು. ಸೋಮನಾಥನ ಅಂತರ್ಧ್ವನಿಯು ನಾವು ಕರೆದುದುಂಟೆಂದು ಘೋರ್ಗರೆದು ನಾದಗೊಡುವುದು (ಸಂ ೫-ಪ. ೪೭-೧೧೧).

ಪುನಃ ಭೈರವರಾಜನು ಗಣಾಧೀಶ್ವರರನ್ನು ಕರೆಯಿಸಿ, ನಾನು ಹೋಗುವ ದಿನವು ವಿಭವ ಸಂವತ್ಸರದ ಜ್ಯೇಷ್ಠ ಬಹುಳ ದಶಮಿ ಸೋಮವಾರದದಿನ ಹೋಗುವೆನು ತಾವುಗಳೆಲ್ಲ ನನ್ನ ಬಳಿಯಲ್ಲೇ ಇರಬೇಕು. ಶಿವಶರಣರಿಗೆ ವಿಭೂತಿ ವೀಳ್ಯದೊಡನೆ ಬಿನ್ನವತ್ತಳೆಯನರ್ಪಿಸಬೇಕು, ಎಂದು ಅರಿಕೆಮಾಡುವನು ಎಲ್ಲಾ ಕಡೆಯಿಂದಲೂ ಶಿವಶರಣರ ತಂಡೋಪತಂಡವು ಬಂದು ಸೇರುವುದು ಗಣವರ್ಯರಿಗೆ ಬೇಡಿದುದನೆಲ್ಲ ಮನದಣಿಯಕೊಟ್ಟು

**ಗಣಪರ್ವವಂ ಮಾಡಿ ಎಲ್ಲಾ ಶಿವಶರಣರ ಆಶೀರ್ವಾದ ಪಡೆದು, ಸೋಮ**ನಾಥನ ಧ್ಯಾನಪರನಾಗುವನು. ಅಷ್ಟರಲ್ಲೇ ಸೋಮನಾಥನು ಗರುಡ, ಗಂಧರ್ವ, ಕಿನ್ನರ, ಕಿಂಪುರುಷ ಮುಂತಾದ ಪ್ರಮಥರೊಡಗೂಡಿ, ಪುಷ್ಪಕದಲ್ಲಿ ಬರುವನು ಮಹಾದೇವಿಯು ಭೈರವರಾಜನು ಸಾಷ್ಟಾಂಗವೆರಗುವರು ಶಿವನು ಅವರನ್ನು ಪುಷ್ಪಕದೊಳಗಿಟ್ಟು ಕರೆದೊಯ್ಯುವನು. ಪ್ರಮಥರು ಉಘೆ! ಉಘೆ!! ಎಂದು ನಾದಗೊಡುವರು. ಎಲ್ಲಾ ಭಕ್ತ ಮಹೇಶ್ವರರು ಆರತಿವಿಡಿದು ಜಯಘೋಷಮಾಡುವರು.* (ಸಂ. ೫-ಪ. ೧೧೯-೧೪೩.)

ದೇವನೂರು ಮಠ
೨೦-೨-೧೯೫೪

ಸಂಪಾದಕರು :
**ಶ್ರೀ ಶಿವಬಸವಸ್ವಾಮಿಗಳು.**

---

* ಗ್ರಂಥ ವಿಶಾಲವಾಗುವುದೆಂಬ ಗುರಿಯಿಂದ ಕಥಾಸಾರವನ್ನು ಹೆಚ್ಚಿಗೆ ಬರೆಯದೆ ಬಿಡಲಾಗಿದೆ. ಉಳಿದಿರುವ ಕಥೆಗಳನ್ನು ಗ್ರಂಥದಲ್ಲೇ ನೋಡುವುದು.

ಶ್ರೀ ಗುರುಮಲ್ಲೇಶ್ವರ ಗ್ರಂಥ ರತ್ನಮಾಲಾ—೬



ಶಿವಶರಣ ವಾಙ್ಮಯ ಪ್ರಕಾಶ

ಕಾರ್ಯಾಲಯ

ಮೈಸೂರು

೧೯೫೪

ಶ್ರೀ ಗುರು ಬಸವ ಲಿಂಗಾಯ ನಮಃ

# ಭೈರವೇಶ್ವರ ಕಾವ್ಯ

## ಮಂಗಳಾಚರಣೆ

### ಚಂಪಕಮಾಲಾ ವೃತ್ತ

ಶ್ರೀಮದನೇಕ ಲೋಕ ಜನಕಂ ಹರಿಮುಖ್ಯಾಮರಾಳಿ ಸೇವಿತಂ ।
ಕಾಮ ಮದಪ್ರಹಾರಿ ವರ ಸಾಸಲ ಸೋಮಯ [1]ಲಿಂಗ[1]ನಂಘ್ರಿಪೂ ॥
ಜಾ ಮಹಾ ಚಿತ್ತನುನ್ನುತ ಗುಣಾಂಬುಧಿ ಭೈರವದೇವನಂ ಸದಾ ।
ಪ್ರೇಮದೊಳೊಲ್ದು ಕೀರ್ತಿಸುವನಾವವನಾತನೆ ಮುಕ್ತಿಮೂಲಿಗಂ ॥ ೧ ॥

### ಶರಷಟ್ಪದಿ

ಶ್ರೀವರ ನೇತ್ರರಾ ।
ಜೀವಾಂಕ ಪಾದರಾ ।
ಜೀ[2]ವಾತ್ಮ ಗಗನಾಂಶು[2] ಮಾಲೀ ॥
ಜೀವನಲ್ಲವನೀ ಸಂ ।
ಜೀವನಶಯುಲೋಕ ।
ಜೀವಾಂಗ ಜಯತು ಸೋಮೇಶ ॥ ೧ ॥

ಶೃತಿ[3]ಗೋವಾದೀಶರ[3] ।
ತೃತಿಗೇಯುರಸಕೊಲ್ದು ।
ಶೃತಿಯೊಳಲಂಕೃತಿಗೆಯ್ದು ॥

---

ಪಾಠಾಂತರ :—

1–ದೇವ (ಗ.) 2–ವೇಶಮಾನಂಬರಾರ್ಕ (ಉ, ಎ, ಗ, ಚ, ಜ, ಟ); ವೇಶಮಾನಾಂಬರಾರ್ಕಾ (ಒ.) 3–ದುವಾದೀಶರೊಳ್ (ಉ, ಒ, ಗ, ಜ, ಟ); ಶೃತಿಗೆವಾದಿಸುವ ರೋಲ್ (ಎ.)

ಶ್ರುತಿಯ ಶಿರದೊಳಿರ್ದು |
ಶ್ರುತಿಗಳರಿಯದ ಶಾ |
ಶ್ವತ ಸೋಮನಾಥ ಮಾಂ ತ್ರಾಹಿ || ೨ ||

ಅಭ್ರಜೀವನ ಜೂಟ |
ಶುಭ್ರಾಂಶು ಸಕಲಾಂಕ |
ಬಭ್ರುಲೋಚನ ಸಪಿಂಗಲ್ಯ ||
ಬಿಬ್ರಜ್ಜಟಾ ಸಾರ |
ದಭ್ರ ತೇಜಸ ಲೋಕ |
ವಿಭ್ರಮ ಜಯತು ಸೋಮೇ ಶಾ || ೩ ||

ಧಾತ್ರ ಪಂಚಮ ಶಿರ |
ಪಾತ್ರ ಪನ್ನಗ [1]ಯಜ್ಞ[1] |
ಸೂತ್ರ ತ್ರಿನೇತ್ರ ಧಾವಲ್ಯ ||
ಗಾತ್ರ ಕಿನ್ನರಪತಿ |
ಮಿತ್ರ ಸಕಲ ದೇವ |
ಚಿತ್ರ ಸೋಮೇಶ ರಕ್ಷಿಪುದು || ೪ ||

ಸುರಪಥ[2]ದೂರ್ಗಳ[2] |
ನುರುಪಿ ಮನೋಜನ |
ನೊರಸಿ ಕಾಲನ ಸಂಹರಿಸಿ ||
ಕರಿದಾನವನ ಸೀಳಿ |
ಶರಣುಪೊಕ್ಕರ ಕಾಯ್ದು |
ವರದ ಸಾಸಲ ಸೋಮ ಶರಣು || ೫ ||

---

1. ಜನ್ನ (ಇ, ಉ, ಗ, ಜ, ಟ) 2. ದುರ್ಗವ (ಇ), ದುರ್ಗಳ (ಗ, ಜ.)

**ಇಂದಿರೆ ವರ ವಾಣಿಯ** |
ರುಂಧತಿದಿ[1]ಗ್ನಾ[1]ರಿ |
ವೃಂದ ಮಾತರ ಯೋಗಿಣಿಯರು ||
ವಂದಿತ ಪಾದಾರ |
ದಿಂದೆ ಶಿವಾನಂದ [2]ಚಿ |
ದ್ಬಿಂ[2]ದು ಶಿವೆ ಶರಣಾಗು || ೬ ||

ಹರನ ಕೋಪಾಗ್ನಿ ಭಾ |
ಸುರತೇಜವಡೆದು ನಿ |
ಬ್ಬರದಿ ಭಾಳಾಕ್ಷದಿಂದೊಗೆದು ||
[3]ಹರಿಯಜ ಸುರರ[3] ಸಂ |
ಹರಿಸಿ ದಕ್ಷನ ಶಿರ |
ವರಿದ ವೀರೇಶಗೆರಗುವೆನು || ೭ ||

ಸಂತತ ಕೀರ್ತಿ ದಿ |
ಶಾಂತನವುಲತರ |
[4]ಸ್ವಾಂ[4]ತ ನತರ ಭವಲತಿಕಾ ||
ಕೃಂತನ ವೇದ ವೇ |
ದಾಂತದಾಯಕನೇಕ |
ದಂತನ ನಾ ಬಲಗೊಂಬೆ || ೮ ||

ಸಾರಸ [5]ಭವಸ್ಯಾ[5] |
ಗಾರದೊಳಿರುತಿರ್ದು |
ಸೂರಿ ಜನರ ಪೊರೆವವುರ ||

---

1–ನ್ನಾ (ಎ, ಗ, ಜ, ಟ.) 2–ಸಿಂಧೇಂಮ (ಅ, ಉ, ಒ, ಚ.) 3–ಇರದೆ ಯಾಗವ (ಎ.) 4 ಸ್ವಶಾಂ (ಚ) 5–ಭವನಾಸ್ಯ (ಅ, ಇ, ಉ, ಒ, ಕ, ಚ, ಜ, ಟ)

ಭೂರುಹ[1]ವೆನಿಸಿ[1]ರ್ದ |
ಶಾರದೆ ನೆರೆ ಬಾರೆ |
ಭೈರವದೇವನ ಕೃತಿಗೆ || ೯ ||

ನಂದಿಕೇಶ್ವರ ಭೃಂಗಿ |
ಸ್ಕಂದ ಮುಖ್ಯಾಮರಾಳಿ |
ಬಂದೆನ್ನ ಹೃತ್ಕಮಲದೊಳು ||
ನಿಂದು ನಿಮ್ಮಯ ಭೃತ್ಯ |
ನೆಂದೀ ಕೃತಿಯೊಳು ತ |
ಪ್ಪೊಂದಿಲ್ಲವೆನೆ ನಡೆಸುವುದೂ || ೧೦ ||

ಬಾಣ ಮಯೂರನ |
ಜಾಣ ಗುಜ್ಜರನ ಬಿ |
ಲ್ಹಣ ಮಲ್ಲಣನುರ್ಬುಮಲೆಯಾ ||
ಕ್ಷೋಣಿಪನೇಳ್ಗಿ ಕ |
[2]ಟ್ಟಾ[2]ಣಿ ಹರೀಶನೋಕ್ತಿ |
ಗಾಣಿಪುದೀ ಸತ್ಕೃತಿಯೊಳಗೆ || ೧೧ ||

ಪರಿಭವದೊಳು ಬಂದು |
ನರನಾಗಿ ಬಳಿಕತಿ |
ನರಕ[3]ದೊಳ್ ಬೀಳ್ವೆನ್ನ[3] ನೋಡಿ ||
ಶಿರ ಪಿಡಿದೆತ್ತಿ ದಯದಿ |
ಶರಣರಾಳಾಗೆಂದ |
ಪರಮ ದೇಶಿಕನ ಪಾದುಕೆಯಾ || ೧೨ ||

---

1 ದಂತಿ (ಎ.) 2_ಪ್ಪಾ (ಎ, ಒ, ಗ, ಚ.) 3_ದಿಂ ಬೀಳ್ವನ (ಅ, ಎ, ಒ, ಗ, ಚ.)

ತಲೆಯೊಳಾಂತತುಳ ನಿ ।
ರ್ಮಲ ಚಿತ್ತನಾದೆ ಭೂ ।
ತಲವಂದ್ಯನಾದೆ ನಾನಿನ್ನೊ ॥
ಚಲುವೊಪ್ಪೊಲುಸುರ್ವೆ ಸಾ ।
ಸಲ ಭೈರವಾಂಕನ ।
ಮಲ ಚಾರು ಚರಿತ[1]ವನೊಲಿದು[1] ॥ ೧೩ ॥

ನಂಬಿ ಸತ್ಕೃತಿಯ ಪ್ರಾ ।
ರಂಭಿಸುತಿರೆ ಶಬ್ದಾ ।
ಡಂಬರ ಭಾವ ರಸಾರ್ಥ ॥
ಗಂಭೀರ ಚಿತ್ರತ ।
ರಂ ಬಹಳೆತಿಹಾಸ ।
ದಿಂ ಬಪ್ಪೊಲುಸುರು ನೀನೆಂದು ॥ ೧೪ ॥

ಗುರು ಸೋಮನಾಥ ಬಂ ।
ದೊರೆದೆನ್ನ ಸ್ವಪ್ನದೊಳ್ ।
ಕರ ಕಮಲವ ಶಿರಕಿ[2]ಟ್ಟು[2] ॥
ಭರ ಭಾರವೆನ್ನದೀ ।
ಚರಿತೆಗೆ ನೀನಂಜ ।
ದಿರು ನಂಬು ನಿರ್ವಿಘ್ನವೆಂದು ॥ ೧೫ ॥

ಪೇಳಿಸಿದ ಮುನ್ನ ।
ಭಾಳಾಕ್ಷನೊಲಿದು ಕ ।
ಟ್ಟಾಳು ಭೈರವನ ಚರಿ[3]ತವಾ[3] ॥

---

ವೆಂಕೆನಲು (ಜ.)    2-ಕ್ಕು (ಇ.)    3-ಕೆಯ (ಇ.)

ಪೇಳುವೆ ರಸ ಭಾವ ।
ದೇಳಿಗೆ ತಪ್ಪದೋಲ್ ।
ಕೇಳಿ ಸುಖಿಪುದು ಸಜ್ಜನರೂ ॥ ೧೬ ॥

ಭಕ್ತಿಯ ತಾಣ ಸ ।
ನ್ಮುಕ್ತಿಯ ಸದನ ವಿ ।
ರಕ್ತಿಯ ಸೀಮೆ ಮೋಹನದಾ ॥
ಸೂಕ್ತಿಯ ಸಿರಿ ಸರ
ಸೋಕ್ತಿಯ ನೆಲೆಯಾಗಿ ।
ವ್ಯಕ್ತವಾಗಿಪ್ಪುದೀ ಕಾವ್ಯ ॥ ೧೭ ॥

ಮರೆದುದೀ ಯುಕ್ತಿಯಿಂ ।
[1]ದಿರದ್[1] ಬಲ್ಲರು ತಿದ್ದಿ ।
ಮೆರೆವುದೀ ಕೃತಿ [2]ತ[2]ಮ್ಮದೆಂದು ॥
ಬರಿದೆ ನಿಂದಿಸಿ ಖೂಳ ॥
ರೆರೆಯುರಾಗಿಹ ನರ ।
ಗುರಿಗಳಂತಿರಲಿ ಮೇಲಿನ್ನೂ ॥ ೧೮ ॥

ಸೊಕ್ಕುಗಲೆಗಳ ಸೋ ।
ಲಕ್ಕೆ ಮೈಗೊಟ್ಟು ಮೇ ।
ಲಿಕ್ಕಿ[3]ಲಲ್ಲೈ[3]ಪ ಭಾವಕಿಯಾ ॥
ಚೊಕ್ಕೆ ಹದನುಭಾವ ।
ದಕ್ಕರಗಳಿಗೆ ಸಂ ।
ಮಿಕ್ಕಾಗಿ ತೋರ್ಪುದೀ ಕಾವ್ಯ ॥ ೧೯ ॥

---

1_ದುರೆ (ಕ.) 2_ನಿ (ಚ, ಜ.) 3_ಲಾಲಿ (ಇ.)

ಚದುರರ ಮೆಚ್ಚು ಮೇಲ್ |
ಬುಧರಚ್ಚು ಸತ್ಕಲಾ |
ವಿದರ ವಿಲಾಸದ ಪೆರ್ಚು ||
ಮುದದೊಳು ಜೊತ್ತು ಭಾ |
ವದ ಕೆಚ್ಚು ನಂಜ ಪೇ |
ಳಿದ ಕಾವ್ಯ [1]ಘೋರಾರಣ್ಯ[1]ಗಿಚ್ಚು || ೨೦ ||

ಕೃತಿ ನಾಮ ಸಾಸಲ |
ಪತಿ ಭೈರವಾಂಕನ |
ಕೃತಿಗೆ ಕರ್ತನು ಸೋಮನಾಥ ||
ಕೃತಿಗೆ ಸಹಾಯಿಗಳ್ |
ಕ್ಷಿತಿಯ ಭಕ್ತರು ಪೇ[2]ಳ್ದ[2] |
ನುತ ಕವಿ **ನಂಜುಂಡದೇವಾ** || ೨೧ ||

ಲಿಂಗದ [3]ನದಿ[3]ಯ ಸ್ವ |
ಪ್ನಂಗಳವ[4]ರೆ[4] ಸಮ |
ರಂಗಣ ಬೆರ[5]ಳ ಪನ್ನ[5]ಗನಾ ||
ಜಂಗಮದಿಷ್ಟ ಫ |
ಲಂಗಳೊನಜಕೆ ನೀಡಿ |
ಹಾಂಗೆ ಸೋಮೇಶನುಂಟೆಂದೂ || ೨೨ ||

ಎಂತೆನೆ ಪೇಳ್ವೆನ |
ನಂತಕಂ ಕರಿಘೋಟ |
ಕಂ ತಿಮಿ ತಿಮಿ ಕರ್ಕಟಾಳಿ ||

---

1–ಕಲರೆದಿ (ಚ.) 2–ಳ್ವ (ಎ, ಜ.) 3–ನಂದಿ (ಅ, ಒ.); ನಡಿ (ಇ, ಉ, ಕ).
4–ತಿ (ಇ.) 5–ದ ಪನ್ನೆ (ಅ, ಇ, ಉ, ಎ, ಗ.)

ತಿಂಥಿಣಿಸಿದ ಕವು |
ರಂ ತೆರೆ ನೊರೆ ಬುದ್ಬು |
ದಂ ತೀವಿ ಮಿಗೆ ದಧಿ ರಾಜಿಪುದೂ || ೨೩ ||

ರಾಶಿತ್ರಯುವ ತಾಳ್ದ |
ದೂಸರಿಂ ಬಂದೆನ್ನ |
ರಾಶಿ ಸಂಭವ ತಿಂದುಗುಳ್ದಾ ||
[1]ವೋಸ[1] ಮುಂದೆನುತಂಬು |
ರಾಸಿ ನೂಂಕಿದೊಲು ಮೂ |
ರಾಶಿಗಳ್ಕೊಳೆದಾ[2]ಡುವ[2]ವು || ೨೪ ||

[3]ನೊರೆ ನರೆ ತೆರೆಗಳ್[3] |
ತೆರೆ ಕಂಪ ಕಂಪಿಸಿ |
ಕರ ಬಾಯ ತುಂತುರುವಾತಾರ್ ||
[4]ದರಿ[4]ಗಣ್ಣುಡುಗಿ ದಡಿ |
ಸರ ಘೋಷ ತನುಮೆತ್ತ |
ನಿರೆ ವೃದ್ಧನಂತಿರಂಬೋಧಿ || ೨೫ ||

ಪವಳ ಕೆಂಜೆಡೆ ಫೇನ |
ನವಸೋಮ ಕಿಡಿಗಣ್ಣಾ |
ಡವನಲ ತೋಳ್ತೆರೆ ಮಾಲೆ ||
ರವಡಿ ಮರುಧ್ವಾನ |
ಶಿವೆ ಪುಣ್ಯ ನದಿಗೂಟ |
ಶಿವನೊಲಂಬುಧಿ ಎಸೆದಿಹುದು || ೨೬ ||

---

1-ಘೋಷ (ಎ.) 2-ಡಿದ (ಅ, ಉ, ಗ.) 3-ತೆರೆ ನೊರೆ ನರೆ ಗರೆ ಧರೆ (ಎ.)
4-ಧರೆ (ಎ, ಕ, ಜ.)

ತೆರೆ[1]ಯೊ[1] ಶುಭರತ ವಿ |
ಸ್ತರ ಚಿತ್ರವ[2]ಚ್ಚ[2]ರ |
ತರಣಿ ಮಧುರಿಮಲಂಕಾರ ||
ನೊರೆಯೆ ಭಾವಾರ್ಥ ಶ |
ಬ್ದರವ ಗಂಭೀರಾರ್ಥ |
ಸರಸ ಕವಿಯೊಲಬ್ಧಿ ಇಹುದು || ೨೭ ||

ಅತಿ ವಿಶಾಲದಿ ಉಡು |
ತತಿಯಿಂದ ಸಿತದಿಂದ |
ನುತ ಪುಷ್ಕರಾಖ್ಯದಿಂ ಮೇಘಾ ||
ಶ್ರಿತದಿಂದ ತರಣಿಯಿಂ |
ದತಿ ಚರಿಪಸಿಮಿಷ ಪ್ರ |
ತತಿಯಿಂ ನಭದೊಲಬ್ಧಿಪಾರ || ೨೮ ||

ಸರಸಿಜಸಂಭವ |
ನರಸಿಯೋೞ್ ಬೆರಸಿ ಭಾ |
ಸ್ಕರನೆನ್ನ ದೊರೆಗೆಡಿಸಿದನೂ ||
ಉರು ಭಂಗವಾದುದೀ |
ಪರಿಯೆನಗೆಂದಬ್ಧಿ |
ಶಿರದೊಳು ತೃಣವ ತಾಳಿಹುದು || ೨೯ ||

ತರಣಿ ಮಂಡಲಗಳಿ |
ರ್ದರುಣ ಮಂಡಳವಲ್ಲ |
ಹರಿಯಿರ್ದು ಸಿರಿಧರನಲ್ಲಾ ||

---

1–ಯ (ಕ, ಚ, ಜ.); ಯೆ (ಟ.) 2–ಚ್ಚ (ಅ, ಇ, ಉ, ಕ, ಗ, ಚ.)

ತೆರೆಯಿರ್ದು ಲಾಸ್ಯಮುಂ |
ದಿರವಲ್ಲ ಪದ್ಮಮಿ |
ರ್ದುರು ಪದ್ಮವಲ್ಲದಾ ವನಧಿ || ೩೦ ||

ಸುರತರು ಸುರಧೇನು |
ಸುರದಂತಿಯಮೃತ ಚಂ |
ದಿರ ರತ್ನ ನಿಚಯಮುರಿಯುರು ||
ಸುರ [1]ಹೆ[1]ಯು ಸಿರಿದೇವಿ |
ಪುರುಷವಮುರರಿ[2]ಗಿ |
ತ್ತು[2]ರುಚಾಗಿ ಎನಿಸಿತಾ ವನದಿ || ೩೧ ||

ಭೂಸುತವೆನಿಸಿದಂ |
ಭೋನಿಧಿ ವರ ರತ್ನ |
ಸ್ಥಾ[3]ನ ಪ್ರದೇ[3]ಶವಾಗಿಹುದು ||
ಏನೆಂಬೆನಗ್ರದ |
ದ್ಯೋನದಿಗಿಟ್ಟ ಸೋ |
ಪಾನವೆಂಬಂತೆ ರಾಜಿಪುದು || ೩೨ ||

ಹರಿ ಬ್ರಂಹಾದಿಗಳಹಂ |
ಕರಿಸಲವರ ನಡು |
ಉರಿಲಿಂಗವಾಗಿ ರಾಜಿಸುವ ||
ಪರಮ ತೇಜೋರಾಶಿ |
ಯಿರವೆನಿಸಿಹುದು ಪೊಂ |
ಗಿರಿಯದನೇನ ಬಣ್ಣಿಸುವೆ || ೩೩ ||

---

1–ಮು (ಅ.) 2–ಗೀ | ವುದು (ಅ, ಇ, ಉ, ಗ, ಚ.) 3–ನುಪ್ರವೇ (ಗ.) ; ಸಾಃ ಪ್ರವೇ (ಅ, ಉ, ಎ, ಒ, ಜ.)

ಮೇರು ಲೋಕಂಗಳಾ।
ಧಾರಮುರಾಳಿಗಾ ।
ಗಾರ ಸೌಭಾಗ್ಯದ ಸಾರ ॥
ಚಾರುಗಭಸ್ತಿಯು ।
ಪೂರ ಘೃಣಾಂಬುಧಿ ।
ತೀರವಾ ದಕ್ಷಿಣಾನೆಯೊಳು ॥ ೩೪ ॥

ಜಂಬುನದಿಯು ನವ ।
ಲಂಬಿತ ದ್ವೀಪ ಕ ।
ದಂಬುಧಿ ಭಾರತವರುಷ ॥
ವೆಂಬುದರೊಳಗೊಪ್ಪು ।
ವಂಬುಜ ಹರಿಯುಂಚೆ ।
ತುಂಬಿದ ಸರವಣವಿಹುದು ॥ ೩೫ ॥

ಆ ಪುಣ್ಯ ನದಿಯುಮೇ ।
ಳಾಪದಿ ಹಿಮವನ್ನ ।
ಹಿಪ್ಪೊರೆಯೊಳು ಹಿಮವಂತ ॥
ರೂಪುದಳೆದು ಗಿರಿ ।
ಜಾಪತಿಗತ್ಯಂತ ।
ರೂಪನೆನಿಪ ಗಿರಿರಾಜಾ ॥ ೩೬ ॥

ಪಾದ [1]ಪಾ[1]ದಪಶಯು ।
ತ್ಯೋದಯ ಶೃಂಗಗ ।
ಳ್ಳಾದ ನಿರ್ಜರ ವಾರಿಕೆಲದಾ ॥

---

೧. ಪ (ಅ, ಗ.)

ಭೂಧರಗಳಿ ೯ಟಿ ।
ಸಾಧಕರಭಿಮುಖ ।
ವಾದುದೆ ಮುಖ ಗಿರಿಪತಿಗೆ || ೩೭ ||

ಮಿಸುಪ ಜಟಾಳಿ ಕೆಂ ।
ಪೆಸೆವ ಲತಾಕ್ಷಿಗಳ್ ।
ಶಶಿ ರವಿಗಳ್ ತೃಣಜ್ಯೋತಿ ||
ತಿಸುಳ ಕೋಡ್ಗಲ್ಮಂಜು ।
ಭಸಿತ ಕರೋಟಿ ಗುಂ ।
ಡೆಸೆವುದಾ ನಗ ಹರನಂತೆ || ೩೮ ||

ಅಗದು ನೆಟ್ಟಿರು ದೇವ ।
ತೆಗ[1]ಳು[1] ಮೇರುವ ನಂದಿ ।
ನಗುತ ಕಿತ್ತಿಟ್ಟ ಮಹೇಂದ್ರಾ ||
ನಗವ ಕೌಮಾರ ತ ।
ಟ್ಟುಗಿದ ಕ್ರೌಂಚಾದ್ರಿಯು ।
ನಗುವಂತೆ ಹಿಮಗಿರಿ ಇಹುದು || ೩೯ ||

ಮಗಳಿತ್ತು ವ್ಯೋಮಕೇ ।
ಶಗೆ ಸೇಸೆದಳೆಯಲೆಂ ।
ದಗಪತಿ ನಿಮಿರ್ದು ನಿಂದಂತೆ ||
ಸೊಗಯಿಸುತಿರ್ಪುದಾ ।
ನಗವತಿ ಸ್ಥೂಲ[2]ದೊ[2]ಂ ।
ದೊಗುಮಿಗೆಯಿಂದ ಹಿಮಾದ್ರಿ || ೪೦ ||

---

1. ಳೊ (ಗ.) 2. ದಿ (ಉ)

ಹರಿಯೋಲ್ ಭೂ ಚಕ್ರ ಭೃತ್ ।
ಹರನಂತೆ ಶುಭ್ರಾಂಶು ।
ಧರ ಧಾತನಂತೆ ಸ್ವಯಂಭೂ ॥
ಗಿರಿಜೆಯೊಲ್ ದುರ್ಗಾಖ್ಯ ।
ಸುರರಂತಿಂದ್ರಾರಿಯಿಂ ।
ದಿರನೊಲ್ ನಿರ್ಜರ[1]ವೇಷ್ಟಾ[1] ನಗವೂ ॥ ೪೧ ॥

ತರು ಲತೆ ಪುಲ್ಪೊದ ।
ರುರುಗ ಜೇನ್ ಮೃಗ ಪಕ್ಕಿ ।
ದರಿನೀಳ್ದ ಶಿಲೆಗಳನಂತಾ ॥
ಸರಿವು ತಾಪಸರು ಕಿ ।
ನ್ನರರು ಮಿಥುನಾಳಿ ಬಿ ।
ಲ್ಲರ ಪಳ್ಳಿದೊಣೆಗಳಲ್ಲಲ್ಲಿ ॥ ೪೨ ॥

ತರು ಕಲ್ಪತರುಗಳ್ ತಾ ।
ವರೆಗೊಳ ಪನಿನೀರೊ ।
ಜ್ಜರ ರನ್ನ ರಚಿತ ಗುಹಾಳಿ ॥
ಸುರಚಿರ ಕಾದಂಬ ।
ದುರು ವನ ಬಿಲ್ವದಾ ।
ಗರ ತಾಪಸರಾಶ್ರಮದೊಳಗೆ ॥ ೪೩ ॥

ಎಸೆವ[2]ರಾವ[2]ಗ ರಾಜ ।
ಋಷಿ ದೇವಋಷಿ ಬ್ರಂಹ ।
ಋಷಿಗಳಶ್ರಾಂತ ಶಂಕರನಾ ॥

---

1. ವೆಯ್ಪು (ಅ.) 2. ದಾರು (ಅ.)

ಶಶಿದಲೆಯುನ ಚಿತ |
ಕುಸುಮ ವಿಶಸನ ಪೂ |
ಜಿಸಿ ನುತಿಗೆಯ್ದು ಜಾನಿಪರೂ || ೪೪ ||

ಉನ್ಮನಿದಾಣದೊಳ್ |
ಚಿನ್ಮಯನಖಿಳ ಜ |
ಗನ್ಮಯ ನಭವನದ್ವಯನಾ ||
ಮನ್ಮಥಾರಿಯ ಸದಾ |
ಸನ್ಮಾನಿಸುತ ಜರಾ |
ಜನ್ಮವಿದೂರರಾಗಿಹರು || ೪೫ ||

[1]ಸಿ[1]ದ್ಧ ಪದ್ಮಾಸನ |
ಬದ್ಧರಾಗಿಹರಷ್ಟ |
ಸಿದ್ಧಿಗಳನು ತೃಣವೆಂದು ||
ನಿರ್ಧರಿಸಿದ ಜ್ಞಾನ |
ವೃದ್ಧರಾಗಿರ್ಪ ವಿ |
ರುದ್ಧ ಸಂಯಮಿಗಳೊಪ್ಪಿಹರು || ೪೬ ||

ಕಾಲತ್ರಯಂಗಳ ಸ |
ಕೀಲವ ಸನ್ಮುಕ್ತಿ |
ಮೂಲವಿದೆಂಬ ಭೇದವನು ||
ಮೂಲ ಮಂತ್ರದ ಭೇದ |
ವಾಲೋಕಿಸುವ ಶಾಸ್ತ್ರ |
ಜಾಲವನರಿವ ವಟುಗಳು || ೪೭ ||

---

[1] ಸು (ಇ.)

ಶರಭಂಗಳೊಡನೆ ಕೇ |
ಸರಿವಿಂಡಿಹವು ಪುಲಿ |
ಹರಿಣಂಗಳೊಡನಾಡುತಿಹವು ||
ಉರಗ ಮುಂಗುಲಿಯೊಳು |
ಸರಸವಾಡುಗು ಮುನಿ |
ವರರ ಮಹತ್ವವದೆಂತೊ || ೪೮ ||

ಫಲತೀವಿ ಬೀಗಿ ಜೋ |
ತೊಲೆವ ಮಾಮರ ತೆಂಗು |
ಪಲಸೀಳೆ ಬಾಳೆ ನಾರಂಗ ||
ತಿಲಕ ಚಂಪಕಾಶೋಕಾ |
ಜಲ ಪದ್ಮ ಸುರಗಿ ಪೂ |
ತಲದರ್ಹ ಬಕುಳ ಸುರಹೊನ್ನೆ || ೪೯ ||

ಅತಿ ಘೋರ ಕಾಂತಾರು |
ನ್ನತ ಮಹಿಮಾಗಾರ |
[1]ನು[1]ತ ವಿಟಪಿಗಳ ವಿಸ್ತಾರ ||
ಸತತ ಗಂಭೀರ ವಿ |
ಶೃತ ಪುಲ್ಕಸ ವಿಹಾರ |
ನುತ ನವ[2]ನದಿ[2]ಗಳಪಾರ || ೫೦ ||

ಶಶಿಯಂತೆ ರವಿಯಂತೆ |
ಬಿಸಿಗೆಂಡದಂತೆ ಕೂ |
ರಸಿಯಂತೆ ಗರ್ಭಿಣಿಯಂತೆ ||

---

1-ಮಿ (ಇ, ಉ, ಎ, ಕ), ವಿತತ (ಚ.)  2-ನಿಧಿ (ಬ, ಕ, ಗ.)

ಮುಸಗಿ ಬೇಡುವರಂತೆ |
ಎಸೆವ ಸತ್ಕುಲದಂತೆ |
ಬಸವನಂತುರು ಘೂಕನಂತೆ* || ೫೧ ||

ಖರ[1]ದ[1]ಂತೆ ಶತಕೋಟಿ |
ಕರಿಯಂತೆ ಪಾಂಡು ನೃ |
ವರ ಸುತನಂತೆ ಮುಂಕೇಳ್ವ ||
ಅರಗಿಳಿಯಂತೆ ಸಿಂ |
ಗರವೆಣ್ಣಿನಂತೆ ಕಿ |
ನ್ನರಪತಿಯರಮನೆಯಂತೆ || ೫೨ ||

ಮಳೆಗಾಲದಂತೆ ಕ |
ಮಲಜ ವಾಹನದಂತೆ |
ನಳಿನನಾಭನ ಸುತನಂತೆ ||
ತುಳಿಲಾಳಿನಂತೆ ಮಂ |
ಗಳನಂತೆ ಕಕುಭ ಸಂ |
ಕುಳದಂತೆ [2]ಸಲೆ[2]ಭೂಜವೆಸೆಯೆ || ೫೩ ||

ಹರಿ ಯಕ್ಷ ಮತ್ತ ಕುಂ |
ಜರ ಖಡ್ಗಿ ಸೈರಿಭ |
ಶರಭ ಪೇರ್ಮುರಿ ಮೃಗ ಧೂರ್ತ ||
ಪುರುಷಾಮೃಗೆರಳೆ ಸೂ |
ಕರ ವೃ[3]ಕ[3] ಸಾರಂಗ |
ಕರಡಿ ಕಡವೆ ಮೊಪ್ರು ನಿಚಯ || ೫೪ ||

---

* ಈ ಪದ್ಯ (ಎ.) ಪ್ರತಿಯಲಿಲ್ಲ. 1-ವ (ಇ, ಉ, ಎ, ಕ, ಗ, ಚ, ಟ.
2 ವಲು (ಉ, ಎ, ಕ, ಗ, ಚ.) 3-ತ (ಇ)

ಪಾರಿವ ಶಿಖಿ ಗಂಡ ।
ಭೇರುಂಡ ಕೆಂಗಣ್ಣ ।
ಕೀರಂಚೆ ಕೊಂಚೆ ಪಾದಾಸ್ತ್ರ ॥
ಕಾರಂಡ ಹರಡೆ ಚ ।
ಕೋರ ತಿತ್ತಿರಿಸೇನ ।
ದಾರು ಚುಂಬಿತ ಖಂಜರೀಟ ॥ ೫೫ ॥

ಖಗದ ಸಂಚಾರ ಕೋಳ್ ।
ಮಿಗದ ವಿಹಾರ ಭೂ ।
ಜಗಳ ವಿಸ್ತಾರ ಲುಬ್ಧಕರಾ ॥
ಅಗಣಿತ ವೀರ ಯೋ ।
ಗಿಗಳ [1]ವಿಸ್ತಾ[1]ರವಾ ।
ನಗದಿ ರಂಜಿಸುವದಪಾರ ॥ ೫೬ ॥

ಇಂತೆಸೆವ ಹಿಮು ।
ವಂತನ ತೆಂಕಲು ।
ವಂತಿ ಮಾರಾಟ ತ್ರಿಗರ್ತ ॥
ಕುಂತಣ ಮಧ್ಯವ ।
ನೆಂತಾರ್ಯ ಸಿಂಧು ಜ ।
ನಂ ತುರುಕ[2]ವನಿಯು ಆಂಧ್ರ[2] ॥ ೫೭ ॥

ಮಾಳವ ಮಗಧ ಬಂ ।
ಗಾಳ ಕಾಶ್ಮೀರ ಪಂ ।
ಚಾಳಂಗ ವಂಗ ಕಾಳಿಂಗಾ ॥

---

1–ಚಿತ್ರಾ (ಅ, ಉ, ಒ, ಕ, ಗ, ಚ ) 2–ವೆ ಯಾಗದಂದ್ರ (ಇ.); ರಂದ್ರ (ಅ,) , ದಂದ್ರ (ಕ.), ಗಂದ್ರ (ಉ, ಚ.), ಯುಗದಂದ್ರ (ಎ, ಒ )

ಲಾಳ ಗುರ್ಜರ ಘೋಟ |
ಗೌಳ ಕೊಂಕಣ ನೇ |
ಪಾಳ ದ್ರಾವಿಡ ಮೊದಲಾದ || ೫೮ ||

ಚಪ್ಪನ್ನ ದೇಶಕೆ |
ದರ್ಪಣವೆಂದೆನಿ |
ಸಿಪ್ಪುದು ತ್ರೈಲಿಂಗ ದೇಶಾ ||
ಶೂರ್ಪಾರಿಜಿತನ ಭ |
ಕ್ತ ರ್ಪಲರಿಹರದ |
ರೊಪ್ಪವನಭಿವರ್ಣಿಸುವೆನು || ೫೯ ||

ಪುರ ಗ್ರಾಮ ಖರ್ವ ನ |
ಗರ ಪಳ್ಳಿ ಘೋಷ ಭಾ |
ಸುರದಗ್ರಹಾರ [1]ಕದಂಬಾ[1] ||
ಉರುತರ ಜಲ ವನ |
ಗಿರಿ ದುರ್ಗ ಬಲವಂತ |
ದೊರೆಗಳಾ ದೇಶದೊಳಿಹರು || ೬೦ ||

ಜಾರರು ಜಡರವಿ |
ಚಾರರ[2]ತ್ಯಧಮ[2]ರು |
ಕ್ರೂರರು ಕುಟಿಲ ಕು[3]ಚ್ಚಿ[3]ತರು ||
ಚೋರರು ಪಿಸುಣರಾ |
ಚಾರ ಹೀನರು ಹಿಂಸಾ |
ಪಾರರಾದೇಶದೊಳಿಲ್ಲ || ೬೧ ||

---

1–ದಡಂಬಾ (ಉ, ಚ, ಟ,); ದಿವಾಡಂ (ಇ.) 2. ಸತ್ಯ (ಎ.) 3–ಚ
(ಅ, ಇ, ಎ, ಟ).

ಸತ್ಯರು ಶಿವಪದ |
ಭೃತ್ಯರಮಲತರ ಸ |
ತ್ಕೃತ್ಯರುದಾರರು [1]ಹಂತಾ[1] |
ನಿತ್ಯರು ಚಿತ್ಸುಖೋ |
ದಾತ್ಯರುನ್ನತರತಿ |
ಮಿಥ್ಯೆಯನುಳಿದರಲ್ಲಿಹರೂ || ೬೨ ||

ಸತಿಯರೆಲ್ಲರು ಪತಿ |
ವ್ರತೆಯರಪ್ರತಿರೂಪ |
ವತಿಯರೀಶಾಂಘ್ರಿ ಪೂಜಕರೂ ||
ಅತನುಗಲಿಗಳ ಬ |
ಲ್ಲತಿ ಚಪಳೆಯರಲ್ಲ |
ದಿತರವಿಲ್ಲಾ ದೇಶದೊಳಗೆ || ೬೩ ||

ಕರಪೀಡನವೆನಿಪುದೋ |
ಪರೊಳು ಸಂತತ ಪಯೋ |
ಧರದೊಳು ಕಠಿಣ ಕರ್ಕಶವು ||
ಚರಣಕ್ಕೆರಗಿ ಬಾಳ |
ದಿರವು ಪ್ರಣಯದೊಳು |
ಗುರು ಶಾಸ್ತ್ರದಲ್ಲಿ ಚಿಂತನ[2]ವು[2] || ೬೪ ||

ಕಡಿಪೊಡೆ ಮುಡಿ ಮಡಿ |
ತೊಡಕೆಂಬಯ್ದು ಬಿರು |
ನುಡಿ ಕರ್ವು ಜೂಜು ಕಳಮೆಯು ||

---

1_ವಂತ (ಎ.) 2_ರು (ಅ, ಇ, ಕ, ಚ, ಜ,)

ಪೊಡವಿ ಪೆಣ್ಗಳ ತಲೆ ।
ಮುಡಿವಾಳ ಬಂಧಂಗ ।
ಳೆಡೆಯೊಳಲ್ಲದೆ ನೋಳ್ಪ[1]ಡ[1]ಲ್ಲ ॥ ೬೫ ॥

ಫಲಿತ ಪಾದಪಗಳಿಂ ।
ಬೆಳೆಗೈಗಳಿಂ ಪದ್ಮ ।
ಕಲುಹಾರ ಕುಮುದದಿಂ ಮೆರೆವಾ ॥
ಕೊಳಗಳಿಂ ಮಿಗೆ ಬೀಗಿ ।
ಬೆಳೆದ ಸಾಲಿವನ ।
ಗಳಲಾಂಧ್ರ ದೇಶವೊಪ್ಪುತಿಹುದು ॥ ೬೬ ॥

ಪಸುರಾಗಿ ಪೊಡೆಯಾಗಿ ।
ಕುಸಿದು ಬಳ್ಕುತ ರಾಗ ।
ರಸತೀವಿ ಮೆರೆವ ಶಾಲಿಗಳಾ ॥
ಮುಸುರಿ ಪಾಲ್ದೆನೆಗಳ ।
ಪೊಸರಸವೀಂಟೆ ರಾ ।
ಜಿಸುವ ಶು[2]ಕಾ[2]ಳಿ ರಾಜಿಪವು ॥ ೬೭ ॥

ಕಳವೆಗ್ಯೆಗೆರ[3]ಗಿಳಿ ।
ಗ[3]ಳ ಸೋಹುವ ಕ ।
ಮಲದಳನೇತ್ರೆಯರಧರ ॥
ದೊಳುವಣ್ಣಾಲಾಪ ಪ ।
ಲ್ಗಳ ಕೆಂಪಗಂಡಳ ।
ವಳಿದು ತೊಲಗದಿರುತಿಹರು ॥ ೬೮ ॥

---

1-ಖರ್ವ (ಗ) 2-ಖಾ (ಅ, ಉ, ಎ, ಗ.) 3-ಗುಪ 1-ಪ (ಎ).

ಅನಿಮಿಷಗೀರ್ಯ್ಯಲೆಂ ।
ದಿನಿದನಿಂಬಿಟ್ಟ್ಟು ಭೂ ।
ವನಿತೆಯ ಕ್ಕೈಯ[1]ಲ್ಲಿ ಕೊ[1]ಟ್ಟ್ಟು ॥
ಘನ ಹರುಷದೊಳಟ್ಟಿ ।
ದನು ನಾಗರೆರೆಯನೆಂ ।
ಬಿನ ಖ[2]ರ್ವ[2] ನಾಟಿಯೊಪ್ಪಿದವೂ ॥ ೧೯ ॥

ಅಮುದುರ್ಣಂಡು ಸಗ್ಗಿಗ ।
ರಮರ ಲೋಕದೊಳಿರ್ದುರ್ ।
ಕ್ರಮತಪ್ಪಿ ಭವವನೆಯ್ದುವರು ॥
ಕ್ರಮತಪ್ಪದಿನಿದುಂಡು ।
ಭ್ರಮೆಯೇಕೆಮಗೆಂಬೊ ।
ಲ್ಕಿ ಮಿರ್ದಿಕ್ಷುಜಂತ್ರ ಕೂಗುವವೂ ॥ ೨೦ ॥

ಮಲೆಯ ಮಾರುತನಿಪ್ಪ ।
ನೆಲೆ ಮಾಧವನ ಮನೆ ।
ಜಲರುಹಾರಿಯ ನಿಜವಾಸ ॥
ದೊಲು ಶೈತ್ಯ ಸೌರಭ ।
ಕಲಿತವಾಗಿಹುದು ನಿ ।
ರ್ಮಲ ಜಲ ಭರಿತರವಟಿಗೆ ॥ ೨೧ ॥

ಪಲ್ಲವಾಧರದನು ।
ಣ್ಣಲ್ಲದ ಮಿಗೆ ಬೆಚ್ಚು ।
ವುಲ್ಲೆಗೆಂಗಳ ಕುಂಭ ಕುಚದಾ ॥

---

1 ಡೆಗೊ (ಇ.) 2 ವುರ್ (ಉ, ಎ, ಕ, ಗ.)

ವಲ್ಲರಿ ಮಧ್ಯದ ।
ಲಲ್ಲೆ ವಾತಿನ ಕಬ್ಬು ।
ವಿಲ್ಲನಾಗವಮದರ್ಧವರಿವಾ ॥ ೭೨ ॥

ಹೊಸ ಹರೆಯದ ತೋರ ।
ದಸಿಗಲೆಗಳ ಪೆಣ್ಗ ।
ಳೊಸೆದಿರೆ ಕಂಡು ಪಥಿಕರೂ ॥
ಬಿಸಿಲು ಪತ್ತಿರ್ದತಿ ।
ತೃಷೆಯ ಮರೆದು ಕಾವು ।
ನೆಸುಗೆಗೀಡಾಗಿ [1]ನಿಂದಿ[1]ಹರು ॥ ೭೩ ॥

ಆರವೆ ದೇವಾ ।
ಗಾರ ಪೂವಾಟಿಕಾ ।
ಕಾರವೆ ಪೂರ್ಣ ತಟಾಕಾ ॥
ಪೂರಿತ ನದಿನದ ।
ಸೇರಿಪ್ಪುದಾ ವೋ ।
[2]ಪೂ[2]ರ ಬಳಸಿದುದ್ಯಾನಾ ॥ ೭೪ ॥

ನೆಲ್ಲಿ ಪ್ರಿಯಂಗು ಕ ।
ನ್ನೆಲ್ಲಿ ಹರಾ[3]ಕ್ಷ್ಷ ಕಂ ।
ಕೆಲ್ಲಿ ತೀವಿದ[3] ಚೂತ ಕಲ್ಪಾ ॥
ವಲ್ಲಿ ತಿಲಕ ಪೂಗ ।
ಬಿಲ್ವ ಮಂದಾರ ತೆಂ ।
ಗೆಲ್ಲೆಡೆಯು ರಾರಾಜಿಪವು ॥ ೭೫ ॥

---

1-ರುಚಿ (ಅ, ಇ, ಎ, ಗ, ಚ, ಜ, ಟ). 2-ಹ (ಅ, ಇ, ಉ, ಕ.) 3-ಕ್ಷಿಯಿ(
ಕೆಲ್ಲ ತೀವಿದ (ಎ, ಜ.)

ಸುರಗಿ ತಮಾಲ ಪಾ ।
ದರಿ ಪನಸೀಳೆ ಖ ।
ರ್ಜೂರ ವಕುಳೇಲ್[1]ವಾ[1] ಲವಂಗಾ ।
ಸುರಹೊನ್ನೆ ಬಾವನ್ನ ।
ಕುರುವಕ ದ್ರಾಕ್ಷೆ ಭಾ ।
ಸುರ ನಾಗವಲ್ಲಿ ಕದಂಬಾ ॥ ೭೬ ॥

ಜಂಬು ಜಂಭೀರ ದಾ ।
ಳಿಂಬಗಳಲರ್ದ ಪೂ ।
ದೊಂಬೆಗೆ ಕವಿದು ಝೇಂಕರಿಪಾ ॥
ತುಂಬಿ ಕೀರಂಚೆ ಸೌ ।
ರಂಭ ಪರಮೆ ಕೋಕಿ ।
ಲಂಬರು[2]ಹಿ[2]ಗಳ ವಿಲಾಸ ॥ ೭೭ ॥

ಇರಲಿತ್ತ ಬನ ಮುಂದೆ ।
ಪರಿಕಾವಳೆಯಮಿರ್ಪು ।
ದುರುತರ ಘಾತವೆಂತೆನಲು ॥
ಸರಸಿಜೋದ್ಭವನೀ ।
ಧರೆಯ ರಚಿಸುವಂದು ।
ಮರೆದನೀ ಎಡೆಯನೆಂಬಂತೆ ॥ ೭೮ ॥

ಆದಿ ಭೈರವನ ಶ್ರೀ ।
ಪಾದಗಳಿಹವಲ್ಲಿ ।
ಕಾದಿಹೆನೆಂದಹಿರಾಜ ॥

---

೧ವ (ಉ, ಎ, ಕ, ಗ, ಚ, ಜ, ಟ.) 2·ಷ (ಅ, ಇ, ಒ.)

ಐದೆ ಬಳಸಿ ನಿಂದ |
ಭೇದವೆಂದೆನಿಪುದ |
ತ್ಯೋದಯ ರಚಿತಸ್ಮರಗೋಂಟಿ || ೭೯ ||

ಸೋಮ ಸೂರಿಯ ವೀದಿ |
ರಾಮಣೀಯಕವೆತ್ತ |
ಹೇಮದಾ ರನ್ನದುಪ್ಪರಿಗೆ ||
ಭೂಮಿಪರಗಣಿತ |
ಸಾಮಂತರಸದೃಶ |
ಕೋಮಲೆಯರ ಕೇರಿಗಳೂ || ೮೦ ||

ರನ್ನದ ರಜತದ |
ಧಾನ್ಯದ ಕಾಂಸ್ಯ ಬಾ |
ವನ್ನ ದೇವಾಂಗ ಝುಲ್ಲರಿಯ ||
ಚಿನ್ನ[1]ದ ರತಿ[1] ರಾಗ |
ವನ್ನೀವ ತಾಂಬೂಲ |
ದುನ್ನತ ಕುಸುಮದಂಗಡಿ[2]ಯೂ[2] || ೮೧ ||

ಮತ್ತ ಗಜಂಗಳ |
ವೊತ್ತ ಸುಳಿವ ರಾಜ |
ಪುತ್ರರ ತುರುಗದೇರಾಟ ||
ತತ್ತಮಾಸಾಳ್ಕಲ್ಲ |
ರೊತ್ತೊತ್ತೆ ಚರಿಪ ಸ |
ದ್ವೃತ್ತ ಕುಚೆಯರ ಸಂದಣಿಯೂ || ೮೨ ||

---

1–ವರದ (ಬ.) 2–ಯಾ (ಬ, ಗ, ಚ.)

ಜೂಜಿನ ಚದುರಂಗ ।
ದೋಜೆನೆತ್ತದ ಜೊ[1]ತ್ತು ।
ಮಾ[1]ಜನಾಗಮುದರ್ಥವರಿವಾ ॥
ರಾಜ ಕುವರರಿಂದ ।
ರಾಜಿಸುವುದು ರಾಜ ।
ರಾಜನೂರಂತೆ ಮೋಪೂರು ॥ ೮೩ ॥

ಸೋಮ ಸೂರ್ಯಾನ್ವಯ ।
ಭೂಮಿಪರಿಂದ ಸೇ ।
ನಾಮಣಿ ಮಂತ್ರಿಗಳಿಂದಾ ॥
ಸಾಮಜ ಘೋಟಕ ।
ಸ್ತೋಮಗಳಿಂದಭಿ ।
ರಾಮವಾಗಿಹುದು ಮೋಪೂರು* ॥ ೮೪ ॥

ಶೂಲಿಯ ಬೆಸನಾಂತು ।
ಕಾಲ ಭೈರವನತಿ ।
ಲೀಲೆ ಮಿಕ್ಕಾಪುರದೊಳಗೆ ॥
ಪಾಲಿಸುತಖಿಳ ಜ ।
ನಾಳಿಯನತಿ ಮಹಿ ।
ಮಾಲಂಬದಳೆದಿರುತಿಹನು ॥ ೮೫ ॥

ಆ ಪುರಕಧಿಪತಿ ।
ಶ್ರೀ ಪತಿವಂಶದ ।
ಭೂಪರೊಳಧಿಕನೆಂದೆನಿಸಿ ॥

---

1-ಮು । ನೊ (ಗ.) * ಈ ಪದ್ಯ (ಎ.) ಪ್ರತಿಯಲ್ಲಿಲ್ಲ.

ಯೆ ಪೊತ್ತು ಕೀರ್ತಿ ಪ್ರ |
ತಾಪದಿಂ ಬಾಳ್ವನೂ |
ರ್ವಿಪ ಸಂಗಮರಾಜನಣುಗ || ೮೬ ||

ಕಮಲಜಾತನ ಚೆಲ್ವು |
ಕಮಲಜಾತನ ಜಾಣ್ಮೆ |
ಕಮಲಗೈ ಕುವರನ ಚಾಗ ||
ಕಮಲ ಮಿತ್ರನ ವೀರ |
ಕಮಲ [1]ವೈರಿ[1]ಯ ಶಾಂತಿ |
ಕಮಲ ಭೃತ್ಸಖನ ಸೌಭಾಗ್ಯ || ೮೭ ||

ಇನಕುಲ ಜಾತ ಪಾ |
ವನ ಚಾರು ಚರಿತನ |
ವನಿಪಾಲ ಭೈರವರಾಜ ||
ತನಗಿದಿರಾರಿಲ್ಲ |
ವೆನಿಸಿ ಬಾಳ್ದಿರ್ಪನಾ |
ತನ ರಾಣಿಯಧಿಕ ಕಲ್ಯಾಣಿ || ೮೮ ||

ಚಲುವಿನೊಳ್ ಸೊಬಗಿನೊಳ್ |
ಸುಲಲಿತಾಚಾರದೊಳ್ |
ಕುಲದೊಳ್ ಭಾಗ್ಯದೊಳು ಭೋಗದೊಳು ||
ಸಲೆ ಸತ್ಯ [2]ಶೌ[2]ಚದೊಳ್ |
ಛಲದೊಳು ಸತಿಕುಲ |
ತಿಲಕವೆನಿಪ ಮಹಾದೇವಿ || ೮೯ ||

---

1. ಮಿತ್ರ (ಇ, ಉ, ಎ, ಒ, ಚ.) 2. ಶಾ (ಅ, ಉ, ಗ, ಚ.)

ಎಸೆದಳಮಲತರ |
ಶಶಿ ಮುಖಿ ಮಹಾದೇವಿ |
ವಸುಧಾಧಿಪತಿ ಭೈರವಾಂಕ ||
ಕುಸುಮ ಗಂಧದೊಲು ಕಾ |
ಯುಸುವಿನೊಳ್ಮಾರುತಾ |
ಗಸದೊಲನನ್ಯ ಭಾವ[1]ದೊಳು[1] || ೯೦ ||

ಆನೆ ಕುದುರೆ ಮಂತ್ರಿ |
ಸೇನೆ ಭಂಡಾರ ದೇ |
ಶಾನೀಕ ಹಿತರಾಪ್ತ ಸಖರು ||
ಏನು ಕೊರತೆಯಿಲ್ಲ |
ದಾ ನೃಪನಿರುತಿರ್ಪ |
ದಾನಾನೇಕಾದಿ ತತ್ಪರಂನೂ || ೯೧ ||

ಗೋವಸು [2]ಕನ್ನಿಕಾ[2] |
ಭೂವರ ವಸ್ತ್ರಾನ್ನ |
ಪಾವನತರ ಗೃಹ ಕ್ಷೇತ್ರ ||
ದೇವಗೇಹಾದಿ ನಾ |
ನಾವಿಧ ದಾನವ
ಭೂವರಮಾಳ್ಪ ಸಂತಸದಿ || ೯೨ ||

ಪರಮಾನುರಾಗದಿಂ |
ದಿರುತ ಭೈರವರಾಜ |
ವರ ವೇದ ಶಾಸ್ತ್ರಾಗವಿತ್ತುಗಳ ||

---

1-ದಲಿ (ಅ, ಇ, ಉ, ಕ, ಗ, ಚ, ಜ, ಟ.) 2-ನೀಕ (ಇ.); ಕರ್ನಿ (ಜ, ಟ.)

ಕರಸಿ ಸತ್ಯ[1]ದ[1] ಚಾಗ ।
ದುರುಕೀರ್ತಿ ವೀರದೊಳ್ ।
ಪೊರೆದರಾರೆನಲು ಮಾರ್ನುಡಿದ ॥ ೯೩ ॥

ಮುನಿಪಗೆ ತಾನಾಳ್ವ ।
ವನಿಯ ಧಾರೆಯನಿತ್ತು ।
ವನಿತೆ ಸುತರ ನೆರೆಮಾರಿ ॥
ಘನ ಸತ್ಯರೂಪ ಶಿ ।
ವನ ಕೃಪೆಪಡೆದನ ।
ತ್ಯನುಪಮ ನೃಪಹರಿಶ್ಚಂದ್ರ ॥ ೯೪ ॥

ದ್ಯೂತ್ಯ ವ್ಯಸನದಿಂದ ।
ಸೋತು ರಾಜ್ಯವನೆಲ್ಲ ।
ವಾತನಳಲ್ದು ಕುಷ್ಟಾಗಿ ॥
ಧಾತುಗೆಡದೆ ಕಾಮು ।
ರಾತಿಯ ಕೃಪೆಯಿಂ ಪು ।
ನೀತನಾದನು ನಳನೃಪತಿ ॥ ೯೫ ॥

ಚಾಪಾಗಮಾಭಿಗ್ನ ।
ಶ್ರೀಪತಿಯುರು ಕುಲ ।
ದೀಪ ಸತ್ಕೀರ್ತಿ ಕಲಾಪ ॥
ಏ ವೊತ್ತುರಿಪು ಚಯ ।
ಲೋಪ ಸದ್ಧರ್ಮ ಸ್ವ ।
ರೂಪನಾ ಪುರಪು[2]ಚ್ಛ[2]ರಾಯ ॥ ೯೬ ॥

---

1-ವ (ಅ); ರ (ಕ.) 2 ಶ (ಆ. ಇ. ಎ [illegible]

ಕಾಮಸನ್ನಿ[1]ಭ ಪುಣ್ಯ |
ನಾಮನುದ್ಧ[1]ತ ಕೀರ್ತಿ |
ಕಾಮಿನಿಯಾಣ್ಮ ಸದ್ಗುಣ್ಯ ||
ಧಾಮ ಸಂಗ್ರಾಮಾರಿ |
ಭೀಮ ಪುರೋರವ |
ಭೂಮಿ ಪಾಲಕನೊಪ್ಪುತಿಹನು || ೯೭ ||

ಸಗರನಾತ್ಮಜರೆಲ್ಲ |
ಬಗಿದವನಿಯ[2] ಮುನಿ |
ಪಗೆ ಮುನಿಯಲು[2] ಮುನಿ ಮುನಿದು ||
ಭುಗಿಲಸುರು[3]ಪೆ[3] ತಪ |
ಮಿಗೆ ಸ್ವರ್ನದಿಯ ಬೇಗ |
ಭಗಿರಥ ತಂದ ಕೇಳರಸಾ || ೯೮ ||

ಕಾಮಧೇನುವಿಗಾಗಿ |
ಜಾಮದಜ್ಞನ ಕೊಂದ |
ಭೂಮಿಪ ಕಾರ್ತವೀರ್ಯನನೂ ||
ನಾಮವ ಪರಶುಗೈ |
ರಾಮ ತೊಡೆದನೆಂದು |
ಪ್ರೇಮದಿಂ ಪೇಳ್ದ[4]ಪು[4]ರಾಣಿ || ೯೯ ||

ಕೇಳಿ ಸಂತಸದೊಳ |
ಗಾಳುತ್ತಲತಿ [5]ಚಾ[5]ಗ |
ದೇಳಿಗೆಗೊಡಲಿತ್ತರಾರು ||

1–ಸುದ್ಧಾಮ ಸನ್ನು ( ಇ )   2–ಪೂಗೆ ಮುನಿಪಗೆ ತಾ ( ಇ )   3–ಪಿ (ಇ, ಎ, ಒ.)
4–ಪೌ (ಅ, ಇ, ಎ, ಒ.)   5–ಘೋ ( ಕ )

ಪೇಳೆನ್ನೊಳೆನೆ ಏನೆ |
ಯಾಳಾಪದಿಂದುರೆ |
ಪಾಳಿಯಿಂದುಸುರ್ದನಾ ಕ[1]ಧಿಕ[1] || ೧೦೦ ||

ವಿತರಣ ಗುಣದೊಳ |
ಪ್ರತಿಮನಾಗಿರುತ ಮಾ |
ಪತಿ ಬೇಡೆ ಕವಚವನಿತ್ತೂ ||
ನುತ ಕೀರ್ತಿವಡೆದಸೀ |
ಕ್ಷಿತಿಯೊಳಗತಿ ತ್ಯಾಗಿ |
ಹಿತ ಕರ್ನನೆಂಬುದೆ ತಥ್ಯ || ೧೦೧ ||

ಬಲಿ ಭೋಜ ಶಿಬಿ ಮುಂಜ |
ಕಲಿಮಹಂಧಾತನ |
ಚಲಿತ ಜೀಮೂತ ದಧೀಚಿ ||
ಸಲೆ ದುಂದುಮಾಂಕರು |
ಜ್ವಲ ಕೀರ್ತಿಯಿಂದೆ [2]ಭೂ[2] |
ಲಲನಾ ವಲ್ಲಭರಾದರರಸಾ || ೧೦೨ ||

ಎನೆ ನಸುನಗುತ ಕೇ |
ಳ್ದನು ನಿತ್ಯಪದವಾಂತ |
ದನುಜ ಪುಂಗವರ್ಗಳದಾರು ||
ಎನಲುಸುರ್ದನು ಸೌಂದ |
ರನು ಮಹಾಕಾಯರ |
ತ್ಯನುಪಮ ವೀರ ವಿಕ್ರಮರು || ೧೦೩ ||

1_ಥೆಯ (ಕ.) 2_ಶೋ (ಅ, ಉ, ಎ, ಕ, ಗ, ಟ.)

ಪೊಡಮಟ್ಟು ಭಾರ್ಗವ ।
ನಡಿಗೆ ನಿತ್ಯತ್ವವ ।
ಕೊಡು ಜರಾ ಜನ್ಮದುರ್ಲಿಪಿಯಾ ॥
ತೊಡೆಯೆನಲತಿ ಮೆಚ್ಚಿ ।
ನುಡಿದನೀ ಮುಕ್ತಿಗೆ ।
ಪಡಿಗಾಣೆನೆನುತ ಪೇಳಿದನು ॥ ೧೦೪ ॥

ಧರಣಿಪಾಲಕ ನಹುಷ ।
ಪಿರಿದು ಗರ್ವದಿ ದರ್ವೀ ।
ಕರನಾದ ಪಾಂಡುನಂದನರೂ ॥
ದುರುಯೋಧನರು ಜೂಜಿ ।
ನುರುವಣೆಯಿಂ ಕಾದಿ ।
ಪರಮ ಮುಕ್ತಿಯ ಕಂಡುದಿಲ್ಲ ॥ ೧೦೫ ॥

ಪರದಾರದಿಂ ಕೆಟ್ಟ ।
ಸುರಪ ಕೀಚಕ ದಶ ।
ಶಿರ ರಘುರಾಮರ್ಗೆ ಮುಕುತಿ ॥
ದೊರಕಿತಿಲ್ಲಿಲ್ಲ ತ್ರೈ ।
ಪುರದ ದಾನವರು ಪುರ ।
ಹರನಂಬಿಗುಣಿಸಾದರಲ್ಲ ॥ ೧೦೬ ॥

ಭಾಸುರತರದ ಮೇ ।
ಘಾಸುರ ಪಂಚಮೇ ।
ಧ್ರಾಸುರ ದಕ್ಷ ನೃಪಿಂಹ ॥

ಮೋಷದಾನವ ಮ |
ಹಿಷಾಸುರ ಮಧುಕೈಟ |
ಭಾಸುರರರಿಯರ್ ಶಂಕರನ || ೧೦೭ ||

ಕರಿದಾನವನು ಜಲಂ |
ಧರ ಶುಂಭ ನಿಶುಂಭಾ |
ಸುರ ವ್ಯಾಘ್ರ ಲಾಳ [1]ಮಾ[1]ತಂಗಾ ||
ಸುರ ರಕ್ತಬೀಜಾ |
ಸುರ ವೈತಾಪಿಯರ್ |
ಪರಮನಂಘ್ರಿಯ ಕಂಡುದಿಲ್ಲ || ೧೦೮ ||

ಅಂತಾಗಿ ನೀವೀರ್ವ |
ರುಂ ತಪದಿಂದಿ[2]ರಿ[2] |
ಕಂತುಮರ್ದನ ನಿಮ್ಮ ಮನದಾ ||
ಚಿಂತೆಯನಳಿವನೆಂ |
ಬಂತಸ್ತವರಿಪಿ ಪೋ |
ದಂ ತವೆ ದಾನವಾಚಾರ್ಯ || ೧೦೯ ||

ಹರ ಹರ ಎನುತ ಸೌಂ |
ದರ ಮ[3]ಹಾ[3]ಕಾಯರ |
ಚ್ಚರಿಯ ಪಂಚಾಗ್ನಿ ಮಧ್ಯದೊಳು |
ಪರಶಿವ ಧ್ಯಾನ ಮು |
ಪ್ಪುರಿಗೊಂಡು ಸೂಜಿಯೊಳ್ |
ಶಿರವೂರಿ ಪದಗಳ ನೆಗಹಿ || ೧೧೦ ||

---

1-ಮ (ಇ, ಉ, ಕ, ಟ) 2-ರೆ (ಉ, ಛ, ಜ, ಟ.) 3-ಹಂ (ಇ, ಉ, ಛ, ಟ.

ಧ್ಯಾನಿಸುತ್ತಿರಲು ಭ ।
ವಾನಿಯರಶನವು ।
ರಾನೀಕ ಸಹಿತಲ್ಲೈತಂದು ॥
ಮಾನಸದಿಷ್ಟ[1]ವ ।
ದೇನೇನುಸುರುಸು ।
ರಾ[1]ನೀವೆನೆಂದೆನ್ನಲೊಡನೆ ॥ ೧೧೧ ॥

ದೇವ ಈ ಕಾಯುವ ।
ನೀವೆ ಭುಂಜಿಸಿಯೆಮ್ಮ ।
ಪಾವನ ಮಾಳ್ಪುದೆಂದೆನಲು ॥
ಭೂವಳಯದಿ ಸೈಪಿ ।
ನಾವಾಸ ತಿರುಕಾಳ ।
ತಿವಳಿಯದಿ ವೃಗವಾಗಿ ॥ ೧೧೨ ॥

ಇರೆ ಕಾಳಹಸ್ತಿ ಈ ।
ಶ್ವರನ ಕನ್ನಿಕೆಯರೀ ।
ರ್ವರು ಗಿಳಿ ಘಟ ಸರ್ಪನೊಂದು ॥
ಚಿರ ಕಾಲ ಪೂಜಿಸಿ ।
ವರವ ಪಡೆದರೆಂದು ।
ನರನಾರಾಯಣರಲ್ಲಿಗೆಯ್ದಿ *॥ ೧೧೩ ॥

ಬಂದು ಪೂಜಾರಿ ಕಂ ।
ಣಂದನೆಂಬ ನಾಮ ।
ದಿಂದಲ್ಲೈದನೆ ನಿಮ್ಮ ಹತಿಸಿ ॥

---

1_ವೆ । ನೆನುಸುರುಸುರು ನಾ (ಕ, ಚ.) *ಈ ಪದ್ಯ (ಎ, ಚ.) ಪ್ರತಿಗಳಲಿಲ್ಲ.

ತಂದೆಮಗುಣಲಿಕ್ಕು |
ವಂ ದಿಟವೆನೆ ಮಿಗೆ |
ವಂದಿಸಿ ಹರಿಣ ರೂಪಾಗಿ || ೧೧೪ ||

ಇರು[1]ತೆ[1] ಕಣ್ಣಪ್ಪನ |
ಸರಳಿಂದಲಳಿದು ಶಂ |
ಕರಗುಣಿಸಾಗಿ ಸನ್ಮುಕ್ತಿ ||
ಪರರಾದರೆಂದುರೆ |
ಯೊರೆದ ಪುರಾಣಿಯು |
ವರ ವಚನಕೆ ಭೈರವಾಂಕಾ || ೧೧೫ ||

ಪುಳಕಿಪೊಡಲು ಸುಖ |
ಜಲ ಸ್ವೇದ ಗದ್ಗದ |
ಗಳ ಕಂಪಿಸುವ ಕರಯುಗಳಾ ||
ಕಳ[2]ವ[2]ಳಗಹ ಚಿತ್ತ |
ದೊಳು ಬೆಸಗೊಂಡನು |
ಬಃಕಿತಿಹಾಸ ಕೋವಿದನಾ || ೧೧೬ ||

ವೇದ ಪುರಾಣ ಸಂ |
ಪಾದನೆಗೆಯ್ವನಾ |
ರಾಧಿಪ ಪರಮ ಚಿನ್ಮಯನಾ ||
ಆದಿಶೈವದ ಭೇದಾ |
ಭೇದವನರಿವನೂ |
ವೀರಧವ ಭೈರವರಾಜ || ೧೧೭ ||

---

1-ತ (ಕ, ಗ, ಚ, ಜ, ಟ) 2-ವೆ (ಇ, ಉ, ಎ, ಕ, ಗ, ಚ.)

ಲಲಿತ ಕೈವಲ್ಯಕ್ಕೆ ।
ನೆಲೆಯಾಗಿ ತೋರ್ಪ ನಿ ।
ರ್ಮಲ ಶುದ್ಧ ಶೈವದೊಳ್ ಶಿವನಾ ॥
ಒಲಿಸಿದರುಂಟಿ ಪೇ ।
ಳಿಲೆ ಪುರಾಣಿಯೆಂ ।
ದೊಲಿದು ಭೈರವರಾಜ ಕೇಳೆ ॥ ೧೧೮ ॥

ಪ್ರೇಮವರಿದು ಪೇಳ್ದ ।
ನಾ ಮಹಾ ಪೌರಾಣಿ ।
ಭೂಮಿಪ ಕರಿಕಾಲಚೋಳ ॥
ಕಾಮಹರಗೆ ನಿತ್ಯ ।
ನೇಮವ ನ[1]ಡೆ[1]ಸಿದು ।
ದ್ದಾಮ ಚಾರಿತ್ರವೆಂತೆನಲು ॥ ೧೧೯ ॥

ಮುನ್ನ ಗಜೇಂದ್ರನೆಂಬ ।
ವನೋರ್ವ ಹರಿಭಕ್ತ ।
ಸನ್ನಿದನಾಗಿರಲ[2]ವ[2]ನು ॥
ಪನ್ನತಿಯಿಂದ ಭೋ ।
ರನೆ ಬಂದೌಡಿದ ।
ತ್ತ್ಯುನ್ನತ ಬಲ ಶಿಂಶುಮಾರ ॥ ೧೨೦ ॥

ಪಿಡಿಯಲೊಡನೆ ಮೊರೆ ।
ಯಿಡೆ ಕೇಳ್ದು ಚಕ್ರಿ ಬಂ ।
ದೊಡನೆ ಬಲ್ಗಾಳಗವಾಡಿ ॥

---

1-ಡ (ಇ, ಎ, ಗ, ಚ, ಜ, ಟ) 2-ದ (ಇ, ಉ, ಎ, ಜ.)

ಘುಡುಗುಟ್ಟಿ ಕುಂಭೀರ |
ನೊಡಲ ಬಗಿದು ಬೇಗ |
ಬಿಡಿಸಿದ ತನ್ನ ಬಕುತನನು || ೧೨೧ ||

ಭರದಿ ಬಂದವನು ಶ್ರೀ |
ಹರಿಯಡಿಗೆರಗಿ ನಾ |
ಪರಿಭವದೊಳು ಬರಲಾರೆ ||
ಕರುಣಿಸು ಮುಕ್ತಿಯ |
ಸ್ಥಿರವನೆನಲು ಪೋಗು |
ತಿರುಕಾಳಹಸ್ತಿ ಲಿಂಗವನು || ೧೨೨ ||

ಪೂಜಿಸುತಿಹನತಿ |
ರಾಜಹಂಸನ ಶಿಷ್ಯ |
ತಾ ಜೇಡ ರೂಪಿಂದವನೆನಲು ||
ನೈಜವೆಯೆಂಬಿಭ |
ರಾಜನೊಪ್ಪೇಳ್ದನಂ |
ಭೋಜನಾಭನು ವಿನಯದಲಿ || ೧೨೩ ||

ಯತಿ ರಾಜಹಂಸನು |
ನ್ನತ ಪದ್ಮ ಗಿರಿಯೊಳ |
ಪ್ರತಿಮ ಶಿವನ ಧ್ಯಾನಿಪಾಗಾ ||
ನುತ ಜೇಡನೊಂದು ಪ |
ತ್ತಿತ ಕಂಡು ತೆಗೆದಿಟ್ಟ |
ನತಿ ಭರದಿಂ ಗುಣಗರ್ಭಾ || ೧೨೪ ||

ತನುವಳಿದೂರ್ಜನಾ |
ಭನ ಕಾಣುತೆ ಯತಿ ಹಂಸ |
ಕನಲುತೆಲವೊ ಗುಣಗರ್ಭ ||
ನಿನಗಿದರಂದವ |
ಕ್ಕೆನುತ ಶಪಿಸೆ ಪದ |
ವನಜಕ್ಕೆ ಮಣಿದು ನಿಶ್ಯಾಪಾ || ೧೨೪ ||

ಎನಗೆಂದಿಗಹುದು ಪೇ |
ಳೆನಲು ಕಾಳಹಸ್ತಿಲಿಂ |
ಗನ ಪೂಜೆ ಮಾಡುತಿರಲ್ಕೆ ||
ನಿನಗೆ ಸುಜನ್ಮವ |
[1]ಕ್ಕೆನುತ ಬೀಳ್ಕೊಡೆ[1] ಬಂದ |
ಹನೆ ಮುಂದೆ ನೀನಲ್ಲಿಗೈದಿ || ೧೨೫ ||

ಹರನ ನೀ ಮೂ[2]ರು ವಾ[2] |
ಸರದಿ ಪೂಜೆಯ ಮಾಡು |
ತಿರು ನಿನ್ನ ಪೂಜೆಯೆಲ್ಲವನು ||
ಪರಿಹರಿಸಾ [3]ಜೇ[3]ಡ
ಭರದಿ ತನ್ನೂಲಿಂದ |
ಪಿರಿದಲಂಕಾರವ ಮಾಡಿ || ೧೨೬ ||

ಇರಲಿತ್ತ ಭರದಿ ಬಂ |
ದೊರಸಿ ನೀ ಪೂಜಿಸು |
ತ್ತಿರೆ ಪಗೆಗೊಂಡೀರ್ವರಳಿಯೆ ||

---

1-ಪ್ಪುದು ಪೋಗೆನಲು (ಅ, ಇ, ಒ, ಕ.) 2-ರವ (ಉ, ಎ, ಕ, ಗ, ಚ, ಜ, ಟ.)
3 ಜಾ (ಖ.)

ಕರಿಕಾಲಚೋಳನೆಂ |
ಬರಸು ನೀ ಕಳಚಂಗ |
ಪೆರುಮಾಳೆ[1]ಯಾತ[1]ನಾದಪನು || ೧೨೮ ||

ಎನೆ ಬೀಳುಕೊಂಡು ಬಂ |
ದನಘ ಕಾಳಹಸ್ತಿಲಿಂ |
ಗನ ಪೂಜೆ ಮಾಡುತಿ[2]ನಿಬರೂ[2] ||
ಕಿನಿಸಿಂದ ಕಾದಿ ತ |
ತ್ತನುವಳಿ[3]ದೀರ್ವರ[3]
ವನಿಪಾಲರಾಗಿ ಪುಟ್ಟಿದರು || ೧೨೯ ||

ಕೇಳು ಭೈರವರಾಜ |
ಪಾಳಿಯಿಂ ಕರಿಕಾಲ |
ಚೋಳನಾಗುದಿಸಿ ಗಜೇಂದ್ರ ||
ವ್ಯಾಳ ಕಂಕಣನಾಳಿ |
ನಾಳಾಗಿ ಸಂತತ |
ಬಾಳುವನತಿ [4]ವಿಭವದಲಿ[4] | ೧೩೦ ||

ಚತುರಂಗ ಸೇನೆಯಿಂ |
ಹಿತರಾಪ್ತ ಸಖರಿಂದು |
ನ್ನತ ದೇಶ ಕೋಶ ಮಂತ್ರಿಗಳಿಂ ||
ನುತ ಸರ್ವ ವಿದ್ಯವ |
ಪ್ರತಿ ರೂಪು ಲಲಿತ ವಿ |
ಶ್ರುತ ಕೀರ್ತಿ ವಿತರಣ ವೀರಾ || ೧೩೧ ||

1-ತಾ(ಗ.) 2-ಬ್ಬರಿಗೆ(ಎ.) 3-ದಾಗಲ(ಅ, ಇ, ಎ, ಚ.) 4-ವೈಭವಮೊಳು(ಚ

ಈಶಭಕ್ತಿಗೆ ನಿಜ |
ವಾಸ ಕಲ್ಮಷ[1]ವಿ |
ನಾ[1]ಶನವರತ ಸಂತೋಷ ||
ಭಾಸುರತರ ಶೈವ |
ವೇಶನ ಶ್ರೀ ಪಾರ್ವ |
ತೀಶನ ಭಜಿಸುತಾವಾಗಾ || ೧೩೨ ||

ಇರುತೊಂದು ದಿನದಲ್ಲಿ |
ಕರಿಕಾಲಚೋಳನು |
ಹರುಷದಿಂ ವೈಹಾಳಿ ಪೋಗಿ ||
ಬರೆ ಮೃಗವನು ಕಂಡು |
ತುರಗವ ಬೆನ್ನಟ್ಟಿ |
ಸೊರಗಿದ ಏಣನ ಕಂಡು *|| ೧೩೩ ||

ಒಕ್ಕಯ್ಯ [2]ಶಿರವು ಮ |
ತ್ತೊಕ್ಕಯ್ಯ ಕರವಾಳು |
ಮೊ[2]ಕ್ಕಳದಲೆಯು ಬತ್ತಲೆಯಾ ||
ಒಕ್ಕು ಸೂಸುವ ರಕ್ತ |
ಹೆಕ್ಕಳ ವಿಟ ಮುಂದೆ |
ಚಕ್ಕನೆ ಕಣ್ಣ ಮುಂದಿರಲು *|| ೧೩೪ ||

ಆ ರಕ್ಕಸಿಯ ರೂಪ |
ನಾರಿಯ ಚೆಲ್ಮೆಯು |
ವಾರಿಯ ಏಣನು ಕುಡಿಯೆ ||

---

1–ನಿಶಾ ಪೂಶನ (ಇ, ಉ, ಎ, ಕ, ಚ, ಜ, ಟ.); ವಿನಾಶ ಪೂಷ (ಗ.)
2–ಕರವಾಳು | ಒಕ್ಕಯ್ಯ ಶಿರವಿರಲ್ | ಭೊ (ಉ, ಕ, ಟ.) * ಈ ಪದ್ಯಗಳು (ಅ, ಇ, ಎ, ಗ.) ಪ್ರತಿಗಳಲಿಲ್ಲ,

ಜಾರಿ ಶಿರವು ಖಡ್ಗ |
ಭೋರನೆ [1]ಬೀಳಲು |
ಕಾರಣವೇನು ಪುಸಿಯದ[1] *|| ೧೩೫ ||

ದಿಟದಿ ಪೇ[2]ಳೆನೆ[2] ದೇವ |
ಸಟೆಯಲ್ಲ ಎಲೆರಾಯ |
ವಿಟ ಮೋಹದಿಂದೆನ್ನ ಪತಿಯಾ ||
ಘಟವನಳಿದು ಬೇಗ |
ವಿಟನ ಬೆನ್ನಲಿ ಬಂದೆ |
ದಿಟಕರ ಕಂಡೆನಚ್ಚರಿಯಾ *|| ೧೩೬ ||

ಪೋಗೆಂದು ಕಳುಪೆ ತಾ |
ನಾಗುರುವಂ ಕೇಳ್ದ |
ಡಾಗಮ ಸಿದ್ಧಾಂತಯೋಗಿ ||
ಚಾಗವಾವಿಗೆ ಪಂದಿ |
[3]ಮೂಗ ವ್ಯೈಹಿಷಾ[3]ನೆಯ |
ಆಗಲರುಪೆ ಕೇಳ್ದು ಬಳಿಕ || ೧೩೭ ||

ದಾನ ಧರ್ಮಗಳನ |
ತ್ಯಾನಂದದಿಂ ಮಾಡು |
ತಾನತಜನ ಬಂಧುವೆನಿಸಿ ||
ತಾನಿರ್ದು ಬಳಿಕೆಲ್ಲ |
ಭೂನುತವೆನಿಸಿದ |
ನೂನದುಜ್ಜುಗವ ತೊಡಗಿದ || ೧೩೮ ||

---

1-ಬಿದ್ದುದ | ಸಾರಿ ಕಂಡನು ಚೋಳ ನೃಪನು (ಉ, ಚ, ಟ.) 2-ಳ್ವೆನು (ಚ.
3-ಯೂಗ ಮಾಹಿಷಿಯಾ (ಉ.) *ಈ ಪದ್ಯ (ಅ, ಇ, ಗ, ಎ.) ಪ್ರತಿಗಳಲಿಲ್ಲ.

ಪರಮ ಪಾವನರೂಪ |
ನುರು ಕುಂಭಜಾತನ |
ಕರದ ಕಮಂಡಲೋದಕವು ||
ಪರಿಪೆಲ್ಲರಘವ ಸಂ |
ಹರಿಪ ಕಾವೇರಿಯು |
ಕರಿಕಾಲಚೋಳ ಭೂಪಾಲ || ೧೩೯ ||

ಕಟ್ಟಿಗಟ್ಟಲು ತನ್ನ |
ಪಟ್ಟಣದೊಳ[1]ಗ[1]ಷ್ಟ |
ಶಿಷ್ಟರಾಪ್ತರು ಮಂಡಲಿಕರು ||
ಕಟ್ಟಾಳ್ಗಳಿರದೆಯಾ |
ಸೃಷ್ಟಿಯ ಜನರೆಲ್ಲ |
ಬಿಟ್ಟಿ ಮಾಡುವರು ಭಕ್ತಿಯಲಿ || ೧೪೦ ||

ಹೊತ್ತು ಕಲ್ಮಣ್ಣನ್ನೆ |
ವತ್ತಾರು ದೇಶದ |
ತ್ತ್ಯುತ್ತಮ ರಾಜ ಕ್ಷತ್ರಿಯರು ||
ಅತ್ತಿತ್ತ ಚಲಿಸದೆ |
ಪೊತ್ತು ಚೋಳನ ಚಿತ್ತ |
ವೃತ್ತಿಗೆ ಬಂದಿರುತಿಹರು || ೧೪೧ ||

ಬಾರದರಾರು ವಿ |
ಚಾರಿಸೆ[2]ನುತ[2] ಚೋಳಭೂ |
ವರ ಕೇಳಿ ಗಾಂಗೆಯನು ||

---

1. ಗ (ಇ.) 2. ನಲು (ಇ, ಎ.)

ಸಾರಿ ಕೈಮುಗಿದೋರ್ವ |
ಬಾರ[1]ನದಾರೆನೆ[1] |
ವೀರನು ಮುಕ್ಕಣ್ಣ ಚೋಳ || ೧೪೨ ||

ಕರೆ[2]ನೊ[2]ಮ್ಮೆ ಬಾರದಿ |
ರ್ದರೆ ತಕ್ಕುಗೆಡಿಪೆನೆಂ |
ದೊರೆದ ಚೋಳನ ಬಿರುನುಡಿಯ ||
ಶಿರಸವಹಿಸಿಕೊಂಡು |
ತ್ವರಿತದಿಂ ಬುದ್ಧಿವಂ |
ತರ ರಾಯಭಾರಿ ಮುಖ್ಯರನು || ೧೪೩ ||

ಕಳು[3]ಪೆ[3] ಬಂದವರು ಕೈ |
ಗಳ ಮುಗಿದೇಳೇಳು |
ಬಳಿಗೆಲಸದ ಬಿಟ್ಟಿಗೆನಲು ||
ಮುಳಿದು ಘೂರ್ಮಿಸಿ ಕೋಪ |
ದಳೆದು ನೂಂಕಿಸಿದ ನಾ |
ಗಳೆ ನಿಂದು ಮುಕ್ಕಣ್ಣ ಚೋಳ || ೧೪೪ ||

ಬಂದವರೀ ಹದನ |
ನೆಂದು ಹೇಳದ ಮುನ್ನ |
ಹೆಂದದ ಕೋಪ ಉ[5]ಬ್ಬರಿ[5]ಸಿ ||
ಇಂದೀಗ ತನ್ನ ಕ |
ಣ್ಣೊಂದನೊಡೆವೆನೆನು |
ತಂದು ತದ್ರೂಪ ನೆಲದೊಳು || ೧೪೫ ||

---

1–ದಸವನತಿ (ಗ, ಚ) 2 ಯೊ (ಎ) 3 ಪಿ (ಉ, ಎ, ಚ.) ಪ್ಪವಿ (ಗ.)

ಬರೆದು ನೊಸಲಗಣ್ಣ |
ಕರದ ಕೋಲಿಂದ ನಿ |
ಬ್ಬರದಿ ತಿವಿಯೆ ಪಟ್ಟನೊಡೆ[1]ಯೆ[1] ||
ಕುರುಡನಾಗುತ ಹರ |
ಹರಯೆಂದು ಕಾಳಹಸ್ತಿ |
ಯರಸನ ಕೇಳಿ ಪೇಳಿದನು || ೧೪೬ ||

ಪೋಗಾತನಿಗೆ ನತ |
ನಾಗು ಕಣ್ಣಿತ್ತಪ |
ನೀಗೆನೆ ಭರದೊಳೈತಂದು ||
ರಾಗವಳಿದು ಮಣಿ |
ದೀಗೆನ್ನ ಕಣ್ಗೊಡು |
ಭೂಗಭಿನವ ರುದ್ರಚೋಳ || ೧೪೭ ||

ಎಂದು ಬಿನ್ನವಿಸೆ ಬಾ |
ರೆಂ[2]ದಪ್ಪಿ[2] ಮುಂಡಾಡೆ |
ಬಂದುದು ಭಾಳಲೋಚನವು ||
ಇಂದು ಮೊದಲು ಭಕ್ತ |
ರೆಂದುದ ಮೀರದಿ |
ರೆಂದು ನಿಯಮಿಸಿ ಬಳಿಕಾ || ೧೪೮ ||

ಕರೆಸಿ ಪ್ರಧಾನನ |
ಮರಳಿ ಕೇಳಿದನು ಭೂ |
ವರಚೋಳನೆನ್ನನುಮತಿಯ ||

1-ದು (ಅ, ಇ, ಉ, ಎ, ಕ, ಚ, ಜ, ಟ.) 2-ದೆತ್ತಿ (ಇ, ಉ, ಕ, ಗ, ಚ, ಜ, ಟ.)

ಶಿರಸವಹಿಸಿಕೊಳ್ಳ |
ದರಸುಗಳಾರೆನೆ |
ಕರವ ಮುಗಿದು ಬಿನ್ನವಿಸಿದಾ || ೧೪೯ ||

ದೇವ ಬಿನ್ನಪ ವಾಸು |
ದೇವ ಕುಲಾಗ್ರಣಿ |
ಪಾವನ ಚರಿತ ಕಾಶಿಯೊಳು ||
ತಾವರೆಗೆಳೆಯನ |
ಸೇವಕ ಪ್ರಭಾಕರ |
ಭೂವರನೆನಿಪೋರ್ವನಹನೆ || ೧೫೦ ||

ಆತನಿರವು ವಿಪ |
ರೀತವಯ್ಯಯ್ಯ ಖ |
ದ್ಯೋತಗೆ ರಸ ರಸಾಯನವಾ ||
ಶಾತ ಭಾಜನವ ತೀವಿ |
ಪ್ರೀತಿಯಿಂ ನಮಿಸಲ |
ತ್ಯಾತುರವಂತರಿಕ್ಷದೊಳು || ೧೫೧ ||

ಪೋಗೆ ಕಾಣುತ ಭಾನು |
ಬೇಗವಾರೋಗಿಸಿ |
ಭೋಗೆ ಪೊಂಬರಿಯಾಣವಿರಿ[1]ಸೆ[1] ||
ರಾಗವೊಡೆದ ನೃಪ |
ನೀಗವ ಬಂದಪ |
ನೀಗೆಮ್ಮ ಕಜ್ಜದುಜ್ಜುಗಕೇ || ೧೫೨ ||

---

1 ೩. (ಸ )

ಎನೆ ಪೋಗಿ ಕರೆ ಬಾರೆ |
ನೆನಲಾಣೆಯಿಡು ಬೇಗ |
ದಿನಕರನಲ್ಲಿಗೆ ಪೋಪಾ ||
ಕನಕ ಪಾತ್ರೆಯನೆಂಬ |
ಜನಪನ ನುಡಿಗೆ ಭೋಂ |
ಕನೆ ಚಮೂಪತಿ ಬಂದು ಕರೆಯೆ || ೧೫೩ ||

ಬಾರೆನೆನಲು ರಾಯ |
ಭಾರಿ ಕೋಪದಿ ಚೋಳ |
ಭೂರಮನಾಣೆಯನಿಡಲೂ |
ಭೂರಿ ಪೊಂಬರಿಯಾಣ |
ತೇರ್ರೈಸಿ ನಿಲೆ[1]ಕಂಡು[1] |
ಸೂರ್ಯಗೆ ಮೊರೆಯಿಡಲಿಳಿದು || ೧೫೪ ||

ಬಂದು ಪ್ರಭಾಕರ |
ಗೆಂದನು ದಿನಮಣಿ |
ಇಂದು [2]ಶೇಖ[2]ರನ ಭಕ್ತರಿಗೆ ||
ಮುಂದುವರಿದು ನೇವೆ |
ಯುಂ ದಿಟ ಮಾಡು ನೀ |
ನೆಂದು ಬೋಧಿಸಿ ಭಾನು ಪೋಗೆ || ೧೫೫ ||

ಕಾಣುತ ನಡುಗಿ ಮುಂ |
ಕೇಣವರಿತು ಚೋಳ |
ನಾಣೆಯ ಬಿಡು ಬಿಡೆಂದವಗೆ ||

---

1. ನೊಂದು (ಅ, ಇ, ಉ, ಎ, ಗ, ಚ, ಜ, ಟ.) 2. ಶಬ (ಏ.)

ಮಾಣದೆರಗೆ ಬಿಟ್ಟ |
ನಾಣೆಯುಪೊಂಬರಿ |
ಯಾಣ ಪೋದುದು ಸೂರ್ಯನೆಡೆಗೆ || ೧೫೬ ||

ಭರದಿ ಬಂದಾ ಪ್ರಭಾ |
ಕರ ರಾಯ ಚೋಳಭೂ |
ವರೆಗೆ ನಮಿಸಿ ಬೆಸನೇನು ||
ಪರಮಪುರುಷ ಎನೆ |
ಹರಸೇವೆಯನು ಭಕ್ತ |
ರೊರೆದುದ ಮಾರಬೇಡೆಂದೂ || ೧೫೭ ||

ಕಳುಪಲತ್ಯಾನಂದ |
ದೊಳು ಚೋಳರಾಯನ |
ಪಳಿಯುರ ವಳಿಯ ತಾನಾಗಿ ||
ಬಳವೆತ್ತ ಶಿವಸೇವೆ |
ಯೊಳು ಸುಖಮಿರೆ ಪೊಳ |
ಲೊಳು ಚರರಿಗೆ ಬೆಸಸಿತ್ತು || ೧೫೮ ||

ಕಟ್ಟಿಗೆಲಸವೆ ತ |
ನ್ನಿಷ್ಟವಾಗಿರೆ ಹಿಡಿ |
ಪಿಟ್ಟೆಯನಾ ಚರರೈದಿ ||
ಪಿಟ್ಟವ್ವೆಯನು ಪಿಡಿ |
ದಷ್ಟರೊಳಗೆ ಶಿವ |
ದಿಟ್ಟಡೆ ಕೇಳ್ದು ಸೋಮೇಶಾ || ೧೫೯ ||

ಪರಮ ಗಾಮಧಿರೂಪ |
ಧರಿಸಿ ಪಿಟ್ಟವ್ವೆ ಇ |
ದಿರೆ ನಿಂದು ಚಿಂತೆ ಬೇಡಿದಕೆ ||
ಅರಸನ ಬಿಟ್ಟೆಯು |
ತ್ರರಿಸುವೆ ನೀನೆನ್ನ |
ಪೊರೆ ಪೊಟ್ಟೆಗಶನವನಿ[1]ಕ್ಕಿ[1] || ೧೬೦ ||

ಅದ ನೊಡಂಬಟ್ಟು ಮ |
ರಿದ ಭಕ್ಷ್ಯವೆಲ್ಲಾ ನಿ |
ನ್ನದು ಉಳಿದಿಲ್ಲವೆನ್ನೆಯದೂ ||
ಇದು ದಿಟವೆನೆ ಪೋಗಿ |
ಮುದದಿ ಮೃತ್ತಿಕೆಯ ಪೊ |
ತ್ತುದರಾಗ್ನಿ ಎತ್ತಿ ಮಂದಿರಕೆ || ೧೬೧ ||

ಬರೆ ಭಕ್ಷ್ಯವೆಲ್ಲೊಡ
ದಿರೆ ಹೊಟ್ಟೆತುಂಬ ಉಂ |
ಡುರವಣಿಸುತ ಮತ್ತೆ ಪೋಗಿ ||
ಪರಿಹಾಸಮಾಡುತೆ |
ಲ್ಲರ ಕುಣಿ[2]ಸಾಡು |
ತ್ತಿರೆ[2] ಕಂಡು ವೇತ್ರಧಾರಕರೂ || ೧೬೨ ||

ಪೊಯ್ಯಲವರ ಕೆ[3]ಟ್ಟು[3] |
ಬಯ್ಯೆಕೋಪದಲುಬ್ಬಿ |
ಪೊಯ್ಯಲಾಗೆಲ್ಲ ಮಾನವರ ||

---

1-ಕ್ಕು (ಅ.)   2-ದಾಡುತಿಪ್ಪನ (ಗ)   3-ಟ್ಟು (ಗ.)

ಮುಯ್ಯ ತಾಗಲು ಅಯ್ಯೋ |
ಅಯ್ಯೋ ಎಂದೊರಲುತಿ |
ಹುಯ್ಯಲ್ಗೆ ನೃಪ ಬೆರಗಾ[1]ಗೆ[1] || ೧೬೩ ||

ಏನಿದಾಶ್ಚರ್ಯ ವಿ |
ದೇನದ್ಭುತವೊ ಹೊ |
ಹೋ ನಿಲ್ಲಿ ನಿಲ್ಲಿರೆಂದೆನುತ ||
ಭೂನಾಥ ಕೇಳಲಿ |
ದೇನೆಂದರಿಯೆವೆಂಬ |
ಮಾನವರುಗಳ ದಟ್ಟೈಸುತಾ || ೧೬೪ ||

ಎಲ್ಲಿಯದ್ಭುತವೆಂದು |
ಬಲ್ಲಾಳುಗಳ ಕೇಳೆ |
ಖುಲ್ಲನಿದೋರ್ವ ಗಾವದಿಯಾ ||
ಕೊಲ್ಲಲಿಂತಾಯ್ತು ಭೂ |
ವಲ್ಲಭ ಯೆನೆ ನೋಳ್ಪೆ |
ಕೊಲ್ಲಿರಿನ್ನೊಮ್ಮೆ ಎಂದೆನಲೂ || ೧೬೫ ||

ಕರವೆತ್ತಿ ಪೊಯ್ಯೆ ಪೊಯಿ |
ದರ ತಾಗೆ ಕಂಡಂಜು |
ವರಿಗಂಜಬೇಡೀತನೆಮ್ಮಾ ||
ಗಿರಿಜಾರಮಣನೆಂದು |
ಚರಣ ಕಮಲಕೆ ಬಿ |
ದ್ದಿರಲಾಗ ವಿಪರೀತ ಚರಿತಾ || ೧೬೬ ||

---

1–ಗಿ (ಅ, ಇ, ಉ, ಗ, ಜ) ; ವ (ಎ, ಚ, ಟ)

**ನದಿ ಜಟಾ ಶಶಿ ಪಂಚ** |
ವದನ ಮೂಗಣ್ಣಿಸಾ |
ಯುಧವಾಂತ ದಶಭುಜಾಜಿನವು ||
ವಧು ಫಣಿದೊಡವು ಭಸ್ಮ |
ಮಧುಸೂದನಕ್ಷಾಂಕ |
ಪದ ನಂದಿ ಹರಿಯಜಾಮರರೂ || ೧೬೭ ||

ಉಫೆ ಚಾಂಗು ಭಲಯೆನೆ |
ನೆಗಪಿ ಚೋಳನ ಮಿಗೆ |
ನಗಜಾತೆಯಾಣ್ಮ ನೋಳ್ಪಾಗಾ ||
ಗಗ[1]ನಾಂಗಣದಿ[1] ದುಂದು |
ಭಿಗಳು ಮೊಳಗೆ ದೇವಾ |
ದಿಗಳೆಲ್ಲ ಪೂಮಳೆಗರೆಯೆ || ೧೬೮ ||

ಸ್ವಾಮಿ ಸರ್ವಜ್ಞ ನಿ |
ರಾಮಯ ಶರಣ ಹೃ |
ದ್ಧಾಮ ಲೀಲಾ ಲೋಲಾನಂತಾ ||
ಸೋಮಶೇಖರ ಭಕ್ತ |
ಪ್ರೇಮಿಯೆಂದಾ ಚೋಳ |
ಭೂಮಿಪನುತಿಸುತಿಂತೆಂದಾ || ೧೬೯ ||

ಆರು ಬಲ್ಲರು ನಿನ್ನಾ |
ಕಾರವನು ಸರ್ವ |
ಪ್ರೇರಕ ನಿರೂಪದಳೆದಾ ||

---

1-ವರಂಗದಿ (ಅ, ಇ. ಕ, ಚ, ಜ, ಟ.)

ಕಾರಣವೇಂ ಪೇಳು |
ಮಾರಾರಿಯೆನಲು ಕಾ |
ವೇರಿಯು ಬಿಟ್ಟೆ ನಿಮಿತ್ತಾ || ೧೭೦ ||

ಎನಲಾ[1]ರ[1]ಗೋಸುಗ |
ವೆನೆ ಚೋಳ ಕೇಳೆಮ್ಮ |
ಜನನಿ ಪಿಟ್ಟವ್ವೆಗೋಸುಗವು ||
ಎನೆ ನಡನಡುಗಿ ಕೆ |
ಟ್ಟೆನು ಕೆಟ್ಟೆ ದೇವಯೆಂ |
ಬನಿತರೊಳ್ಬಂದಡಿಗೆರಗಿ || ೧೭೧ ||

ನಿಂದ ಪಿಟ್ಟವ್ವೆಯು |
ನಿಂದುಶೇಖರ ಕೋರಿ |
ದಂ ಧರಾದೀಶನೆಮ್ಮವ್ವಾ ||
ಎಂದೆನೆ ಚರಣಾರ |
ವಿಂದಕೆ ಮಣಿದತಿ |
ಸಂವಣಿಗೊಳುವನಿತರೊಳೂ || ೧೭೨ ||

[2]ತೆಗೆದೆ[2]ತ್ತಿ ಶಿವ ಝುಗ |
ಝುಗಿಪ ಪುಷ್ಪಕದೊಳು |
ಜಗವೆಲ್ಲ ಕಾಬೊಲಿಂಬಿಟ್ಟು ||
ನೆಗೆದನಾಗಸಕೆಂಬ |
ಬಗೆಯು ಭೈರವರಾಜ |
ನಿಗೆ ಪೇಳ್ದನೊಲಿದು ಪುರಾಣಿ || ೧೭೩ ||

---

1-ಗ (ಒ, ಕ, ಗ, ಚ) 2-ಮೊಗವೆ (ಇ, ಉ, ಎ, ಗ, ಚ, ಜ, ಟ)

ಬಳಿಕ ನೋಡುತ್ತ |
ಲಿಳೆ ಬೆರಗಾಗೆ ಭೂ |
ತಲನಾಥನತಿ ಹರುಷದಲಿ ||
ಮೊಳೆವಾಶ್ರ ಗದ್ಗದ |
ಗಳ ಕಂಪ ಸ್ವೇದಮೋ |
ಣ್ಪುಳಕದೊಡಲು ಸಹವಾಗಿ || ೧೭೪ ||

ಹರನನುಣಿಸಿ ಹರ |
ಗಿರಿಗೆಯ್ದೆ ಪಿಟ್ಟವ್ವೆ |
ಯರು ಪೋದರೀಗಲಂತವರಾ ||
ತರುಣನು ಮಾಡುವ |
ಚ್ಚರಿಯ ನೋ[1]ಡೆಂದು[1] ಭೂ |
ವರ ಬಂದ ಶಂಕರಾಲಯಕೆ || ೧೭೫ ||

ಸರ್ವಜ್ಞ ನಮಿತ ಸು |
ಪರ್ವ ಮನ್ಮಥ ಗರ್ವ |
ಪರ್ವತಾಶನಿಯ ನಿಬದ್ಧ ||
ನಿರ್ವಾಣದಾಯಕ |
ಶರ್ವಾಣಿಯರಸ ಎಂ |
ದುರ್ವಿಪ ಕರಿಕಾಲಚೋಳಾ || ೧೭೬ ||

ವೇದಂಗಳರಿಯದ |
ನಾದಿ ದೇಶಿಕ ನಿಜ |
ವಾದ ವಿನೋದ ನಿರ್ಬೇದ್ಯ ||

---

1-ಡುತ (ಇ, ಉ, ಎ.) ; ಡೆನುತ (ಕ, ಗ, ಚ, ಜ, ಟ.)

ಶ್ರೀಧರ ನಮಿತ ದ್ವಿ |
ಪಾದ ಪಂಕರುಹಯೆಂ |
ಬಾ [1]ಧ್ವ[1]ನಿಗೇಳ್ದು ಶಂಕರನೂ || ೧೭೭ ||

ವಸುಧೀಶ ನಿನ್ನ ಮಾ |
ನಸದಿಷ್ಟವೇನುಸು |
ರುಸುರೆನೆ ನಿಮ್ಮ ಪ್ರಸಾದ |
ಕುಸುಮ ವಾಸನೆಯಿಂ[2]ದ |
ಬಿಸುವ[2]ಂದ ಮಣ್ಮಳೆ |
ಗಸುಗೊಟ್ಟ ನಮ್ಮಯ್ಯನಿನ್ನು || ೧೭೮ ||

ನಾನಾಳ್ವವಸಿಯೊಳು |
ಮಾನವರೆಲ್ಲರು |
ದೀನರಲ್ಲದೆ ಬಾಳುವಂತೆ ||
ಕನಕಮುಯುವಪ್ಪ |
ಸೋನೆಗರೆವುದೆನೆ |
ಶ್ರೀನಾಥ ನಮಿತಪದಾಬ್ಜ || ೧೭೯ ||

ಸೂಳೆ ನಂಬಿಗೆ ಕರು |
ಣಾಳು ದೇವರ ದೇವ |
ಪಾಳಿಯಿಂ ಪೊಮ್ಮಳೆಗರೆದಾ ||
ನೇಳುದಿವಸವೆಂದು |
ಪೇಳುವರವರಂತೆ |
ಚೋಳನೃಪನ ದೇಶದೊಳಗೆ || ೧೮೦ ||

---

1_ದ (ಅ, ಇ, ಉ, ಕ, ಗ, ಚ, ಜ, ಟ.) 2_ದು । ಬ್ಬಸ ಬಂದ (ಗ.)

ಸುರಿದ ಚೋಳನ ಮನ ।
ಹರುಷದ ಬೀಜವಂ ।
ಕುರದೋರಿ ನಿಮಿರ್ದು ಪಲ್ಲಯಿ[1]ಸಿ[1] ॥
ವರ ಫಲವಾಗಲಿ ।
ಧರೆಯೆಲ್ಲ ವಣಿದತಿ ।
ಸಿರಿಯೊಳಗೋಲಾಡುವಂತೆ ॥ ೧೮೧ ॥

ರಾಜಶೇಖರನಹಿ ।
ರಾಜ ಕಟಕನ ಗೋ ।
ರಾಜ ವಾಹನನ ಶ್ರೀಪಾದ ॥
ರಾಜೀವಗಳ ನೆರೆ ।
ಪೂಜಿಪೆನೆಂದು ರಾ ।
ರಾಜಿಪ ಸಕಲ ವಸ್ತುಗಳಾ ॥ ೧೮೨ ॥

ತರಿಸಿ ಪೂಜೆಯನಲಂ ।
ಕರಿಸಿ ಷೋಡಶದುಪ ।
ಚರಿಯನೆಸಗಿ ಚೋಳರಾಯಾ ॥
ಮರಳಿ ನೈವೇದ್ಯವಾ ।
ಸರವಾಗಲೊಡನೆ ಪೊಂ ।
ದೆರೆಯನಡ್ಡೈಸಡ್ಡಬಿದ್ದೂ ॥ ೧೮೩ ॥

ಪರಮಪಾವನ ಚಾರು ।
ಚರಿತ ಸಚ್ಚಿತ್ರಭಾ ।
ಸ್ಫುರಿತ ಚರಾ ಚರ ಭರಿತಾ ॥

---

1_ಸೆ (ಒ. ಕ.)

ನಿರುತ ನಿರ್ವಾಣ ಸ |
ಚ್ಚರಿತ ಎನ್ನಯ ಕುಲ |
ಗುರುವೆ ನೀನಾರೋಗಿಸಯ್ಯ || ೧೮೪ ||

ಎನ್ನಯ್ಯ ಎನ್ನಾಳ್ದ |
ಎನ್ನ ಭಾಗ್ಯವೆ ಎನ್ನ |
ರನ್ನವೆ ಎನ್ನ ನಿಧನವೆ ||
ಎನ್ನ ಸುಧೆಯೆ ಎನ್ನ |
ಹೊನ್ನೆ ಎನ್ನಾನಂದ |
ದುನ್ನತಿಯಾರೋಗಿಸಯ್ಯ || ೧೮೫ ||

ಮೂರು ತನುವಿನೊಳ |
ಗಾರಂಗದೊಳು ಮೂವ |
ತ್ತಾರು ತತ್ವಗಳೊಳಹೊರಗೆ ||
ನೂರೊಂದು ಸ್ಥಲದಿ ಬೇ |
ರೂರಿಪ್ಪ ಗೌರಿಯು |
ನೀರ ನೀನಾರೋಗಿಸಯ್ಯ || ೧೮೬ ||

ಎಂದು ಬಿನ್ನೈಸೆ ಬಾ |
ಲಿಂದುಶೇಖರ ಗಿರಿ |
ನಂದನೆ ಸಹಿತವಾರೋಗಿಸುತ ||
ಮುಂದುವರಿವ ತೃಪ್ತಿ |
ಯಿಂದ ತೇಗಿದನು [1]ಡ[1] |
ರ್ರೆಂದು ಚೋಳನ ಕಿವಿಗಿನಿದಾ || ೧೮೭ ||

---

1-(ಡು ಅ, ಇ, ಉ.)

ಕರೆಯುಲಾಕ್ಷಣ ಪೊನ್ನ |
ತೆರೆಯ ತೆಗೆಯೆ ಬರಿ |
ಪರಿಯಾಣವಿರೆ ನಲಿನಲಿದೂ ||
ಗಿರಿಜಾವರಗೆ ದಿನ |
ಚರಿ ಮೂರು ವೇಳೆಯೀ |
ಪರಿ ಮಾಳ್ಪೆನೆಂದೆನುತಾಗ || ೧೮೮ ||

ಮರಳಿ ಪೂಜೆಯುನಲಂ |
ಕರಿಸಿ ಸಾಸಿರ ಪೊನ್ನ |
ಪರಿಯಾಣವಿಟ್ಟು ಶಾಖಗಳ ||
ಪರಿಮಿತ ಭಕ್ಷ್ಯಗಳ |
[1]ವರ[1]ಪಾಲು ಕೆನೆಮೊಸರ್ |
ಪರಮಾನ್ನ ರಸ ರಸಾಯನವಾ || ೧೮೯ ||

ತವರಾಜದೊಳ್ತಿರುಳ್ |
ನವ ಘೃತ ಪನಿಸೀರು |
ಸವಿಯ ಸಾಲಿಡುವ ಪಾ[2]ನಗಳಾ[2] ||
ಶಿವನ ಮುಂದಿಳುಹಿ ಪೊಂ |
ಜವನಿಕೆಯುನು ಸಾರ್ಚಿ |
ಕಿವಿಯೊಡ್ಡಿ ಕೇಳುತ ನೃಪನೂ || ೧೯೦ ||

ಹರನೆ ನಾಮಾಡಿದ |
ಪರಿಕರವತ್ಯಂತ |
ಪಿರಿದು ನೀನಾರೋಗಿಸೆಂದೂ ||

---

1-ಚಿಲು (ಅ, ಇ, ಉ, ಎ, ಒ, ಗ, ಜ.), ಚಿರ (ಕ.) 2-ಲನಗಳ (ಕ, ಚ, ಟ.)

ಶರಣೆಂದು ಪುನರಪಿ |
ಕರವ ಮುಗಿದು ಚೋಳ |
ನಿರುತಿರೆ ಶಿವ ಸುಮ್ಮನಿದಲೂ || ೧೯೧ ||

ಸವಿವ ಚ[1]ಪ್ಪ[1]ರಿವ ನುಂ |
ಗುವ ಕೈಯ್ಯ ನೀಡಿ ಸು |
ರಿವ ದನಿ ಇನಿಸಿಲ್ಲದಿರಲೂ ||
ಅವನಿವ ಹೆದರಿ ಪೊಂ |
ಜವನಿಕೆದೆಗೆದು ನೋ |
ಳ್ಪವಸರದೊಳಗಿಟ್ಟ ಬೋನಾ || ೧೯೨ ||

ಅಚ್ಚಳಿಯದಿರಲ್ಕೆ |
ಬೆಚ್ಚುತಲಾಗ ನೊರೆ |
ಯುರ್ಚಿ ಕೊರಳಿಗಮರಿಸಲೂ ||
ಮೆಚ್ಚಿ ಚೋಳನ ಕೈಯ್ಯ |
ನೊಚ್ಚತ ಪಿಡಿದನ |
ತ್ಯಚ್ಚರಿಯಡರೆ ಭೂತಳಕೆ || ೧೯೩ ||

ಆ[2]ಸು[2]ರವೇಕೆ ಭೂ |
ಮೀಶ ನಾನುಂಡು ದೇ |
ವಾಸುರರರಿಯೆ ಚೆನ್ನನೊಳು ||
ಮೋಸವಿಲ್ಲೆಂದು ದೇ |
ವೇಶ ನುಡಿಯಲು ಕ |
ಟ್ಟಾಸೆಯಿಂದಿಂತೆಂದದಾರು || ೧೯೪ ||

---

1–ಪ್ಪಿ (ಗ, ಚ.)   2–ಸೂ (ಇ, ಉ, ಎ, ಕ. ಗ. ಚ.)

ಎಂದು ಕೇಳುವ ನೃಪ |
ಗೆಂದನಭವನೆನ್ನ |
ತಂದೆ ಮಾದರಚೆನ್ನನೊಡನೆ ||
ಸಂದೇಹವಳಿದುಂಡೆ |
ನೆಂದೆನೆ ಕೇಳುತಾ |
ನಂದದೊಳವರ ಮೆಲ್ಲಡಿಯಾ ೧೯೫ ||

ನೋಡಬೇಕೆನುತವ |
ತ್ಯಾಡಂಬರದೊಳಾಗ |
ರೂಢೀಶ ನಡೆತರುತಿರಲೂ ||
ಮೂಡುವಾನಂದಾಶ್ರು |
ಕೋಡಿವರಿಯಲುಕ್ಕಿ |
ಪಾಡುತ ಗದ್ಗದರವದಿ || ೧೯೬ ||

ದೊರೆಗಳ ದಂಡಾಧಿ |
ಪರ ಪಲ ಪಲ ನೆಲ |
ದರಸು ಮುಕ್ಕಳ ಮನ್ನೆಯರಾ ||
ತರುಣಿಯರುಗಳ ಭೂ |
ವರರ ಚಾತುರ್ಬಲ |
ವೆರಸಿ ನಡದ ಚೋಳರಾಯಾ || ೧೯೭ ||

ಭೇರಿ ನಿಸ್ಸಾಳಗ |
ಳಾರುಭಟೆಯ ಕಹ |
ಳಾರವ ಭಟ್ಟ ಮಾಗಧರಾ ||

ಭೂರಿ ಸಿನಾದದೊಳ್ |
ಧಾರುಣಿಪತಿ ಸಂಭ್ರ |
ಮಾರವ್ಯವಡೆಯೆ ಸಂತಸದಿ || ೧೯೮ ||

ಕುಸುಮಾಂಜಲಿಯನಾಂತು |
ವಸುಧೀಶ ಬರುತ ಎ |
ನ್ನಸುಪೆ ಎನ್ನಯ್ಯ ಚೆನ್ನಯ್ಯ ||
ಪಶುಪತಿಯೊಡನೆ ಭುಂ |
ಜಸಿದಯ್ಯ [1]ಎಸೆವ[1] ಚಿ |
ದ್ರಸರೂಪಾ ಉದಾರಚೆನ್ನಯ್ಯ || ೧೯೯ ||

ಎನುತ ಕೊಂಡಾಡುತ |
ವನಿಪಾಲ ಚೆನ್ನನ |
ಮನೆಯ ಮುಂಗಡೆನಿಂದು ನೋಡಿ ||
ಕನಕ ರತ್ನಾಂಜುಲಿ |
ಯನು ಮಾಡಿ ಶ್ರೀಪಾದ |
ವನಜಕೆರಗೆ ಪಿಡಿದೆತ್ತಿ || ೨೦೦ ||

ಎಲೆಲೆ ಭೂ ರಮಣ ನೀ |
ಕುಲವಂತ ನಾನೆ ದು |
ಷ್ಕುಲವಂತನರಿದರಿದೆನ್ನ ||
ನೆಲೆಗೆ ಬಹರೆಯೆನೆ |
ಮಲಹರ[2]ನರಿ[2]ದುದೆ |
ಕುಲ ಉಳಿದೆಲ್ಲ [3]ದು[3]ಷ್ಕುಲವು || ೨೦೧ ||

---

1-ಅಯ್ಯ (ಇ, ಉ, ಎ, ಕ, ಗ, ಚ, ಜ, ಟ.) 2-ನೊಲಿ (ಗ, ಚ, ಜ, ಟ

ವೇದ ವೇದಾಂತ ಬ್ರಂ |
ಹಾದಿ ದೇವರು ನಿಮ್ಮ |
ಪಾದವ ಕಾಣರ್ ಕಂಡೀಗ ||
ನಾ ಧನ್ಯನಾದೆನ |
ಯ್ಯೋ ದಯೆಗೆಯ್ಯೆಂದು |
ಭೂಧವ ನಿಭ ಮಸ್ತಕದೊಳು || ೨೦೨ ||

ಹರುಷ ಕೈಮಿಗಿಲು ಕು |
ಳ್ಳಿರಿಸಿ ಥಾಳಿಸುವ ಚಾ |
ಮರಹಲಿದಳಗಳ್ ಮುಂದೆಸೆಯೆ ||
ಮೊರೆವ ಮಂಗಳ ವಾದ್ಯದಿ |
ರುರೆ ಮರ್ಘುರೆಯೆಂಬ |
ಧರಣೀಶರೊತ್ತೊತ್ತೆಯಿಂದಾ || ೨೦೩ ||

ಬರುತ ಚೆನ್ನಯ್ಯ ಶಂ |
ಕರ ಶಶಿಧರ ಶರ್ವ |
ಗಿರಿಜಾವರನ ಗಂಗಾಧರನಾ ||
ಪುರಹರನಂತಕ |
ಹರ ಕಾಮಹರನ ಶ್ರೀ |
ಹರಿಯಕ್ಷಿ ಪಾದಪಂಕಜನಾ || ೨೦೪ ||

ನಿಳಯದ ಮುಂದಿಭ |
ವಿಳಿಯೆ ಕೈಗೊಟ್ಟು ಭೂ |
ತಳನಾಥ ಬರೆ ಬಂದು ಹರನ ||

ದಳವೇರಿ ನೋಡಿ ಪೊಂ |
ಪುಳಿಯೋಗುತಿರೆ ಚಂದ್ರ |
ಕಳೆ ಜಡೆ ಮುಡಿ ದೇವ ತಟಸಿೀ || ೨೦೫ ||

ಐದುವದನ ಮೂ |
ರೈದು ಕಣ್ಣುಗಳೆರ |
ಡೈದು ಭುಜದ ಭಸಿತಾಜಿನ ||
ಕೈದುಗಳ್ ಶಿವೆ ನಂದಿ |
ಸೈದೊಡೆದಕಳಂಕ |
ಮೈದೋರಿ ಚೋಳರಾಯನೊಳು || ೨೦೬ ||

ಸಕಲೇಂದ್ರಿಯವೆ ಲಿಂಗ |
ಮುಖವೆಂದರಿದು ನಿಜ |
ಸುಖವಿತ್ತನೆನಗೆ ಚೆನ್ನಯ್ಯ ||
ಪ್ರಕಟವೆನಿಸುವ ಶೈ |
ವಕಳಾ ವಿಭೇದದೊಳ್ |
ಬಕುತಿ ಮಾಡಿದೆ ಚೋಳ ನೀನೂ || ೨೦೭ ||

ಎಂದು ಕೀರ್ತಿಸುತ ಬಾ |
ಲಿಂದುಶೇಖರ ಹರು |
ಷಂದಳವೇರುತೀರ್ವರನೂ ||
ನಂದೀಶಮರಗಣ |
ವೃಂದ ಪೊಗಳೆ ದೇವ |

ಸುರಿಯೆ ದೇವಾಸುರ |
ಹರಿಯಜ ಮನು ಮುನಿ |
ಗರುಡ ಗಾಂಧರ್ವ ದಿಗ್ವರರೂ ||
ಕರಿಮುಖ ಗುಹ ನಂದೀ |
ಶ್ವರ ಭೃಂಗಿ ವೀರೇಶ |
ನರ ನಾಗ ರುದ್ರಕುವರರೂ || ೨೦೯ ||

ಉಘೆ ಉಘೆಯುಘೆರವ |
ನೆಗೆಯೆ ಚೆನ್ನಯ್ಯನ |
ಬಿಗಿದಪ್ಪಿ ಚೋಳಭೂಮಿಪನಾ ||
ತೆಗೆದಪ್ಪುತತಿ ಕಾಂತಿ |
ಯೊಗು ಪುಷ್ಪಕದೊಳು |
ನಗಜಾಧಿಪತಿಯೊಲಿದಿರಿಸಿ || ೨೧೦ ||

ನಲಿದು ನರ್ತಿಸುವ ಕೋ |
ಮಲೆಯರಿಂ ಪಾಡುತಿ |
ರ್ಪಲಘು ಗಂಧರ್ವ ಕಿನ್ನರರಿಂ ||
ಸಲೆ ಪೊಗಳುವ ದೇವ |
ಕುಲದಿಂ ಕೈಲಾಸಾ |
ಚಲಕೆ ಕೊಂಡೊಯ್ದ ಸೋಮೇಶಾ || ೨೧೧ ||

ಚೆನ್ನಯ್ಯ ಚೋಳಂಗೆ |
ಪನ್ನಗಾಭರಣ ಪ್ರ |
ಸನ್ನನಾದತುಳ ಪ್ರಬಂಧ ||

ಸನ್ನಿದವೆಂದು ಪೇ ।
ಳ್ದನು ಭೈರವರಾಜ ।
ಗಂ ನಾಡೆ ಪ್ರೌಢ ಪುರಾಣಿ || ೨೧೨ ||

ಪೇಳೆ ಭೈರವರಾಜ ।
ಕೇಳುತೊಡನೆ ಭರ್ಗ ।
ಭಾಳಾಕ್ಷ [1]ಭವ[1] ಭೀಮ ಸೋಮಾ ||
ವ್ಯಾಳ ಕಂಕಣ ಕರು ।
ಣಾಳು ದೇವಾಸುರ ।
ಮೌಳಿವಿನ್ಯಸ್ತ ಪಾದಾಬ್ಜ || ೨೧೩ ||

ಹರ ಹರೆನುತ ಮಿಗೆ ।
ಹರುಷಾಶ್ರುವಿಂದಲ ।
ಚ್ಚರಿವಟ್ಟು ಭೈರವರಾಜ ||
ಮರಳಿ ಕೇಳಿದನು ತ ।
ತ್ಪಿರಿಯ ಪುರಾಣಿಯು ।
ಕರಿಯೊಡನಳಿದೂ[2]ರ್ನನಾಭ[2] || ೨೧೪ ||

ಧರೆಯೊಳು ಕಳಚಂಗ ।
ಪೆರುಮಾಳೆಯೆಂದೆನಿ ।
ಪರಸಾಗಿ ಜಸಿಸಿರ್ದನದನೂ ||
ಒರೆಯೆನ್ನೊಳೆಂದತಿ ।
ಹರುಷದಿಂ ಭೈರವೇ ।
ಶ್ವರ ಬೆಸಗೊಳಲು ಮಾರ್ನುಡಿದಾ || ೨೧೫ ||

---

1–ನತ (ಎ, ಒ)  2–ರ್ದನವನು (ಚ)

ಭೂಪ ಕ್ಷತ್ರಿಯ ಕುಲ |
ದೀಪ ಮನ್ಮಥ ಸಮ |
ರೂಪ ವಿಜಯ ಕಲಾ ಪ್ರತಾಪ ||
ಏಪ್ಪೊತ್ತು ಸತ್ಯ ಸ |
ಲ್ಲಾಪ ಸಂಸಾರ ನಿ
ರ್ಲೇಪ ಸುವಿದ್ಯ ಕಲಾಪ || ೨೧೬ ||

ವಿತರಣ ಶೀಲನಾ |
ನತಪಾಲ ಲಲಿತ ವಿ |
ಶೃತ ಕೀರ್ತಿ ಲೋಲ ವಿಶಾಲಾ ||
ರತಿ [1]ಪಾರಿ ಪದವ[1] ನಾ |
ರತ ಪೂಜಿಸುವ ಭಕ್ತಿ |
ಯುತ ನಿಷ್ಕನಾ ಕಳಚಂಗ || ೨೧೭ ||

ಪೆರುಮಳೆಯರು ಶಶಿ |
ಧರವಾರದೊಳು ಪಟ್ಟ |
ದರಸಿ ಚೊಲ್ಲಡಿನಾಚಿ ಸಹಿತಾ ||
ಹರನಾಲಯಕೆ ಬರೆ |
ಪಿರಿಯ ಪೂಜೆಯನಲಂ |
ಕರಿಸುತಿರ್ಪ ಸಮಯದೊಳು || ೨೧೮ ||

ಸಲ್ಲಲಿತಾಂಗದ |
ಪಲ್ಲವಾಧರದೆಳೆ |
ಪುಲ್ಲೆಗಂಗಳಾ ಕುಂಭಕುಚದಾ ||

---

1-ಪತಿ ಪತನ (ಗ.)

ಚೊಲ್ಲಡಿ ನಾಚಿಯರ್ |
ಮೆಲ್ಲನೆ ಮೀಸಲ |
ಕಲ್ಹಾರಕೊಡನೆ ಕೈಯಿಟ್ಟು || ೨೧೯ ||

ಮಾನಲತಾ ನವ್ಯ |
ಲೂನಲವಿತ್ರವ |
ತಾನೆ ಕೊಂಬಂತೆ ಚೊಲ್ಲಡಿಯಾ ||
ಮಾನಿಸಿ ಹರನ ಪ್ರ |
ಸೂನವ ಘ್ರಾಣಿಸ |
ಲಾ ನಾಸಿಕವ ತೋಣೆಯಾಂಡಿ || ೨೨೦ ||

ಭರದಿಂದ ಘರಿ ಘರಿ |
ಘರಿಲೆಂದು ಕೊಯ್ದಿಡೆ |
ಮೊರೆಯಿಡುತ್ತೈತಪ್ಪ[1]ವಳನೂ[1] ||
ಧರಣೀಶ ಕಳಚಂಗ |
ಪೆರುಮಾಳೆ ಕಾಣುತ |
ಚ್ಚರಿಯುವಿದೇನೆಂದು ಕೇಳ್ದ |  || ೨೨೧ ||

ಕರೆಕಂರಸಿಗೆಂದಿಟ್ಟ |
ನರುಗಂಪಿನರಲ ಮುಂ |
ದರಿಯದೆ ಘ್ರಾಣಿಸಲಾಗ ||
ಜರಿದು ಝುಂಕಿಸುತಿದ್ದು |
ಚಿರುತೊಣೆಯಾಂಡಿ ಮೇ |
ಲ್ಕೊರೆದ ನಿನ್ನಳ ಮೂಗನ[2]ಂದೂ[3] || ೨೨೨ ||

---

..ಳವಳನು (ಇ, ಚ.) ; ನಾರಿಯನು (ಎ)  2.ನಲು (ಎ.)

ಘೋೞಿಡುವಬಲೆಯು ।
ರ್ವೇೞಿ ನೃಪತಿ ಕರ ।
ವಾಳ ಜಡಿದು ಕಿನಿಸೇರಿ ॥
ಪಾಳಿ[1]ಯಿಂ[1] ತೊಡೆಯಾಂಡಿ ।
ಪೇೞೆಂದು ನುಡಿದ ಭ ।
ಕ್ತ್ಯಾಳಾಪದೊಂದು ವರ್ಮವನೂ ॥ ೨೨೩ ॥

ಕುಜನ ಸಂಗದಿ ಕೇಡು ।
ಸುಜನರ್ಗೆಂಬಾ ನೀತಿ ।
ತ್ರಿಜಗವರಿಯೆ ಕಾಣಲಾಯ್ತು ॥
ಮುಝು ಪಾಣಿ ಘ್ರಾಣದೊ ।
ಳ್ನಿಜವಿದೆ ಇದಕೆ ಬ ।
ಲ್ಬುಜೆಯೇಕೆ ಹೊ ಹೊ ನಿಲ್ಲೆನುತಾ ॥ ೨೨೪ ॥

ಮೊದಲಪರಾಧಿ ಕೈ ।
ಯದು ಕಡೆಯಪರಾಧಿ ।
ಯದ ಶಿಕ್ಷೆಗೆಯ್ದುದೇನಾಯ್ತು ॥
[2]ವಿಧು[2] ಕಳಾ ಮೌಳಿಗೆ ।
ಮುದವಾಗುವೊಲ್ತನ್ನ ।
ಸುದತಿಯು ಬಲಗೈಯ ಪಿಡಿದು ॥ ೨೨೫ ॥

ಕಡಿದಿಡೆ ಶಶಿ ಗಂಗೆ ।
ಜಡೆ ಪಂಚಮುಖ ಫಣಿ ।
ದೊಡ ದಶಭುಜ ಶೂಲಡಮರೂ ॥

---

1-ಯೆ (ಉ, ಎ, ಕ, ಗ, ಚ.) 2-ವಿಂದು (ಕ.)

ಮಡದಿ ಪೊಂಬುಲಿದೊವ |
ಲುಡಿ ಹರಿಗಣ್ಣ ಮೆ |
ಲ್ಲಡಿಯಾ ಸೋಮೇಶನೊಪ್ಪಿದನೂ || ೨೨೬ ||

[1]ಹರಿ ವಿಧಿ ಸುರರು[1] ದಿ |
ಗ್ಪರ ಮನು ಮುನಿ ಗಣ |
ವರರುಘೆಯುಘೆಯುಘಯೆಂಬ ||
ವರರವದೊಡನೆ ಭೋ |
ರ್ಗರೆವ ದುಂದುಭಿಯೊಳು |
ಸುರಿವ ಸುಮನ ವೃಷ್ಟಿಯೊಳಗೆ || ೨೨೭ ||

ತೊಣೆಯಾಂಡಿಗಿಳೆಯೊಳಾ |
ತೊರ್ಣೆ ಕಳಚಂಗರಿ |
ಗೆಣೆಯಿಲ್ಲವೆಂದಮರ್ದಪ್ಪಿ ||
ತ್ರಿಣಯ ಚೊಲ್ಲಡಿಯ ಪೆ |
ಣ್ಮಣಿಗಂಗಾಸೌಪ್ಟದಾ |
ಕ್ಷಣವಿತ್ತು ಬಳಿಕ ಮೂವರನೂ || ೨೨೮ ||

ತೂಳಗುವ ಪುಷ್ಪಕ |
ದೊಳಗಿಟ್ಟು ರಜತಾ |
ಚಲಕೆ ಕೊಂಡೊಯ್ದ ಸೋಮೇಶಾ ||
ಬಳಿಕಲಿನ್ನೋರ್ವ ನಿ |
ಶ್ಚಲ ಭಕ್ತನುನ್ನತಿ |
ಯಳವ ಕೇಳ್ ಭೈರವರಾಜಾ || ೨೨೯ ||

---

[illegible]

ಮಾಂಗಲ್ಯ ಮಯ ರಿಪು |
ಭಂಗವಶ್ರಾಂತಮ |
ಲಾಂಗ ಶಂಕರ ಪಾದ ಕಮಲ ||
ಭೃಂಗ ಲಾವಣ್ಯಾತ |
ರಂಗನೆಂದೆನಿಸುವ |
ತ್ತುಂಗ ವಿಕ್ರಮಚೋಳರಾಯಾ || ೨೩೦ ||

ಇಂದಿರ ಧನದ ಮು |
ಕುಂದ ಬಲಿಯ ಪಳಿ |
ಪಂ ದಿವ್ಯ ಭೋಗ ಸೌಭಾಗ್ಯ ||
ಚಂದದ ರಾಜ್ಯದೊಳಿರು |
ತೊಂದಿನ ಶೃತಿ ಮತ |
ದಿಂದ ಮೇಲ್ತಿಳಿದು ಚಿಂತಿಸಿದಾ || ೨೩೧ ||

ತನಯನಿಲ್ಲದೆ ಪುಣ್ಯ |
ವಿನಿಸಿಲ್ಲ ಜನಕಗೆಂ |
ಬನುವ ನಿಶ್ಚೈಸಿ ಶಂಕರನ ||
ಮನುಮಥಾರಿಯ ಬೇಳ್ಪೆ |
ನೆನುತ ಸರ್ವಜ್ಞನ |
ನೆನಹು[1] ನೆಟ್ಟನೆ ಕರಿಗೊಂಡು || ೨೩೨ ||

ಧ್ಯಾನಿಸುತಿರಲು ಭ |
ವಾನಿ ಸಹಿತ ಶಿವ |
ತಾನೆ ಮುಂ ಪ್ರತ್ಯಕ್ಷವಾಗಿ[2] ||

---

1-ವು (ಒ)    2-ಗೆ (ಅ, ಇ, ಕ.)

ಮಾನಸದಿಷ್ಟ[1]ವೇ ।
ನೇ[1]ನೀವೆ ಬೇಡೆನೆ ।
ಭೂನಾಥ ಬಿನ್ನವಿಸಿದನೂ ॥ ೨೩೩ ॥

ಕಲೆವಂತ ಸಿರಿವಂತ ।
ಗೆಲವಂತನತಿ ಭುಜ ।
ಒಲವಂತ ದಯಗುಣವಂತ ॥
ಸಲೆ ಭಕ್ತಿವಂತನು ।
ಜ್ವಲ ಕೀರ್ತಿವಂತಾಯು ।
ಚೆಲುವತಿ ಸತ್ಯ ಬಾಲಕನಾ ॥ ೨೩೪ ॥

ಕರುಣಿಸೆನಲು ದೇವ ।
ಗಿರಿಜೆಯು ಮುಡಿಗಂಪಿ ।
ನರಳೊಂದ ಕೊಟ್ಟು ತಾಪೋಗೆ ॥
ಧರಣೀಶ ತಂದು ತ ।
ನ್ನರಸಿ ಪಂಕಜಗಂಧಿ ।
ಗಿರದಿತ್ತು ಸುಖಮಿರುತಿರಲು ॥ ೨೩೫ ॥

ನಳನಳಿಸುತ ಗರ್ಭ ।
ಬೆಳೆದು ಬಾರ್ಕೈಸಿ ಪೊಂ ।
ಪುಳಿಯೋಗಿ ನವಮಾಸವಾ[2]ಗೆ[2] ॥
ಘಳಿಲನುದಯಿಸೆ ಭೂ ।
ತಳವತಿ ಹರುಷವ ।
ತಳೆಯೆ ಸಂತಸ ನೃಪಗಾಗೆ ॥ ೨೩೬ ॥

---

1–ನೆ । ನೆ (ಅ, ಎ, ಕ, ಗ, ಚ.) 2–ಗಿ (ಅ, ಇ, ಎ, ಒ, ಗ.)

ವೆಸರಿಂಟ್ಟರಾಗ ಸಂ |
ತಸದೊಳ್ಳೈವಡಿಚೋಳ |
ವಸುದೀಶನೆಂದು ಭೂಮಿಯೊಳೂ ||
ವಸಗೆ ಬದ್ದರವಾಗೆ |
ಶಿಶುವೇಷದಿಂದ ರಂ |
ಜಿಸಿದ ಕಾರಣಿಕನೇಳನೆಯಾ || ೨೩೭ ||

ವರುಷದೊಳ್ ನೃಪರ ಕು |
ವರರೊಡನಾಡುತ |
ಬರೆ ಬೀದಿಯೊಳು ಮದಸೊಕ್ಕಿ ||
ಕರಿ ಕೊಲ್ಲುತ್ತೈತರೆ |
ಕೆರಳ್ದೊದೆಯಲು ಶಿರ |
ಬಿರಿದು ಘೋಳಿಡುತವನಿಯೊಳೂ | || ೨೩೮ ||

ಬೀಳಲುಂಗುಟದಿ ಶುಂ |
ಡಾಲವ ಪಿಡಿದಿಟ್ಟ |
ನೇಳು ಪ್ರಾಕಾರದಿಂ ಪೊರಗೆ |
ಬೀಳಲದ್ಭುತಕೆ ಭೂ |
ಪಾಲರೆಲ್ಲರು ಭೋಗ |
ದೇಳಿಗೆಯುಳಿದು ರಾಜ್ಯವನೂ || ೨೩೯ ||

ಬಿಟ್ಟು ಮಕ್ಕಳನೋತು |
ಹೆಟ್ಟಗೆಯರ ಹಂಗು |
ಬಿಟ್ಟೋಡಿ ಭೀಕರಡವಿಯಾ ||

ಬೆಟ್ಟ ಗುಹಾಳಿಯೊಳ್ |
ನಟ್ಟಡವಿಯು ಹೊಕ್ಕು |
ಕೆಟ್ಟೆವಿನ್ನು ಹೇಗೆನುತಿಹರೂ || ೨೪೦ ||

ಇತ್ತಲೈವಡಿಯು ಭೂ |
ಪ್ರೋತ್ತಮನಿಗೆ ದೊರೆ |
ವೆತ್ತ ಷೋಡಶ ಪ್ರಾಯವಾಗೆ ||
ಚಿತ್ತದಿ ಹರುಷ[1]ದಾ[1] |
ಳುತ್ತ ವಿಕ್ರಮಚೋಳ |
ಬಿತ್ತರ ಪಟ್ಟಗಟ್ಟಿದನೂ || ೨೪೧ ||

ನಡೆ ದಿಗ್ವಿಜಯಕೆನೆ |
ಪೊಡಮಟ್ಟು ಗಾಂಗೇಯ |
ಪೊಡವಿಪಾಲಕರಾರುವಿಲ್ಲಾ ||
ನುಡಿಯದೇಕೆನೆ ಬಾಲ |
ರೊಡನಾಡುತೀ ಭವವ ನೀ |
ನೊಡೆದುಳಿದಂದು ಕಂಗೆಟ್ಟು || ೨೪೨ ||

ಅಡವಿ ನಿರ್ಧಾಣದೊ |
ಳಡಗಿಹರೆನೆ ಗಡ |
ಗಡನೆ ನಡುಗಿ ಪಾಪವೆನಗೆ ||
ಕ[2]ಡೆಗೆ[2] ಬಂದು[3]ದು[3] ಎನು |
ತೊಡನವರವರೆಲ್ಲಿ |
ರ್ದೆಡೆಗೈದಿ ಕರಕರತಂದೂ || ೨೪೩ ||

---

1-ಗೊ (ಉ, ಚ.) 2-ಡಗಿ (ಉ, ಕ.) 3-ದೆ (ಉ. ಜ.)

ಆವರವರೂರೊಳ |
ಗವರನಿಂಬಿಟ್ಟು ಮೇ |
ಲವರ ಕಾರುಣ್ಯವ ಪಡೆದೂ ||
ಅವನಿಯೊಳ್ ಶಿವಲಿಂಗ |
ಭವನ ಕೋಟಿಯ ಮಾಡಿ |
ಶಿವನ ಶ್ರೀ ಪಾದಪಂಕಜವಾ || ೨೪೪ ||

ನೆನೆಯೆ ಸೋಮೇಶ ಭೋಂ |
ಕನೆ ನಿಜದೋರಿ ಬೇ |
ಡೆನೆ ದೇವನಾ ನಿಮ್ಮ ಶ್ರೀ ಪಾದ ||
ವನಜದೊಳಿರ್ಪ ಶೈಶ |
ವನೆ ಮಾಡು ನೀವೆಂಬ |
ಜನಪನನಿಂಬಿಟ್ಟನಾಗ || ೨೪೫ ||

[1]ಇರುವನ್ನೈ[1]ವಡಿಚೋಳ |
ನಿರುತಿರ್ಪನಿನ್ನೊಂದ |
ಚ್ಚರಿಯ ಕೇಳ್ ಭೈರವರಾಜ ||
ವರ ಧರ್ಮಚೋಳಭೂ |
ವರ ಕರವೂರೊಳು |
ಸ್ಥಿರ ರಾಜ್ಯವಾಳುತೊಪ್ಪಿರಲೂ || ೨೪೬ ||

ಆತನ ಕುವ[2]ರ[2] ವಿ |
ಖ್ಯಾತ ಮಾಜಾತ ಸ |
ಮೇತಾರ್ಥಿ ಜನ ಪಾರಿಜಾತಾ ||

---

1 ಬೇತೆನ್ನೈ (ಅ, ಇ, ಉ, ಒ, ಕ, ಗ, ಜ.) 2_ರಿ (ಉ.)

ಈತನಾರಾತಿ ಜೀ |
ಮೂತ ಪ್ರಹರ ಜಂಝಾ |
ರಾತಭಿನವ ಭೀಮರಾಜಾ || ೨೪೭ ||

ಒಂದಿನುದಯದೊಳು |
ಪೊಂದೇರನಡರ್ದಾನೆ |
ಮಂದಿ ಕುದುರೆ ಮಂಡಲಿಕರಾ ||
ಸಂದಣಿಯೊಳು ಬರೆ |
ಮುಂದೊಂದು ಪಶು ಬೆಸ |
ಲಿಂದಿರುತಿರಲೊಡಹಾಯಿಸೆ || ೨೪೮ ||

ರಥ ಚಕ್ರ ಘಾತಿಯಿಂ |
ಹತವಾದ ಶಿಶುಗಂಡ |
ಳುತ ಪೋಗಿ ಧೇನು ಘಂಟೆಯನು ||
ಕ್ಷಿತಿಪಂಗೆ ದನಿದೋರ |
ಲತಿನೊಂದು ವತ್ಸನ |
ರಥದೊಳಿಂಬಿಟ್ಟು ಕುವರನಾ || ೨೪೯ ||

ಮೇಲೆ ಹೊಡೆಯಲು ಪೇ |
ರ್ಗಾಲಿಯಿಂ ತುಂಡಾದ |
ಬಾಲನ ಕಂಡು ನಿರ್ಮೋಹ ||
ಶೀಲನಾಗಿರ್ದ ಭೂ |
[1]ಲೋ[1]ಲಸೀಗ ಭವ ಸ |
ಲ್ಲೀಲೆಯಿಂ ಮೊಗದೋರಿಸಿದನೂ || ೨೫೦ ||

---

1_ಶಾ (ಅ, ಬ, ಗ, ಚ.)

ಜಡೆ ಮುಡಿ ಪೆರೆಗಂಗೆ ।
ಕಿಡಿಗಣ್ಣೈವೊಗ ಬಿಸ ।
ನಿಡಿದೊಳೀರ್ಕೈದಾಯುಧಗಳೂ ॥
ತೊಡದ ಭಸಿತ ಫಣಿ ।
ದೊಡ ಗಜ [1]ಪುಲಿ[1] ಚರ್ಮ ।
ದ[2]ಡೆ[2] ಹರಿ ಬ್ರಂಹ ನಿರ್ಜರರೂ ॥ ೨೫೧ ॥

ಸುರಿವ ಪೂಮಳೆಯೊಳು ।
ಸುರದುಂದುಭಿಯೊಳು ಪಂ ।
ಕರಮೊಚ್ಚಿ ಬೇಡೆನೆ ಚೋಳ ॥
ಹರಣವನೀವತ್ಸ ।
ಗಿರದೀವುದೆನಲಿತ್ತು ।
ತರುಣಾಗಿತ್ತಸುವ ಭೂವರನಾ ॥ ೨೫೨ ॥

ಸುರರುಘೆಯುಘೆಯೆನೆ ।
ಭರದಿ ಪುಷ್ಪಕದೊಳ ।
ಗಿರಿಸಿ ಸೋಮೇಶ ಕೈಲಾಸಾ ॥
ಪುರಕೊಯ್ದು ಭೈರವೇ ।
ಶ್ವರ ಕೇಳೆನುತತಿ ।
ಹರುಷದಿಂ ಪೇಳ್ದ ಪೌರಾಣಿ ॥ ೨೫೩ ॥

ಸನ್ನಿಧವಾಗಿಹು ।
ದಿನ್ನೊಂದು ಕಥೆಯಾವು ।
ದೆನ್ನೆ ಸತ್ತ್ಯೇಂದ್ರ ಚೋಳವನಿ ॥

---

೧-ಚಿನ (ಅ, ಇ, ಉ, ಎ, ಕ, ಗ, ಚ.)  ೨-ಡಿ (ಉ, ಗ, ಚ, ಜ, ಟ.)

ಪನ್ನಾಡೆ ಬಾಳುತಿ ।
ರ್ಪನ್ನ ವಾತನ ಪುತ್ರ ।
ರುನ್ನತ ಕಾಮಸನ್ನಿಭರೂ ॥ ೨೫೪ ॥

ಮಿತವಚನನು ಮಂತ್ರ ।
ಯುತ ಲಕ್ಷರೆಂಬರಾ ।
ಯತವಾಗಿ ವೈಹಾಳಿ [1]ವೋಗಿ[1] ।
ಅತಿ ಸಂಭ್ರಮದಿ ಬರ್ಪ ।
ನಿತಕೆ ವೈದರ್ವೆಯು ।
ಸುತನಡ್ಡಬರಲೊಡಹಾಯಿಸೆ ॥ ೨೫೫ ॥

ತುರಗದ ಖುರತಾ[2]ಗಿ[2] ।
ತರುಣನ ಶಿರ ಧರೆ ।
ಗುರುಳಲಾ ತಿರುಕೊಳವಿನಾಚಿ ॥
ಯುರು ಕೆಟ್ಟೆ ಕೆಟ್ಟೆ ಶಂ ।
ಕರ ಹಾ ಹಾಯೆನುತಾಗ ।
ಸುರಿದಳ್ಕಂಬನಿಯ ಮುಂಬನಿಯಾ ॥ ೨೫೬ ॥

ಪೊನಲೊಳಗಾಳುತಿ ।
ರ್ಪನಿತಕೆ ಸತ್ತ್ಯೇಂದ್ರ ।
ವನಿಪಾಲ ಕಂಡತಿ ನೊಂದು ॥
ವನಿತೆಯೆಲ್ಲಿಯ ಶೋಕ ।
ವೆನೆ ನಿನ್ನ ಕುವರನಿಂ ।
ತನಯನ ಶಿರವೋದುದಯ್ಯಾ ॥ ೨೫೭ ॥

---

-ಯೊಗೆ (ಕ, ಗ, ಟ.)   2-ಕಿ (ಖ.)

ಎನೆ ಕೇಳ್ದು ತವೆ ಬಲು ।
ಕಿನಿಸಿಂದ ಮಿತವಚ ।
ನನ ಹಿಡಿತರಿಸುತೀಯುಕನಾ ॥
ತನಯುನ ಪಳಿಗೀವು ।
ದೆನುತಾಗ ಸುಪ್ರಧಾ ।
ನನಕ್ಕೈಯ್ಯಲೀಯುಲಂತಾಗ ॥ ೨೫೮ ॥

ಭರದಿ ಬಂದಯ್ಯನ ।
ಚರಣಕೆರಗಿ ಮುಂತ್ರಿ ।
ವರನೊಳಿಂತೆಂದ ಎನ್ನಿಂದ ॥
ಪಿರಿದು ತಪ್ಪೆಂದು ಶಂ ।
ಕರನ ಪಳಿಗೆಯೆನ್ನ ।
ಶಿರವು ಎಂದನು ಮಂತ್ರಲಕ್ಷ್ಣಾ ॥ ೨೫೯ ॥

ನುಡಿದ ಮಾತಿಗೆ ಬಿಟ್ಟ ।
ಎಡಗಯ್ಯ ಮಂತ್ರಿ ತ ।
ನ್ನೊಡೆಯನ ಪಿರಿಯ ಕುವರನಾ ॥
ಕಡುವೇಗದಿಂ ಪಳಿ ।
ಗೊಡು ಮಂತ್ರಲಕ್ಷ್ಣ ಮುಂ ।
ನಡೆಯುರಮನೆಯೊಕ್ಕು ಬೇಗಾ ॥ ೨೬೦ ॥

ಹರಪೂಜೆ ಮಾಡಿ ಸಿಂ ।
ಗರವಾಗಿ ಬಹುದೆಂದು ।
ಶರಣೆಂದು ಕಳುಪಿ ಮಂತ್ರೀಶಾ ॥

ಹರ ಹರ ಎನ್ನ |
ಹರಣದೊಡೆಯನ ಕು |
ವರನ ಕೊಂದಾನುಳಿದಿಹುದೂ || ೨೬೧ ||

ನೀತಿಯುಲ್ಲಲ್ಲಪ |
ಖ್ಯಾತಿ ಬಿಡವು ಮುಂದೆ |
ಪಾತಕ ತಪ್ಪದೀ ಪಳಿಗೆ ||
ನಾ ತಲೆಗೊಡುವೆನೆಂ |
ದೋತು ಕೊಯ್ದಿಟ್ಟನ |
ತ್ಯಾತುರದಿಂ ಮಂತ್ರಿ ಬಳಿಕಾ || ೨೬೨ ||

ಅರಮನೆಯಿಂದ ಸಿಂ |
ಗರಗೆಯ್ದು ಪೊರಮಟ್ಟು
ಬರೆ ಮಂತ್ರಲಕ್ಷನ ಕಂಡು ||
ಧರಣೀಶನೀತನ |
ಶಿರವುಳಿದುದಪಾರಂ |
ಪರಿಗೇಳ್ದು ಸಂದಾಯಿಯೆಂಬ || ೨೬೩ ||

ಪಳೆಯನ ಕೈಯೊಳಾ |
ಗಳೆ ಕೊಟ್ಟ ಶಿರಗೊಯ್ದು |
ಪಳಿಗೀವುದೆನೆ ತೋಳುವಿಡಿದು ||
ಗಳಗಳನ್ಶೈದಿ ಪೊಂ |
ಪುಳಿಯೋಗುತವೆ ಪೊರ |
ವಳಲ ಮುಂಬಿನೊಳು ಕುಳ್ಳಿರಿಸಿ || ೨೬೪ ||

ಪರವು ಪಂಚಾಕ್ಷರು ।
ಚ್ಚರಣೆ ಮಾಡುತ್ತಿರೆಂ ।
ದಿರದೆ ಸಂದಾಯಿ ಪೇಳ[1]ದೊಡೆ[1] ॥
ವರ ಮಂತ್ರಲಕ್ಷನು ।
ಸುರಲೊಲ್ಲದಿರುತಿರೆ ।
ಮರಳಿ ಕೇಳಿದ ನಿದೇಕೆಂದೂ ॥ ೨೬೫ ॥

ಜೀವನ ಮಂತ್ರಿಯು ।
ಭಾವವಪ್ಪುದು ಖಡ್ಗ ।
ಪೂವಿನ ಮಾಲೆಯಂತಿಹುದೂ ॥
ಭೂವರನುರು ಶೀಲ ।
ಧಾ[2]ವ[2]ತಿಯುಪ್ಪುದೆಂ ।
ದಾವುಸುರೆನು ಪಂಚಾಕ್ಷರಿಯಾ ॥ ೨೬೬ ॥

ಎನುತಲೆ ಜರಿದು ಬೀ ।
ಳ್ವನಿತರೊಳ್ ನಮಃ ಶಿವಾ ।
ಯೆನುತಿರೆಂದಾಗ ಸಂದಾಯಿ ॥
ದನಿದೋರಿ ನಮಃ ಶಿವಃ ।
ಯೆನುತ ಪೊಯ್ಯಲು ಶಿರ ।
ವನುರು ಓಂ ನಮಃ ಶಿವಾಯೆನುತಾ ॥ ೨೬೭ ॥

ನೆಗೆದು ಲೆಂಕನ ಕೈಯೊ ।
ಳಗೆ ತಲೆ ನಿಲುತ ಮಂ ।
ತ್ರಗಳ ಮಾತೆಯನುಚ್ಚರಿಸಲೂ ॥

1-ದರೆ (ಅ, ಇ, ಉ, ಎ, ಒ, ಚ) ೨-ನು (ಅ, ಇ, ಒ, ಚ.)

ನಗುತ ಸಂದಾಯಿ ಚೋ |
ಳಗೆ ತೋರಲಾನಂದ |
ಮಿಗೆ ಶಿಖಿವಿಡಿದು ನೋಡುತಲಿ || ೨೬೮ ||

ಏನಿದಚ್ಚರಿ ಪೊಯಿದೆ |
ನೀನೀ ಶಿರವನೆಂದು |
ಭೂನಾಥನೆಂದ ನು[1]ಣ್ಣ[1]ಟಕಿ ||
ಮಾನಸಕಿನಿದಾಗೆ |
ನೀನೋಡರಸ ಎನು |
ತೋನಮಃ ಶಿವಾಯೆಂದು ತನ್ನ || ೨೬೯ ||

ಶಿರವನರಿದು ಪಂಚಾ |
ಕ್ಷರಿಗೂಡಿ ಚೋಳನ |
ಕರತಳಕೀಯಲಾಗೆರಡೂ ||
ಶಿರವನಿಕ್ಕೆಲದೊಳ |
ಗಿರಿಸೆ ಮಂತ್ರಗಳು |
ಚ್ಚರಣೆಗೇಳುತ್ತ ಶಂಕರನಾ || ೨೭೦ ||

ತಲೆಯುತಿ ಚೈತನ್ಯ |
ದಳೆದು ಸಕಲ ಮಂತ್ರ |
ಗಳ ಮಾತೆ ಪಂಚಾಕ್ಷರಿಂ ನೂ ||
ನಲಿದೋದುತಿರಲು ಪೊಂ |
ಪುಳಿಯೋಗಿ ಬೇಗ ವೆ |
ಗ್ಗಳಿಸೆ ಗಾಂಗೇಯನಾ ರುಂಡ || ೨೭೧ ||

---

1. ಸುಂ (ಇ, ಉ, ಎ, ಗ, ಚ, ಟ.)

ತಳೆಮ ಜೀವನ ಮಂತ್ರ |
ಮಿಳಿತವಾಗಿರೆ ತಿರು |
ಕೊಳವಿನಾಚಿಯರು ತನ್ನವನಂ ||
ಪಳಿಗೀ ಕುವರನಾದ |
ಪಳೆಯನ ಶಿರಕಿಲ್ಲ |
ಪಳಿಯೆಂದು ತನ್ನ ಮಸ್ತಕವಾ || ೨೭೨ ||

ಘರಿಲನರಿದು ಮಂತ್ರ |
ವೆರಸಿಡಲಾಗ ಶಂ |
ಕರನ ಶಿರದ ನಾಲ್ಕು ದೆಸೆಯಾ ||
ಪರಮ ಪಾವನ ಪಂಚಾ |
ಕ್ಷರ[1]ಗೇಳ್ದು ರಾಗದಿಂ[1] |
ಧರಣಿಪ ಸತ್ತ್ರ್ಯೇಂದ್ರಚೋಳಾ || || ೨೭೩ ||

ಪಂಚ[2]ಲ[2]ಪನ ಪಂಚ |
ಪಂಚಾಕ್ಷರಗಳೆ ಮೊ |
ಗಂಚಿತವಾಗಿರಲ[3]ವ[3]ಕೆ ||
ನಾಂ ಚೆಲ್ವ ಕಾಣ್ಕೆಯೆಂ |
ದುಂ ಚಮೂಪನ ಶಿರ |
ಕಾಂಚೆಗಾಂ ಪಡಿಯುಪ್ಪೆನೆಂದು || ೨೭೪ ||

ತನ್ನ ತಲೆಯ ಪೊಡ |
ದುನ್ನತ ಹರಮಂತ್ರ |
ವನ್ನಾಡೆ ಜಪಿಸುತ್ತಲಿರಲೂ ||

1_ಗಳರವಗೇಳುತ (ಎ)    2_ಲಾ (ಇ, ಎ, ಗ.)    3 ಪ (ಅ, ಎ, ಬ.)

ಎನ್ನಿಂದ ಬಂದ ತ |
ಪ್ಪಿನ್ನೆನುತ ಮಿಗೆ |
ಸನ್ನದ್ಧನಾ ಮಿತವಚನಾ || ೨೭೫ ||

ಅಲ[1]ಘು[1] ಮಂತ್ರವನೋದು |
ತಲಿ ತಲೆಗಡಿದಿಟ್ಟ |
ಛಲವ ಕೇಳುತ್ತ ಸತ್ರ್ಯೇಂದ್ರ ||
ನೆಲದೆರೆಯನ ರಾಣಿ |
ಲಲಿತ ಲಿಂಗಪ್ರಾಣಿ |
ಸಲೆ ಸತ್ಯಮೃತರಸ ವಾಣಿ || ೨೭೬ ||

ಪರಮ ಶಂಕರ ಮಂತ್ರಿ |
ವರ ಮಂತ್ರಲಕ್ಷನಾ |
ಪಿರಿದಾಪ್ತ ಸಂದಾಯಿಂಯಮಲ ||
ತಿರುಕೊಳನಾಚಿ ಭೂ |
ವರ ಚೋಳ ಮಿಂತವಚ |
ನರು ಸಹಿತೇಳು ನಾಗೂಡಿ || ೨೭೭ ||

ಎಂಟು ಶಿವ[2]ಸೀ[2]ವೆ |
ನೆಂಟೊಡಲಾತಂಗೆಂ |
ದಂಟಿ ಮಾನಸದಿ ಮಂತ್ರವನೂ ||
ದೂಂಟಿಸುತವೆ ತನ್ನ |
ಕಂಠವರಿಯಲು ಶ್ರೀ |
ಕಂಠ ಹೋ ಪುರೆ ಸಾಕುಸಿಲ್ಲು || ೨೭೮ ||

---

1-ಘು (ಅ, ಗ)  2-ನಿ (ಅ, ಬ.)

ಎನುತ ಸೋಮೇಶ ಭೋಂ |
ಕನೆ ಶಶಿ ಜಡೆ ಗಂಗೆ |
ಮಿನುಗುವೈಮೊಗ ದಶ ಭು[1]ಜ[1]ವು ||
ಅನಲಾಕ್ಷ ಭಸಿತವ |
ಜಿನ ಶೂಲ ಡಮುರು ಮಾ |
ನಿನಿ ನಂದಿ ಹರಿಯಜಮುರರೂ || ೨೭೯ ||

ಸುರದುಂದುಭಿಗಳು ಭೋ |
ರ್ಗರೆಯೆ ಸುರಿಯಲು ಪೂ |
ಸರಿಗಳಮೃತವಾಣಿಯುರಿಗೆ ||
ಕರಮುಚ್ಚಿ ಬೇಡಿನೆ |
ಶರಣೆಂದು ಮೊದಲಿ ಶಂ |
ಕರನ ಪ್ರಾಣವನೀವುದೆನಲೂ || ೨೮೦ ||

ಅವಗಸುವೀಯಲಂ |
ತವ ಸುಪ್ರಧಾನನ |
ನವ ಮಂತ್ರಲಕ್ಷ ಸಂದಾ[2]ಯ[2] ||
ನವ ತಿರುಕೊಳವಿಯ |
ನವಳು ಚೋಳನ ಹರ |
ಣವ ಮಿತವಚನನಸುವನೂ || ೨೮೧ ||

ಬೇಡಲೀವುತ ಮಹ |
ದಾಡಂಬರದಿ ಮಣಿ |
ಮಾಡದೊಳಿರಿಸುತೆಬ್ಬರನೂ ||

---

1_ಜಾ (ಅ, ಉ, ಎ, ಕ.) 2_ಯ (ಅ, ಕ, ಗ.)

ರೂಡಿಗಚ್ಚರಿ ಪದ ।
ಮೂಡೆ ಕೈಲಾಸಕ್ಕೆ ।
ನಾಡೆಕೊಂಡೊಯ್ದ ಸೋಮೇಶಾ ॥ ೨೮೨ ॥

ತಾರಾದ್ರಿಯೊಳು ಮುಕ್ತಿ ।
ಮೇರೆಯೊಳಿಂಬಿಟ್ಟ ।
ಮಾರಾರಿ ಕೇಳ್ಭೈರವಾಂಕ ॥
ಧಾರುಣಿವರಸೇಕ ।
ಧೀರನಿನ್ನೋರ್ವನ ।
ಚಾರು ಚರಿತ್ರವೊರೆಯುವೆನೂ ॥ ೨೮೩ ॥

ಎರೆಯಲೇ[1]ಕವನವ ।
ಗೆರಡೀವ[1]ನಾವೊನೆ ।
ಧರನೆಂಬ ಕ್ಷತ್ರಿಯೋತ್ತಮನೂ ॥
ತುರಗದೊತ್ತೊತ್ತೆ ಕುಂ ।
ಜರ[2]ಯೊಥ[2] ಪೊಂದೇರ ।
ಹೊರಳಿ ಕಾಲಾಳ್ಗಳಬ್ಬರವೂ ॥ ೨೮೪ ॥

ವೆರಸಿ ವೈಹಾಳಿಯಿಂ ।
ಬರುತಿರೆ ಮುಂದೋರ್ವ ।
ಸರಣಿಯೊಳ್ ಬಿದ್ದಳುತಿರಲೂ ॥
ಹರನ ವೇಷವ ಕಂಡು ।
ತುರಗದಿಂದಿಳಿದತಿ ।
ಭರದೊಳ್ಕೈತಂದು ರಾಗದೊಳು ॥ ೨೮೫ ॥

---

1_ನವನತಿ । ಪರಭಕ್ತ (ಗ) 2_ಯುತ (ಇ)

ಬಂದು ಶ್ರೀ ಪಾದಾರ |
ವಿಂದಕೆರಗಿ ಶೋಕ |
ವೇಂ ದೇವ ಪೇಳೆನ್ನೊಳೆನಲೂ ||
ಇಂದುವದನೆಯೋರ್ವ |
ಳಿಂದತಿ ವಿರಹದಿ |
[1]ನೊಂದೆ ಕಂ[1]ದಿದೆ ಬೆಂದೆನಯ್ಯ || ೨೮೬ ||

ಎನೆ ಚಿಂತೆ ಬೇಡ ಬಾ |
ರನಘ ಎಂದುರೆ ಸಿಂಹಾ |
ಸನದಿ ಕುಳ್ಳಿರಿಸಿ ಪಟ್ಟವನೂ ||
ಮನವಾರೆ ಕಟ್ಟಿ ಆ |
ವನಿತೆಯ ವೈವಾಹ |
ವನು ಮಾಡಿ ತಾ [2]ಭೃತ್ಯ[2]ನಾಗಿ || ೨೮೭ ||

ನೋಡಿ ಸಂತಸದೊಳೋ |
ಲಾಡುವಾನಂದಾಶ್ರು |
ಕೋಡಿವರಿಯಲು ಗದ್ಗದಿ[3]ಸಿ[3] ||
ಪಾಡುವ ಕುಣಿ ಕುಣಿ |
ದಾಡುವ ನಲಿವನ |
ಲ್ಲಾಡುವ ಶಿರವನುಬ್ಬುವನೂ || ೨೮೮ ||

ಪರಮಾನುರಾಗದಿಂ |
ದಿರೆ ಮೆಚ್ಚುತವೆ ಪೊನೆ |
ಧರಗೀಶ ಪ್ರತ್ಯಕ್ಷವಾಗಿ ||

---

1–ಕಂದಿ ಕುಂದಿದೆ (ಚ.)  2–ದಾಸ (ಅ, ಇ, ಉ, ಎ, ಕ, ಜ, ಟ.)
3–ಸೆ (ಉ, ಗ )

ಸುರದುಂದುಭಿ[1]ಯೊಳು ಪೂ ।
ಸರಿಯೊಳು ಕೈಲಾಸ ।
ಗಿರಿಗೆ ಕೊಂಡೊಯ್ದ ಸೋಮೇಶ ॥ ೨೮೯ ॥

ಕೇಳು ಮೇಲ್ಗಥೆಯದಂ ।
ಭೋಳಿಗಯ್ಯನ ಪುರಿ ।
ಗೋಳಿಯಿಂ ನೆಗೆದು ರಾಜೇಂದ್ರ ॥
ಚೋಳ ಕೇರಳ ಪಾಂಡ್ಯ ।
ರಾಳೋಕಿಸುತ ಗೋಪು ।
ರಾಳಿಯೊಳೆಸೆವ ಪಾವುಗೆಯ ॥ ೨೯೦ ॥

ತುರಗವ ನಿಮಿರ್ದು ನಿ ।
ಬ್ಬರದಿ ದಾಂಟಿಸುತಾಗ ।
ಸುರಪತಿಯೊಡನೆ ಮಾತಾಡಿ ।
ತಿರುಗಿ ಗೋಪುರವನು ।
ಸ್ಪರಿಸಿ ತಮ್ಮೂರ್ಗೆ ಬಂ ।
ದಿರಲಮರೇಂದ್ರ ಕೋಪದಲಿ ॥ ೨೯೧ ॥

ಇಳೆಯಾಡಿಪರ ದೇಶ ।
ದೊಳು ಬರನಪ್ಪಂತೆ ।
ಮುಳಿಸು [2]ತಾರೆ[2]ಗೆ ಪೇಳಲೊಡನೆ ॥
ಬೆಳೆಯಿಲ್ಲದಿರೆ ಕಂಡು ।
ಮುಳಿದು ಮೂವರು ರಾಯ ।
ರೊಳಪೊಕ್ಕ ನಾಕಲೋಕವನೂ ॥ ೨೯೨ ॥

---

1-ಗ (ಉ, ಕ, ಗ)  2-ಕಾರಿ (ಅ, ಇ, ಖ.)

ಪಿಡಿತಂದು ಸೆರೆಗೆಯ್ದು |
ರುಡುರಾಜಿಗಳ ದೇವ |
ರೊಡೆಯನಾ ವಾರ್ತೆಯ ಕೇಳ್ದು ||
ಪೊಡವೀತಳಕೆ ದಂಡು |
ನಡೆಯಬೇಕೆಂಬತಿ |
ಪಡಗರಕಿವರಿತ್ತ ತವಸ್ಮಾ || ೨೯೩ ||

ಪರಮಾಪ್ತ ವರ ಸಿಂಧು |
ಧರೆಯ ತುರಗವ |
ತರಿಸಲಾ ಚೋಕ್ಕನಾರ್ನರಿಯಾ ||
[1]ಪಿ[1]ರಿಯ ವಾಜಿಯ ಮೂಡಿ |
ಸುರಪನೊಳ್ಕಾದಿ ಸಂ |
ಗರದಿ ಭಂಗಿಸಿ ಬಿಟ್ಟರಾಗಾ || ೨೯೪ ||

ತಾರಗೆಗಳನಿತ್ತು |
ಭೂರಮರಿರೆ ನಂಬಿ |
ತಾರಾಚಲಕೆ ಪೋದನೆಂಬ ||
ವಾರತೆಗೇಳುತ |
[2]ಚೇ[2]ರವು ನೃಪಹರ |
ನೂರಿಗೆ ದಾಳಿಮಾಡಿದನೂ || ೨೯೫ ||

ರಾಜೇಂದ್ರಚೋಳ ರಾ |
ರಾಜಿಪಮುಲ ದ್ವಿಜ |
ರಾಜಲಪನೆ ಸುಂದರಿಯನೂ ||

---

1-ವಿ (ಬ.) 2 ಚಾ (ಅ, ಬ.)

ಮೂಜಗನ್ನುತ ಯತಿ |
ರಾಜನಾ ನತಕಲ್ಪ |
ಭೋಜ ರೇವಣಸಿದ್ಧಗಿತ್ತು || ೨೯೬ ||

ಪರಕೆದಳೆವುತಷ್ಟ |
ಸಿರಿಯುನೆಲ್ಲವ ಶಿವ |
ಶರಣರ್ಗೆ ಕೊಟ್ಟು ಮರ್ತ್ಯದೊಳು ||
ಇರಲೊಲ್ಲೆ ನಾನೆಂದು |
ಗಿರಿಜಾಧಿಪತಿಯು ಶ್ರೀ |
ಚರಣವ ನುತಿಸಲಂತಾಗ || ೨೯೭ ||

ನಿಜದೋರಿ ಚೋಳನ |
ರಜತಾದ್ರಿಗೊಯಿದನು |
ಭುಜಗ ಭೂಷಣ ಸೋಮನಾಥ ||
ತ್ರಿಜಗವೆಲ್ಲರಿಯೆ ಭೂ |
ಭುಜ ಪಾಂಡ್ಯ ಚೊಕ್ಕನಾ |
ರಾಜಿಪ ಲಿಂಗವ ನುತಿಗೈದು || ೨೯೮ ||

ಶಿವನ ಶ್ರೀ ಪಾದ ಪ |
ದ್ಮವ ಕಂಡು ತನ್ನ ದೇ |
ಶವನೆಲ್ಲ ಶಿವನ ವೈಭವಕೆ ||
ತವೆಕೊಟ್ಟು ಮುಕ್ತನಾ |
ದವ[1]ನಿಪ[1] ಪಾಂಡ್ಯ ಭೈ |
ರವರಾಜ ಕೇಳು ಮೇಲ್ಗಥೆಯಾ || ೨೯೯ ||

---

1_ನೀಶ (ಅ. ಇ. ಉ. ಎ. ಕ. ಗ. ಜ. ಟ.)

ಉತ್ತಮ ನಗರದ |
ತ್ಯುತ್ತಮ ರಿಪು ರಾಯ |
ಮಸ್ತಕ ಶೂಲ ವಿಶಾಲ ||
ಕೀರ್ತಿವೆಣ್ಣೀಪ ಜಿ |
ನೋತ್ತರೀಯನ [1]ಪಾ[1]ದ |
ಭೃತ್ಯನು ಕೈವಲ್ಯಚೋಳಾ || ೩೦೦ ||

ಪಿರಿದು ಭಕ್ತಿಯೊಳಷ್ಟ |
ಸಿರಿಯನೆಲ್ಲವ ಹರ |
ಶರಣಾಳಿಗಿತ್ತು ತಾ ಸುಖದೊ ||
ಳಿರೆ ತನ್ನ ದೇಶಕ್ಕೆ |
ಪರ ನೃಪಾಲರ ದಂಡು |
ಬರಲಾಗ ಸಂಗರ ಮುಖದಿ || ೩೦೧ ||

ತರಿದೊಟ್ಟಿ ಮಲತರ |
ಮುರಿಯಲಿರಿದು ಬಿಡು |
ತು[2]ರೆ[2] ಹಿಡಿಯಾಳ್ಗಳಿಲ್ಲವನೂ ||
ನೆರೆ ವೀರನಿರೆ ಮೂರು |
ವರುಷವಾಕಡೆಯಿತ್ತ |
ಬರನಾಗೆ ಸಿರಿವಂತ ಶೆಟ್ಟಿ || ೩೦೨ ||

ಶಿವನ ಭಕ್ತಾಳಿಗು |
ತ್ಸವಮಿಗೆ ಬಹಳ ಸು |
ಖವ ಮಾಡಿಕೊಂಡಿರಲಿತ್ತ ||

---

1–ಪ (ಅ, ಬ.)  2–ರು (ಇ, ಎ, ಕ, ಚ.)

ಭುವನೇಶ ಕೈವಲ್ಯ ।
ನೃವರ ಬಂದುರೆ ಕೇಳ್ದ ।
ನವರ ವೃತ್ತಾಂತವೆಲ್ಲವನೂ ॥ ೩೦೩ ॥

ತನ್ನ ಸಪ್ತಾಂಗ ರಾ ।
ಜ್ಯೋನ್ನತಿಗಳನೆಲ್ಲ ।
ನನ್ನಿಯಿಂ ಸಿರಿವಂತಗಿತ್ತು ॥
ಮನ್ನಣೆಯೊಳಗಿಪ್ಪೆ ।
ನೆನ್ನುತೊಡನೆ ಚೋಳ ।
ಬಿನ್ನಪಗೆಯ್ಯಲಾವಣಿಜಾ ॥ ೩೦೪ ॥

ಶಿವಭಕ್ತನೀಂ ಚೋಳ ।
ಭುವಿಯಾಣ್ಮನೆನ್ನ ವಿ ।
ತ್ತವನೆಲ್ಲ ನಿನಗಿತ್ತು ನಿಮ್ಮ ॥
ಭವನಗಾಯ್ದಿಪ್ಪೆನೆಂ ।
ಬವಸರದೊಳು ಮೆಚ್ಚಿ ।
ಶಿವ ನಿಜದೋರುತಿಂತೆಂದ ॥ ೩೦೫ ॥

ಸಿರಿವಂತ ನೀ ರಾಜ್ಯ ।
ದರಸಾಗು ಚೋಳ ಭೂ ।
ವರ ಚಮೂಪತಿಯಾಗು ನಿಮ್ಮ ॥
ಭರ ಭಾರಗಳ ಹೊತ್ತು ।
ಚರನಾಗಿ ಸೇವೆಗೈ ।
ದಿರುತಿರ್ಪನೆಂದೀಶ ನುಡಿಯೆ ॥ ೩೦೬ ॥

ಕರದ ಕಂಪನದಿ ಮು |
ಪ್ಪುರಿಗೊಳ್ವ ಪುಳಕದಿಂ |
ಸಿರನೆಗೆದುರ್ಬಿ ಗದ್ಗದಿಪಾ ||
ಸ್ವರದಿ ಸುಖಾಶ್ರುವಿ |
ನುರುವಣೆ ಸಹಿತ ಶ್ರೀ |
ಚರಣಕಂಜಗೆ ಪಿಡಿದೆತ್ತಿ || ೩೮೭ ||

ತೆಗೆದು ಮೊಗದು ಬಿಗಿ |
ಬಿಗಿಯಪ್ಪಿ ಸುರದುಂದು |
ಭಿಗಳು ಪೂಮಳೆಯೊಳಗವ[1]ರ[1]ನೂ ||
ಅಗಜಾವಲ್ಲಭನೊಯ್ದು |
ಬಗೆಯ ಭೈರವರಾಜ |
ಸಿಗೆ ಪೇಳ್ದ [2]ಕಥ[2]ಕ ಪೋಲ್ಗಘಯಾ || ೩೦೮ ||

ಮನದೊಳ್ದೇವಾಲಯ |
ವನು ಮಾಳ್ಪ ಪೂಸಲ |
ಯ್ಯನ ಸುಮುಹೂರ್ತ ಕಾಲದಲಿ ||
ಮನುಜೇಂದ್ರ ಚೋಳ ಭೋಂ |
ಕನೆ ಮಾಡಿಸಿದನು ಪಾ |
ವನತರವಪ್ಪ ದೇಗುಲವಾ || ೩೮೯ ||

ಅಂತಲ್ಲಿ ಶಿವನನ |
ಶ್ರಾಂತ ಪೂಜಿಸುತಂಬಾ |
ಕಾಂತನಭ್ಯಾಂಗನಕ್ಕೆಂದು ||

---

1-ನ (ಅ, ಇ.) 2-ನಥಿ (ಎ.)

ಸಂತಸ ಮಿಗೆ ತಿಲ ।
ವುಂತವಗದ ಮೇಲ ।
ನಂತ ಸುಯಿದಾನದೊಳಿರಲೂ ॥ ೩೧೦ ॥

ಮುನಿರಾಜನೆಂಬ ಭೂ ।
ವನ ಪಾಲನಾವಾರ್ತೆ ।
ಯನುಕೇಳ್ದು ಚೋರವೃತ್ತಿಯಲಿ ॥
ಘನ ಹರುಷದೊಳು ಭೋಂ ।
ಕನೆ ಬಂದು ತಿಲವ ಮೆ ।
ಲ್ಪನಿತರೊಳ್ಕಾಪಿನಾಳುಗಳೂ ॥ ೩೧೧ ॥

ಪಿಡಿದರ್ ಬೈದರ್ ಪೊಯಿದರ್ ।
ಜಡಿದರ್ ಝುಂಕಿಸಿದರ್ ಆ ।
[1]ಒ[1]ಡೆಯ ನಿದಿರ ನಿಲಿಸಿದರೂ ।
ನುಡಿಯಿದೇಕೆನೆ ಹರ ।
ನೊಡವೆ ಎಳ್ಳಿನ ಋಣ ।
ಬಿಡದೇಳು ಜನ್ಮವಕ್ಕೆಂದೂ ॥ ೩೧೨ ॥

ಮೆಲಿದೆನೆಂದೆನಲು ನೀ ।
ಮಲಹರನಿಗೆ ಲೆಂಕ ।
ಸಲೆ[2]ನಿನ್ನ ಲೆಂಕನಾ[2]ನೆಂದು ॥
ನಲಿದು ನರೇಂದ್ರ ಭೂ ।
ಬಲಿಗ ಬಲ್ಪಿಂದ ಬಾ ।
ಯೊಳು ಕೈಯ್ಯನಿಕ್ಕಿಯಾ ತಿಲವಾ । ॥ ೩೧೩ ॥

---

1-ಡೊ (ಎ, ಕ, ಗ, ಚ.) 2-ಲೆಂಕ ನಿನಗೆ ತಾ (ಎ.)

ತೆಗೆದು ತನ್ನಯ ಬಾಯೊ |
ಳಗೆ ತುಂಬಿಕೊಳುತಿರ |
ಲಗಜಾವಲ್ಲಭ ನಿಜದೋರಿ ||
ನಗುತ ನಾ ನಿಮ್ಮೀರ್ವ |
ರಿಗೆ ಋಣವತಿಗನೆಂ |
ದೊಗುವೆಳ್ಳ ಸವಿದಾಗವರಿಗೆ || ೩೭೪ ||

ಪರಮ ಮುಕ್ತಿಯನಿತ್ತ |
ಹರ[1]ನಿ[1]ನ್ನು[1] ಭೈರವೇ |
ಶ್ವರ ಕೇಳಿದೊಂದು ಮೇಲ್ಗಥೆಯಾ ||
ವರ ವೀರಚೋಳಭೂ |
ವರ ಪರಸಮಯ ಸಂ |
ಹರ ಹರಸಮಯಾಬ್ಧಿ ಚಂದ್ರ || ೩೮೫ ||

ನೆನಿಸಿ ಬಾಳ್ದಿರುತೊಂದು |
ದಿನ ತನ್ನ ಪಟ್ಟದಂ |
ಗನೆ ಸಹ ಶಿವನ ಮೆಲ್ಲಡಿಯಾ ||
ಕನಕಾಬ್ಜದಿಂ ಪೂಜೆ |
ಯನು ಮಾಡುತವೆ ದೇವ |
ಎನಗಿದು ನಿಯಮವೆಂದುಸುರ್ದ || ೩೮೬ ||

ಸಾಸಿರಂಬುಜದೊಳ್ಬಾ |
ಮೀಶ ತ್ರಿಕಾಲ ಗ |
ರೀಶನ ಪೂಜಿಸುತೊಂದು ||

---

1-ನಿಂದು (ಇ.)

ವಾಸರೋದಯದರ್ಜ |
ನಾ ಸಮಯದೊಳೊಂದು |
[1]ಕೌಸುಮ ನಾಸ್ತಿಯಾಗಿ[1]ರಲೂ || ೩೧೭ ||

ಹಿಂದೆ ಮುಕುಂದ ಹೂ |
ವೊಂದು ಕುಂದಲು ಕಣ್ಣ |
ನಿಂದುಶೇಖರಗಿತ್ತು ಚಕ್ರ ||
ಇಂದಿರೆ ಗೋಸುಧಾ |
ಸಿಂಧುವಡೆದ ನಿಜ |
ವೆಂದು ಮಹಿಮ್ನ ಪೇಳುವುದೂ || ೩೧೮ ||

ಎನುತಲಾ ನೃಪಶಿರೋ |
ವನರುಹವೀವೆನೆಂ |
ಬನಿತರೊಳಾತನ ರಾಣಿ ||
ತನಯ ತನ್ನಯ ಶಿರ |
ವನಜವನೀವೆನೆಂ |
ಬನಿತರೊಳ್ನಿವ ಪೆಚ್ಚಿ ಕರವಾ || ೩೧೯ ||

ಪಿಡಿದಿಷ್ಟವೇಂ ಪೇಳು |
ಪೊಡವೀಶ ಎನಲು ನಿ |
ಮ್ಮಡಿದಾವರೆಯೊಳಿಪ್ಪ ಸಯಿಪ ||
ಕೊಡು ದೇವ ಎನೆ ತನ್ನೊಳ್ |
ಬಿಡವಿಲ್ಲದಿಹ ನಿತ್ಯ |
ದೊಡೆತನವಿತ್ತು ಕೇಳರಸಾ || ೩೨೦ ||

---

1–ಲೇಸಪ್ಪ ಕುಸುಮ ಕುಂದಿರಲು (ಎ.)

ಕಾಳಕಂಧರನಂಕ |
ದಾಳಿನಿಪುತ್ತುಂಗ |
ಚೋಳ ಸಮಸ್ತ ವ್ಯಾಧಿಗಳ ||
ಮೇಲೆ ಕೃತಾಂತನ |
ಮೇಲೆಂದು ತನ್ನೆಡ |
ಗಾಲೊಳು ತೊಡರ ಕಟ್ಟಿಹನೂ || ೩೨೧ ||

ಸಗರದ ಬೊಮ್ಮಯ್ಯ |
ಮಿಗೆ ವೀರಸಂಗಯ್ಯ |
ಸುಗುಣಿ ಸೌಂದರಿಯ ನಾಚಯ್ಯ ||
ಅಘರುಜೆಗಳ ಗೆಲ್ದು |
ಬಗೆಯ ಜರಿದು ತನ್ನ |
ನಗರಕಿಲ್ಲೆಸಿಸಿ ತಾ ಸುಖದಿ || ೩೨೨ ||

ಇರುತಿರಲೊಂದು ವಾ |
ಸರದಿ ಜ್ವರದ ಬೇನೆ |
ವೆರಸಿ ತಾಪಸ ರೂಪುದಳೆದು ||
ಹರ ,ಬರಲಿದಿರೆದ್ದು |
ಶರ[1]ಣೆನೆ[1] ಚೋಳನ |
ಹರಸಿದ ನಿತ್ಯನಾಗೆಂದು || ೩೨೩ ||

ಆದ ಕಂಡು ನೃಪನ ಪ |
ಟ್ಟದರಾಣಿ ನಸುನಗೆ |
ಮುದವೆತ್ತು ಕೇಳ್ದನೇಕೆಂದು ||

---

1. ಶೆಂದ (ಇ, ಉ, ಎ, ಗ, ಜ )

ಇದು ನಿನ್ನ ವ್ರತದೊಳು |
ವಿಧಿಯೆ ನಲಿದು ಹರ |
ಸಿದಗದಾ ಸಿಧಿಯಾದನಯ್ಯಾ || ೩೨೪ |

ಎನಲಹುವಹುದು ಭಾ |
ಪೆನುತ ಚಂದ್ರಾಯುಧ |
ವನು ಹರುಷದಿ ಸರ್‍ರನುಗಿದು ||
ಜನರೆಲ್ಲ ನೋಡಲ |
ವನಿಪಾಲ ತನಗೆ ತಾ |
ಮುನಿದುಕೊಂಬನಿತರೊಳಭವಾ || ೩೨೫ ||

ಆ ರೂಪನಳಿದಾಗ |
ಮಾರಾರಿ ತನ್ನಿಜಾ |
ಕಾರವನುತ್ತುಂಗಚೋಳಾ ||
ಭೂರಮಣಗೆ ತೋರಿ |
ತಾರಾದ್ರಿಗೊಯಿದನು |
ಭೈರವರಾಜ ಕೇಳಿನ್ನು || ೩೨೬ ||

ಕ್ಷತ್ರಿಯೋತ್ತಮ ಚೆಲ್ವ |
ಗಾತ್ರಾರಿಲತಿ ಕಾಲ |
ವಿತ್ರ ಮಿತ್ರಾಂಭೋಜಮಿತ್ರಾ ||
ಧಾತ್ರಿವಲ್ಲಭ ಭಾಳ |
ನೇತ್ರನ ಪದ ಶತ |
[1]ಪಾ[1]ತ್ರಪೂಜಿತನೆಂದೆನಿಸುವಾ || ೩೨೭ ||

---

1-ಪು (ಅ, ಇ, ಉ, ಎ, ಒ, ಕ )

ಇಂದು ಕುಲಾಬ್ಧಿಗೆ ।
ಚಂದಿರರಿಪು ಸಿಂಧು ।
ಮಂ[1]ದಾ[1]ರನುರು ವೀರಪಾಂಡ್ಯ ॥
ಕುಂದಿಲ್ಲದುರೆ ಬಾಳು ।
ತೊಂದಿನ ಹರಲೀಲೆ ।
[2]ಯಂ[2]ದವೆಂತೆನಲೋರ್ವ ಕಧಿಕಾ ॥ ೩೨೮ ॥

ಸಕಲ ಶಾಸ್ತ್ರಂಗಳ ।
ಮುಖದಿಂದ ಚಂದ್ರಧಾ ।
ರಕ ಮೊದಲಾದ ಲೀಲೆಯನೂ ॥
ಪ್ರಕಟಿಸುವಾಗಲಂ ।
ಬಿಕೆಯು ಕಲ್ಯಾಣದ ।
ಸುಕಥೆಗೇಳುತ್ತ ಚಿತ್ತದೊಳೂ ॥ ೩೨೯ ॥

ಸಂತಸದಿಂ ಗಿರಿ ।
ಕಾಂತನೆಂತಪ್ಪ ಮ ।
ಹಾಂತನೊ ಹರಹರ ಎನುತಾ ॥
ನಾಂ ತಪದಿಂ ಚೆಲ್ವ ।
ಕಾಂತೆಯುರುಗಳ ಸೀ ।
ಮಂತ ರನ್ನವೆನಿಸುವೋರ್ವ ॥ ೩೩೦ ॥

ಕುವರಿಯ ಪಡೆದೀವೆ ।
ಶಿವಗೆನುತಾ ಪಾಂಡ್ಯ ।
ನೃವರಾ ಬಲ್ತಪವನೆಸಗಲೂ ॥

---

1-ದ (ಉ, ಕ, ಚ, ಜ, ಟ), ಥ (ಇ, ಒ, ಗ.) 2-ಯಿ (ಒ, ಗ.)

ರವಿ ಶತಕೋಟಿಯು |
ಛವಿಯು ಪಳಿವೊಲಿ[1]ರ್ದ[1] |
ಶಿವ ನಿಜದೋರುತಿಂತೆಂದ || ೩೩೧ ||

ಮನದಳ್ತಿಯುಂ ಪೇಳ |
ವನಿಪಾಲಯೆನೆ ಚೆಲ್ವ |
ವನಿತೆಯುರುಗಳಧಿದೈವಾ ||
ಎನಿಸಿ ರಾಜಿಸುತೋರ್ವ |
ತನೆಯುನೀಯುಜೇ |
ಕೆನೆ ವರವಿತ್ರೀಶ ಪೋಗೆ || ೩೩೨ ||

ಪಿರಿದು ಮೋಹದೊಳೀಶ |
ನರಸಿಯು ಧ್ಯಾನ ಮು |
ಪ್ಪುರಿಗೊಂಡು ವರವೀರಪಾಂಡ್ಯ ||
ನರಸಿ ರತ್ನಾವತಿ |
ಗಿರದಾಗ ಗರ್ಭ ವಿ |
ಸ್ತರವೆತ್ತು ನವಮಾಸವಾಗೆ || ೩೩೩ ||

ಸುಮೂಹೂರ್ತದೊಳು ಪುಟ್ಟಿ |
ದಮಿತ ಕನ್ಯಾ ರತ್ನ |
ಕಮಲ ಶರ್ವಾಣಿ ನಾಮುವನೂ ||
ಮಮತೆಯಿಂದಿಟ್ಟು [2]ಕೂ[2] |
ರಮೆಯಿಂದ ಸಲಹಿದ |
ಕ್ರಮದಿಂದಲೀರಾರು ವರುಷ || ೩೩೪ ||

---

1_ರ್ಜ (೩)    2 ಕು (ಅ, ಇ ಉ, ಎ ಒ, ಕ)

[1]ಒದಗಿ[1]ದ ಜವ್ವನ ।
ಮದರೂಪು ವಿಭ್ರಮು ।
ಪದವಿಡೆ ಕಂಡು ನೃಪಾಲಾ ॥
ಮುದವುಣ್ಕೆ ಶಿವನ ಶ್ರೀ ।
ಪದವ ನೆನೆಯೆ ಬಂದ ।
ಮದನಾರಿ ಶತವೃದ್ಧನಾಗಿ ॥ ೩೩೫ ॥

ಬರಲಿದಿರೆದ್ದು ಶ್ರೀ ।
ಚರಣಕೆ ಮಣಿದು ಕು ।
ಳ್ಳಿರಲಿತ್ತು ನಿನ್ನಿಚ್ಛೆಯೇನೂ ॥
ಕರುಣಿಸೆನಲು ನಿನ್ನ ।
ವರಪುತ್ರಿಯನು ಬೇಡಲ್ ।
ಭರದೊಳ್ಳೆತಂದೆ ನಿನ್ನೆಡೆಗೆ ॥ ೩೩೬ ॥

ಅತಿ ಸಂಭ್ರಮದಿ ನಿನ್ನ ।
ಸುತೆಯ ಧಾರೆಯನೆರೆ ।
ಕ್ಷಿತಿಪಾಲ ಎನೆ ವೈಭವದೊಳೂ ॥
ರತಿವೆತ್ತು ಕೊಡಲಾಗ ।
ಮಿತ ಭಕ್ತಿಗಂಡು ಪಾ ।
ರ್ವತೀಪತಿ ಮೆಚ್ಚಿ ತ[2]ನ್ನಿಜವಾ[2] ॥ ೩೩೭ ॥

ತೋರೆ ನಿರ್ಜರರು ಕ್ಕೈ ।
ದೋರೆ ಪೂಮಳೆಗಳ ।
ಬಾರಿಪ ದೇವದುಂದುಭಿಯ ॥

---

1–ರೊದವಿ (ಉ, ಕ, ಚ, ಟ.)    2–ನ್ನ ಪದವನು (ಎ.)

7

ಮೀರಿದಬ್ಬರದೊಳು |
ಮೂರು ಕಣ್ಣಾಭವನ |
ಬೇರತ್ತೆ ಮಾವ [1]ಮುಖ್ಯ[1]ರನೂ || ೩೩೮ ||

ನವಮಣಿ ಕಾಂತಿಯಿಂ |
ಸವೆದ ಪುಷ್ಪಕದೊಳು |
ಶಿವನೊಯ್ದು ರಜತಾಚಲಕೆ ||
ಅವನಿಪನಿನ್ನೋರ್ವ |
ಭವಗೆ ದೀಕ್ಷಯನಿತ್ತ |
ವಿವರವ ಕೇಳ್ ಭೈರವಾಂಕಾ || ೩೩೯ ||

ಲಿಂಗನಿಷ್ಠಾತುಷ್ಟ |
ಜಂಗಮ ಪದಪದ್ಮ |
ಭೃಂಗನತ್ಯಮಲಿನ ಶೈವಾ ||
ಶೃಂಗಾರ ವಿಮಲ ತ |
ರಂಗ ಶ್ರೀ ಕಲಿಗಣ |
ಪುಂಗವ ತನ್ನ ದೇಶದೊಳೂ || ೩೪೦ ||

ಶಿವಭಕ್ತರಲ್ಲದೆ |
ಭವಿಗಳಿಲ್ಲೆನಿಸಿ ದೇ |
ಶವ ಪಾಲಿಸುವ ಸಮಯ[2]ದಲಿ[2] ||
ನವಮುಗ್ಧ ಪಾಮರ |
ತ್ವವ ತಾಳ್ದಭವ ಬಂದು |
ಶಿವ ಮೊರೆಯಿಡುತಿರೆ ಕೇಳ್ದು ನೃಪನೂ || ೩೪೧ ||

---

1_ಮೂವ (ಗ) 2_ದೊಳು (ಅ, ಎ.)

ಕರಸಿ ಕೇಳಲು ತೆರೆ |
ಹೊರೆ ಬಿಟ್ಟೆ ಬಿಡಾರ |
ಅರಸಾಳುಗಳ ಬಲು ಭಯವು ||
ಪಿರಿದೆನೆ ನಾನಾಳ್ವ |
ಧರಣಿಯೊಳಿಂತಪ್ಪ |
ಪುರುಷರಿ[1]ಲ್ಲಿದು[1] ಹುಸಿಯೆನಲೂ || ೩೪೨ ||

ಹುಸಿಯಲ್ಲವೀಗೆ[2]ಮ್ಮ[2] |
ಹೆಸರಾದಿ ಗೌಡನಾ |
ನೊಸೆದಿಪ್ಪೆ ಗುರುಪುರದೊಳಗೆ ||
ವಸುಧೇಶಯೆನಲು ಸಂ |
ತಸ ಮಾಳ್ಪೆ ನಿನ್ನ ಮಾ |
ನಸಕೆ ಸದ್ಭಕ್ತನಾಗೆನಲೂ || ೩೪೩ ||

ಬೇಡ ಬೇಡಿದರಿಂದ |
ಕೇಡಹುದೆನಗೆ ನಾ |
ಡಾಡಿಯ ದೇವರಂತಲ್ಲಾ ||
ರೂಢೀಶ ಎನೆಪಾಪ |
ಓಡುಗೆನುತ ಕೈಯ್ಯ |
ನೀಡಿ ಪಿಡಿವುತ ಲಿಂಗವನೂ || ೩೪೪ ||

ಧರಿಸಿಕೊಳ್ಳೆನೆ ಬೇಡ |
ಧರಣೀಶ ಎನೆ ಕೋಪ |
ವೆರಸಿ ಖಡ್ಗವನೆತ್ತಿ ಪೊಯ್ಯೆ ||

---

1-ಲೆನೆ (ಎ.)   2-ನ್ನ (ಇ, ಉ, ಎ, ಕ, ಗ, ಜ, ಟ.)

ಹರದುದಾ ಮುಗ್ಧ ಪಾ |
ಮರವೇಪ ನಿಜವ ಶಂ |
ಕರ ನಿಜದೋರಿ ಜೇಡು ಬೇಡೆನಲೂ || ೩೪೫ ||

ನಿನಗೆ ದೀಕ್ಷೆಯನೀವ |
ಮನವಾದುದೆನೆ ನೆರೆ |
ದನಿಮಿಷಕುಲ್ಮ ನೋಡುತಿರಲೂ ||
ಚಿನುಮಯ ಲಿಂಗವಿ |
ತ್ತನಘ ಮಂತ್ರದ ಭೇದ |
ವನು ಪೇಳೆ ಶಿವ ಮೆಚ್ಚಿ ತೊಳಗಿ || ೩೪೬ ||

ಬೆಳಗುವ ಪುಷ್ಪಕ |
ದೊಳಗಿಟ್ಟು ಕೈಲಾಸ |
ಚಲಕೆ ಕೊಂಡೊಯ್ದು ಸೋಮೇಶಾ ||
ಬಳಿಕೋರ್ವ ಭಕ್ತ ನಿ |
ಶ್ಚಲಚಿತ್ತನಚ್ಯುತ |
ನಳವ ಕೇಳ್ ಭೈರವರಾಜಾ || ೩೪೭ ||

ಜೂಜಿಂದ ನಳ ಧರ್ಮ |
ರಾಜ ಸೂರಿಯ ಸೇನ |
ವಾಜಿವಲ್ಲಭರು ಮುಂಕೆಟ್ಟ ||
[1]ಈ[1] ಜಗವರಿಯಲಾ |
ರಾಜಮೌಳಿಯ ಭಕ್ತ |
ರಾಜ ನಿಮಿತ್ತವಾಡುವನೂ || ೩೪೮ ||

---

1-ತ್ರ್ಯ (ಅ, ಎ, ಗ.), ತ್ರಿ (ಕ, ಜ.)

ಎನುತಲಾವಾವ ಜೂ।
ಜಿನ ಬಗೆಯುಂಟವ।
ಮನದೊಳು ಶಿವನ ಶ್ರೀ ಪದವಾ॥
ನೆನೆದಾಡುತಿರಲೆಲ್ಲ।
ಮನುಜರ [1]ಗೆಲಿದರ್ಥ।
ವನು [1]ತಂದು ಶರಣ ಸಂಕುಲಕೆ ॥ ೩೪೯ ॥

ಮಾಡುತ ನಿಜನಿಷ್ಠೆ।
ಗೂಡಾದ ಮೂರ್ಖನಾ।
ರಾಡುವ ಜೂಜ ನಾನೊಮ್ಮೆ॥
ನೋಡಬೇಕೆಂದೀಶ।
ಜೋಡಿಸಿದನು ಮಹಾ।
ದಾಡಂಬರದ ವಣಿಜತೆಯಾ ॥ ೩೫೦ ॥

ತೊಟ್ಟಾಭರಣ ಪೊದ್ದ।
ಪಟ್ಟಾವಳಿಯ ಹೊನ್ನ।
ಪೆಟ್ಟಿಗೆಗಳ ಪೊತ್ತು ಬರ್ಪ॥
ರೊಟ್ಟೋಜೆ ಸಹಿತ ಬಂ।
ದಿಟ್ಟಸಿ ಜೂಜಿನ।
ಕಟ್ಟೆಯ ಸಾರುತೆನ್ನೊಡನೆ ॥ ೩೫೧ ॥

ಗೆಲುವರುಂಟೆ ಜೂಜು।
ಫಲವೇನು ಮೇಲೊ[2]ಡ್ಡ[2]।
ಕಲಸೆನ್ನೆ ಸಾಸಿರ ಪೊನ್ನನೆನಲೂ॥

---

1-ರ್ಥಗಳನು। ಗೆಲಿ (ಇ.) 2-ದ್ದ (ಬ.)

ಭಲ ಭಲ ಎನುತಿದಿ ।
ರಿಲಿ ನಿಂದು ಮೂರ್ಖನಾ ।
ರ್ಗಲಿದನೊಂದಚ್ಚ ನಿನ್ನೊಮ್ಮೆ || ೩೫೨ ||

ಆಡುವ ಬಾಸೋತ ।
ರೋಡುವನಲ್ಲ ವೇ ।
ಲ್ನೋಡಿದೊಂದು ಲಕ್ಷ[1]ವೇಲೊಡ್ಡ[1] ||
ಆಡೆನೆ ಶಿವಯೆನು ।
ತಾಡಿ ಗೆಲಲು ನೀ ।
ರೋಡಿತು ಶಿವನ ಮುಖಾಬ್ಜ || ೩೫೩ ||

ಕೊಡು ಬೇಗ ನೀ ಸೋತ ।
ಒಡವೆಯೆಲ್ಲವನೆನೆ ।
ಬಡವನೆನಗೆ ಗತಿಯಿಲ್ಲ ||
ಬಿಡಬೇಹುದೆನಲೆಮ್ಮ ।
ಒಡೆಯರುಗಳ ಧನ ।
ನುಡಿಯುದಿ[2]ರೀ[2] ಮಾತನೆನಲೂ || ೩೫೪ ||

ಕೊಂದಡೆ ಕೊಲು ಹಣ ।
ವೊಂದಿಲ್ಲವೆನೆ ಕಾಲ ।
ಬಂಧಿಸಿ ಬಿಗಿದೆರಗಟ್ಟೆ ||
ಮುಂದುವರಿವ ಕೋಪ ।
ದಿಂದ ವೊಯ್ಯಲು ಬಾಲ ।
ಚಂದಿರಧರ ನಿಜದೋರಿ || ೩೫೫ ||

---

1-ನೊಡ್ಡುವೆನು (ಇ.)     2-ರಾ (ಅ, ಇ, ಎ- ಒ, ಕ, ಗ.)

ಬೇಡೆನಲೆನ್ನೊಡ ।
ನಾಡಿ ಸೋತರ್ಥವ ।
ನೀಡೀವೆನೆ ಕೊಟ್ಟು ತೊಳಪಾ ॥
ಮಾಡದೊಳಿಂಬಿಟ್ಟು ।
ನಾಡೆ ಕೈಲಾಸಕಾ ।
ರೂಢ ಸೋಮೇಶ ಕೊಂಡೊಯಿದ ॥ ೩೫೬ ॥

ಅರಿದು ಶಂಕರ ಭಕ್ತಿ ।
ಯರಿದರಿದದರಿಂದ ।
ಪಿರಿದು ಜಂಗಮ ಭಕ್ತಿಯವರೊ ॥
ಳರಿದು ಬೇಡೀತ ನೀವು ।
ದರಿವದರಿಂದವ ।
ತ್ಯರಿದು ಮತ್ತೊಂದಾವುದೆನಲೂ ॥ ೩೫೭ ॥

ಸಿರಿಯಾಳಸುತನ ಸಂ ।
ಹರಿಸಿ ಪಾಕವ ಮಾಡಿ ।
ಹರಗಿತ್ತ ಮನುಚೋಳನೆಂಬ ॥
ಧರಣೀಶ ತನಯನ ।
ಹರಿಸಿ ತ್ರಿಶೂಲಿಗಿ ।
ತ್ತುರುತರ ಮುಕ್ತಿಪಡೆದನೂ ॥ ೩೫೮ ॥

ಅಗಜಾವರನನತಿ ।
ನಗಿಸಿ ಕಾಯಕಗೊಂಡ ।
ನಗೆಯ ಮಾರಯ್ಯ ಮತ್ತೋರ್ವ ॥

ಮೃಗಧರಾಂಕನ ಹಾಸ್ಯ |
ಮಿಗೆ ಮಾಡಿ ಪುಣ್ಯದೊ |
[1]ರ[1]ಗೆಯಾದ ಕಡವೂರಕಾರಿ || ೩೫೯ ||

ವಿಷವಿಳುಹಿದ ರುದ್ರ |
ಪಶುಪತಿ ಸೆಲದಿಯ ದು |
ರ್ವಿಷವಿಳುಹಿದ ನಕ್ಕನಾರೂ ||
ರಸಿಕ ಲಲನೆ ವ್ರಣ |
ವಿಷವ ಬಿಡಿಸಿದನೂ |
ರಸನೆಯಿಂ ವಾಗೀಶ್ವರಯ್ಯ || ೩೬೦ ||

ತ್ರಿಣಯನ ಬಾಣಬಿ |
ನ್ನಣದಿ ಪೂಜಿಸಿ ತನ್ನ |
ಮಣಿವಾಗಿಲಲ್ಲಿ ಕಾಪಿಟ್ಟು ||
ಕುಣಿಯಲಾರದೆ ಸೋ[2]ತಂ[2] |
ಕ್ಷಣದೊಳು ಬಹುರೂಪಿ |
ಅಣಿಯರ ಖ[3]ಂ[3]ಗಾಯಿಸಿದನೂ || ೩೬೧ ||

ಹುಲಿಯ ಭಯದಿ ಬಿಲ್ವ |
ದೆಲೆಯೊಳರ್ಚಿಸಿದನು |
ಸಲೆ ಶಿವರಾತ್ರಿ ಸಂಕಣ್ಣಾ ||
ಕಳವಿಂದ ಕೈಲಾಸ |
ದೊಳು ಪೊಕ್ಕು ಸುಕುಮಾರ |
ಮಲಹರಾಂಘ್ರಿಯ ಕಂಡುಳಿದನೂ || ೩೬೨ ||

---

1-ರೆ (ಅ, ಎ.) 2-ತಾ (ಅ, ಇ, ಉ, ಗ, ಟ.); ತ (ಕ, ಚ, ಜ.) 3-ರು (ಗ.)

ಆದಿಶೈವದ ಭೇದಾ |
ಭೇದ ವಿ[1]ಧಿಗಳ[1]ಮೇ |
ಲಾದ ಶ್ರೀ ವೀರಶೈವದೊಳು ||
ಮಾದೇವರಡಿಗಂಡ |
ಸಾಧಕರಾರೆನ |
ಲೋದಿ ಪೇಳಿದನು ಪುರಾಣಿ || ೩೭೩ ||

ಸಕಲಾಗಮಾದಿಗಳ್ |
ಪ್ರಕಟದಿಂ ಪೇಳ್ದ ಶೈ |
ವ ಕಳಾ ಚತುಷ್ಟಯದೊಳಗೆ ||
ಯುಕುತಿಗೆ ನಿಲುಕದ ಸ |
ನ್ಮುಕುತಿಗೆ ಮೂಲವಾ |
ದಕಳಂಕ ಚರಿತವೆಂದೆನಿಪಾ || ೩೭೪ ||

ಘೋರ ಭವಾಬ್ಧಿಗೆ |
ತಾರಣ ಪಾಳಿಗೆ |
ಮಾರಣ ನಿರ್ವಾಣ ಪದಕೆ ||
ಕಾರಣ ಕರಣ ಸಂ |
ಹಾರಣ ಚಾರಗ |
ಳೋಣ ವೀರಶೈವವನೂ || ೩೭೫ ||

ಕೇಳ್ವನುತ್ಕರುಷವ |
ತಾಳ್ವನುಬ್ಬೆದ್ದು ಪೊ |
ಗಳ್ವನಾನಂದ ವಾರುಧಿಯೊ ||

---

1-ದೀಗ (ಕ, ಗ, ಜ.)

ಳಾಳ್ವ ಹರಾಂಘ್ರಿಗೆ ।
ಬೀಳ್ವನತ್ಯಚ್ಚರಿ ।
ದಾಳ್ವನು ಭೈರವರಾಜಾ ॥ ೩೬೬ ॥

ಸಕಲೇಂದ್ರಿಯಗಳೊಳು ।
ಲಿಖಿಸಿ ಲಿಂಗವ ಹಸ್ತ ।
ಬಕುತಿಯರ್ಪಿತದವದಾನಾ ॥
ಮುಖವಾಗಿ ಸ್ಥಳ ಕುಳಾ ।
ಧಿಕವ ತಿಳಿದು ತಾನೆ ।
ಮುಕುತಿರೂಪಾದ ಶರಣಾ ॥ ೩೬೭ ॥

ಉಂಡು ಉಪವಾಸಿ ಕೈ ।
ಕೊಂಡು ಬ್ರಂಹಚಾರಿ ಮೇಣ್ ।
ಕಂಡು ಕೇಳ್ದಿಲ್ಲ ನಿಃಕಾಮಿ ॥
ಖಂಡಿತ[1]ನ[1]ಲ್ಲದ ।
ಖಂಡಬ್ರಂಹೈಕ ಚಿ ।
ನ್ಮಂಡನನಾ ನಿಜಶರಣಾ ॥ ೩೬೮ ॥

ಲಿಂಗಾಂಗಿ ನವಲಿಂಗ ।
ಸಂಗಿ ಸಂತತಲಿಂಗ ।
ಶೃಂಗಾರ ನಿಜಲಿಂಗರೂಪಾ ॥

---

1-ವಿ (ಕ, ಜ )

ಮಂಗಳಾತ್ಮಕನೆಂದು |
ಪೊಂಗಿ ಪುರಾಣಿ ನೃ |
ಪಂಗರುಪಿದ ವಿನಯದಲಿ || ३೬೯ ||

ಎಂತೆಂತುಟುಸುರುಸು |
ರೆಂತಿಹುದಾ ಶೈವ |
ಭ್ರಾಂತಿಗೆ ವ್ಯೆಯಿತ್ತರಾರೂ ||
ನೀಂ ತಿಳುಪೆಂದು ಭೂ |
ಕಾಂತ ಕೇಳಲು ವೇಳಿ |
ದಂ ತವೆ ವೀರಶೈವವನೂ || ३೭೦ ||

ಆಲಿಸು ಬಕುತಿ ಸ |
ಕೀಲವಹ ಹಳೈಯ್ಯ |
ನಾಲವಟ್ಟದ ಮಧುವರಸಾ ||
ಮೇಲಪ್ಪ ಕುಲಸೂತ |
ಕಾಳ[1]ಯು[1]ಳಿದು ಮುಕ್ತಿ |
ಮೂಲಿಗರೆಂದೆನಿಸಿದರೂ || ३೭೧ ||

ಜನನಸೂತಕವೆಂಬು |
ದಿನಿಸಿಲ್ಲದನಘ ಪಾ |
ವನ ಶೀಲಸಿಂ[2]ಘು[2]ಮರಾಯ ||
ಘನ ಪ್ರೇತಸೂತಕ |
ವನು ಬಗೆಯದೆ ಶಂಕರ |
ನನುಣಿಸಿದಳು ನಿಂಬವ್ವೆ || ३೭೨ ||

---

1-ಯ (ಅ, ಇ, ಎ, ಒ.) 2-ದ (ಇ)

ಪೊಸಮಾಣಿಕಂಬೊರೆ |
ದೆಸೆ [1]ಪಟ್ಟವ[1] ನಿಂಬಿ |
ಶಶಿಕಲಾಧರನ ಮೇಲಿರಿಸಿ ||
ಬಿಸವಂದಭವನೊಡ |
ನುಸುರ್ದ ಮಾತಿಗೆ ಬಿಟ್ಟ |
ನೊಸೆದು ಸೂರೆಯ ತನ್ನ ಪುರವ || ೩೭೩ ||

ಶಿವನ ಭಕ್ತರು ಸವಿ |
ಸವಿದುಳುಹಿದ ಪ್ರಸಾ |
ದವೆ ಭವರೋಗಕ್ಕೆ ಮದ್ದು ||
ಅವಿರ[2]ತ[2] ಮುಕ್ತಿಗೆ |
ತವರೆಂದು ನಂಬಿರ್ದ |
ಭುವಿಯೊಳು ಬಿಬ್ಬಿಬಾಚಯ್ಯ || ೩೭೪ ||

ಶರಣಾಳಿ ಸವಿದೊಕ್ಕ |
ಪರಮ ಪ್ರಸಾದದಿಂ |
ಪರವಿನ್ನೊಂದಿಲ್ಲಿಲ್ಲವೆಂದು ||
ಚಿರಕಾಲ ಬಸವೇಶ |
ನರಮನೆಯೊಳಗಿರ್ದ |
ಮರುಳಶಂಕರಯೋಗಿವರನೂ || ೩೭೫ ||

ಎಸೆವ ಸರ್ವಾಂಗದೊಳ್ |
ಮಿಸುಪ ಲಿಂಗಂಗಳ |
ವಶಮಾಡಿದನು ತೆಲುಗೇಶಾ ||

---

1_ಟ್ವವ (ಎ.) ; ಟದ (ಅ, ಇ, ಉ.)   2_ಳ (ಗ.)

ಮಸಣಯ್ಯ ಶಿವಸಮ |
ರಸ ಚಿತ್ರನಾಗಿ[1]ರ್ದ[1] |
ರಸಿಕ ಉರಿಲಿಂಗ[2]ದೇವ[2]ಯ್ಯಾ ॥ ೩೭೬ ॥

ಹರಶರಣರಿಗರ್ಧ |
ಹರಣಾಭಿಮಾನವ |
ಪಿರಿದು ನಿರ್ವಂಚನೆಯಿಂದಾ ॥
ಭರದೊಳಿತ್ತವರ ಲೆಂ |
ಕರ ಲೆಂಕನಾಗಿಪ್ಪ |
ವರದ ಗಾಣದಕನ್ನಪ್ಪಯ್ಯಾ ॥ ೩೭೭ ॥

ಚರಲಿಂಗದಂಘ್ರಿ ಪಂ |
ಕರುಹತೋಯಕ್ಕೊರೆ |
ದೊರೆಯಿಲ್ಲದೆಂದದತೂಗಿ ॥
ಮರಳಿ ವಾದಿಸಿದ ಭೂ |
ಸುರರ ಸುಟ್ಟವರ್ಗಳ |
ಹರಣವಿತ್ತನು ಕಾಚಿರಾಜಾ ॥ ೩೭೮ ॥

ಮೃದು ಮಧುರೋಕ್ತಿಯಿಂ |
ಪೊ[3]ಡವೀಶನುತಿಗೆ[3] ಇದು |
ಮದಹರನ ಪುರಿಯೆನಿಸಿದ ॥
ವಿದಿತ ಪ್ರಸಾದವ |
ಮುದದಿಂದ ಪಡೆದ ಸಂ |
ಮುದಚಿತ್ತನಿಂದೆ ಶಾಂತಯ್ಯ ॥ ೩೭೯ ॥

---

1-ರ್ದ (ಅ. ಇ, ಉ, ಕ, ಗ, ಜ.) 2-ಪೆದ್ದ (ಇ, ಟ.) 3-ದವಿಸನ್ನುತಿಗ ಅ, ಇ, ಉ, ಎ, ಒ, ಕ, ಚ.)

ಕನಸಿನೊಳೋರ್ವ ವಿ |
ಪ್ರನು ಮುಟ್ಟಿದನಲಾ ಎಂ |
ದೆನುತ ಶ್ರೀ ಗಿರಿಯಲ್ಲಿಗೆಯ್ದಿ ||
ತನುವ ತತ್ತರಿದರಿ |
ದನಘನೆಂದೆನಿಸಿಕೊಂ |
ಡನು ವೀರ ಶಂಕರದಾ[1]ಸಾ[1] || ೩೮೦ ||

ಗುರು ಲಿಂಗ ಜಂಗಮ |
ವರ ಸುಪ್ರಸಾದವ |
ಚರಣಾಂಬು ಭಸಿತ ರುದ್ರಾಕ್ಷ ||
ಪರಮ ಮಂತ್ರವ ಬಿಡ |
ದಿರಿಯೆಂದು ಸಾರ್ವನಾ |
ವರ[2]ದ[2] ಧಕ್ಕೆಯ ಬ್ರಂಹಿದೇವ || ೩೮೧ ||

ಹರಗೀಯ್ಯದುಂಡೆನಾ |
ಚ[3]ರ[3]ಪಾಲನೆಂದೆಂಬ |
ಪಿರಿದು ಶಂಕೆಯ ಸ್ವಪ್ನಗಂಡು ||
ಭರದಿ ಕೂರಲಗಿಂದು |
ದರವ ಸೀಳ್ದಡುಕಿದ |
ಕರುಳಕೇತಯ್ಯನಮ್ಮಯ್ಯ || ೩೮೨ ||

ಜನನಿಯ ನುಡಿ[4]ಗತಿ[4] |
ಮನನೊಂದು ಕರುಳ ಭೋಂ |
ಕನೆ ಕಿತ್ತು ತೋರಣಗಟ್ಟಿ ||

1–ಸಯ್ಯ (ಎ.)  2–ತ (ಅ, ಇ, ಉ, ಜ.)  3–ರು (ಎ.) ; ಲು (ಆ, ಬ.)
4–ಗೇಳಿ (ಅ.).

ಮಸುಮಥಾರಿಯ ಕೃಪೆ |
ಯನು ಪಡೆದನಘ ಪಾ |
ವನ ಶೀಲ ಪರ್ವತಯ್ಯಗಳು || ೩೮೩ ||

ಉನ್ನ[1]ತಾಶ್ಚರಿಯವ[1] |
ದಿನ್ನೊಂದು ಪೇಳ್ವೆ ಕೇ |
ಳೆನ್ನಲದಾವುದೆಂದೆನಲೂ ||
ಪನ್ನತಿವಡೆದಿರ್ಪ |
ಪನ್ನಗಾ ಭರಣನಾಳ್ |
ಸನ್ನುತ ಗಂಡಗತ್ತರಿಯಾ || ೩೮೪ ||

ನಾಚಯ್ಯಗಳು ಚಿಕ್ಕ |
ರಾಚಮಲ್ಲಯ್ಯನು |
ರಾಚಮಲ್ಲಯ್ಯಗಳ್ಕೂಡಿ ||
ಪ್ರಾಚುರಾನಂದಾಬ್ಧಿ |
ವೀಚಿಯೊಳಿರಲೋರ್ವ |
ನೀಚವೈಷ್ಣವ ಶಿವನಿಂದೆ || ೩೮೫ ||

ಮಾಡಲವನ ಪೊಡ |
ದೀಡಾಡುವಸಿತರೋಳ್ |
ಕೂಡಿದ್ದ ಪರಸಮಯಿಗಳು ||
ನಾಡೆ ನಮ್ಮೊಳು ಮಾತ |
ನಾಡೆನೆ ಕಡುಕೋಪ |
ಮಾಡಿ ತದ್ಗಳದೊಳು ಗಂಡ || ೩೮೬ ||

---

1-ತಚ್ಚರಿಯಾವಾ (ಎ, ಬಿ, ಗ)

ಗತ್ತರಿಯನು ಸಾರ್ಚಿ ।
ಕತ್ತರಿಸಲು ಶಿರವಿ ।
ಪೃತ್ತ್ಯೈದು ಲೀಲಾ ಕಥನವಾ ॥
ಬಿತ್ತರಿಸಲು ಕುಣಿ ।
ವೃತ್ತಿರ್ದುದಾ ಮುಂಡ ।
ಇತ್ತಲೀ ರಾಚಮಲ್ಲಯ್ಯ ॥ ೩೮೭ ॥

ಧಿರುರೆ ಮುಝುರೆ ಹೊ ಭಾ ।
ಪುರೆ ಲೇಸು ಲೇಸೆಂದು ।
ಸುರೆ ಚಿಕ್ಕರಾಚ ಮಲ್ಲಯ್ಯ ॥
ಕರಿದಾನವನ ಮೆಟ್ಟಿ ।
ಭರದಿ ಕುಣಿದೊಲಂಥಾ ।
ಸುರನೆದೆಯೊಡದುಳಿದಂತೆ ॥ ೩೮೮ ॥

ಮಾದೇವನಾ ವ್ಯಾಘ್ರ ।
ಪಾದನ ತಪಕೊಲಿ ।
ದಾದಿನಾಡಿದೊಲು ಬಿಜ್ಜಮ ॥
ಹಾದೇವಿ ಇದಿರೊಳ್ ವಿ ।
ನೋದಿಸಿದೊಲು ಚೋಳ ।
ಭೂಧವಸಿದಿರ ಲೀಲೆ[1]ಯಲಿ[1] ॥ ೩೮೯ ॥

ಸಿಮಿರ್ದಾಡಿದೊಲು ನಾಟ್ಯ ।
ನಮಿತ್ತಾಂಡಿಯರ ಮುಂದೆ ।
ಉಮೆಯಾಣ್ಮ ನಟಿಸಿ ತೋರಿದೊಲು ॥

1. ಯೊಲು (ಉ, ಗ)

ಕ್ರಮದಿ [1]ತನ್ನಯ[1] ಶಿರ |
ಕಮಲವಿಡಿದು ನರ್ತ |
ನವ ಧವಳೇಶನಾಡಿದೊಲೂ || ೩೯೦ ||

ಚೇರಮುನಿದಿರೊಳು ಪು |
ರಾರಿಯಾಡಿದೊಲು ಕುಂ |
ಬಾರನಿದಿರ ಕುಣಿದಂತೆ ||
ಚಾರು ಪತಂಜಲಿ |
ಗೋರಂತೆ ನಟಿಸಿದೊಲ್ |
ಮಾರನುರುಹಿ ತುಳಿದಂತೆ || ೩೯೧ ||

ನಂಬಿಯುನಭಿನವ ತ್ರಿ |
ಯಂಬಕನೆಂದುರೆ |
ನಂಬಿ ಪೇರ್ಗುಡಿಗಟ್ಟಿ ನಲಿದು ||
ಮುಂಬಿನೊಳ್ಕುಣಿದ ಕು |
ರುಂಬರೆಂತಂತಾಡಿ |
ದಂ ಬಹುಲೀಲೆ ಕೈಮಿಗಲು || ೩೯೨ ||

ಕಂಕರಿ ಎಸೆವ ರ |
ಣಂಕಾರಕೊಡನತಿ |
ಪ್ರೆಂಕದಿಂ ತಕ್ಕಯ್ಯನಿದಿರಾ ||
ಶಂಕರ ನಟಿಸಿದೊಲ್ |
ಭೋಂಕನೆದ್ದತ್ಯಂತ |
ಬಿಂಕದಿಂ ಕುಣಿದುದಾ ಮುಂಡಾ || ೩೯೩ ||

---

1-ಬ್ರಂಹನ (ಅ)

ನಟನ ತಾಂಡವ ನಾಟ್ಯ |
ಪಟುನೃತ್ಯಲಾಸ್ಯದು |
ತ್ಕಟನೇರುತಿರುಪುರುಲವಣಿಯಾ ||
ದಿಟ ಮಂಡಿತ ಕುಂಡಲ |
ಸುಟಿಲಾಗ ವೇಗ ನಂ |
ಘಟಿತವಜ್ಜಡಗಳ್ ಮಾಳಾಸ || ೩೯೪ ||

ಭರತ ಮಾತಂಗದ |
ತಿರುಪು ಭಾಂ[1]ಡ[1]ಕ ಕುಹ |
ಳರವರಿಯಿಂದಾಡುತಿರಲೂ ||
ಹರಮೆಚ್ಚಿ ಹೊ ಹೊ ಭಾ |
ಪುರೆ ಪುರೆ ಪುರೆಯೆನೆ |
ಸುರಿದಪೂರ್ಣಮಳೆಯು ನಿರ್ಜರರೂ || ೩೯೫ ||

ಸುರದುಂದುಭಿಧ್ವಾನ |
ಮೊರೆಯೆ ತನ್ನಿಜವ ಶಂ |
ಕರ ತೋರಿ ಶಿವನಟ್ಟೆಯೊಳೂ ||
ಇರಿಸುತವರ ರೌಪ್ಯ
ಗಿರಿಗೊಯಿದಸಿತ್ತ ನ |
ಭರ್ಗರದಿ ಕೆಟ್ಟೋ[2]ಡಿತಾ[2] ಸಮಯಾ || ೩೯೬ ||

ಚಕ್ರವರ್ತಿಯ ಧರಾ |
ಚಕ್ರವರಿಯಲು ಪ |
ರಾಕ್ರಮಿ ವೀರಬ್ರಂಹಯ್ಯ ||

---

1_ಡು (ಇ, ಉ, ಎ, ಕ, ಟ)  2 ಡುವಾ (ಉ, ಕ, ಗ, ಚ, ಟ).

**ಚಕ್ರದಿಂ ಪೊಡದಫು** |
ಚಕ್ರಕೆ ಕಳುಪಿದ |
ವಿಕ್ರಮವೆಂತೆನೆ ಪೇಳ್ವೆಂ || ೩೯೭ ||

ಕರವಾದಿ ದುಷ್ಟ ಶಂ |
ಕರ ಕೂಜಿಗನ ಕೊಂದ |
ಗುರುವೀರಬಂಕಯ್ಯನಂತೆ ||
ಧರೆಯರಿಯಲು ಸುವು |
ಕರ ಶೆಟ್ಟಿಯನು ಕೊಂದ |
ವರ ರಾಜಬ್ರಂಹಯ್ಯನಂತೆ || ೩೯೮ ||

ಎಲೆನಾಡ ಚೋಳನ |
ತಲೆಗೊಂಡ ಗಂಡನು |
ಜ್ವಲ ವೀರ ಬಲದೇವನಂತೆ ||
ಬಲ್ ಕ್ಷಪಣನ ಕೊಂದ |
ನಲೆ ಸಗರದ ಬ್ರಂಹ |
ನೊಲು ವೀರಬ್ರಂಹಸಿರಿದನೂ || ೩೯೯ ||

ಕೇಳು ಮೇಲ್ಗಧಯ ವುಂ |
ಭಾಳಲೋಚನನಾಳು |
ಮೋಳಿಗಯ್ಯಗಳ ಚರಿತವಾ ||
ಪೇಳುವೆ ನೃಪರ ಸಂ |
ಮೋಳಾದಿ ಸಂತತ |
ಬಾಳುವ ಮುಹದೇವರಾಣಿ || ೪೦೦ ||

ಎಂಬ ನೃಪಾಲನಾ ।
ಡಂಬರ ಮಿಗೆ ಸಾ ।
ರಂಭದಿಂ ಮಾಂಡವ್ಯ ಪುರದಿ ॥
ಕುಂಭಿರಥಾಶ್ವೇಜಿ ।
ಇಂಬುವೊಡೆಯಲು ತ್ರಿ ।
ಯಂಬಕ ಸೇವ ತತ್ಪರನೂ ॥ ೪೦೧ ॥

ವೀರಶೈವಾಚಾರ ।
ಪೂರನತ್ಯಂತ ಗಂ ।
ಭೀರನುದಾರ ಚಿತ್ಸಾರ ॥
ಪಾರಮಾಗಮ ಸುವಿ ।
ಚಾರಘೋರಣ್ಯಾ ಕು ।
ಠಾರನೆಂದೆನಿಸಿ ಬಾಳುವನು ॥ ೪೦೨ ॥

ಏಕ ಮೂರುತಿ ತ್ರಿವಿ ।
ಧಾಕಾರ ತ್ರಿವಿಧ ಮೇಣ್ ।
ಏಕಾರ್ಥವಾಗಿಹುದೆಂಬ ॥
ಶ್ಲೋಕಾರ್ಥವರಿದು ವಿ ।
ವೇಕದಿಂ ಶಿವ ಚೇತ ।
ನಾಕೃತಿ ಚರವೆಂಬುದರಿದೂ ॥ ೪೦೩ ॥

ಕನಕಾಭರಣ ವಸ್ತ್ರ ।
ವನಿತೆ ವಾಹನವಿತ್ತ ।
ಇನಿದುಣಿಸಾದೀ ವಸ್ತುಗಳಾ ॥
ವಿನಯದೊಳೀವ ಭೂ ।
ವನಪಾಲ ಸತತ ಚಿ ।
ದ್ಘನ ಚಾರು ಚರಿತ ಜಂಗಮಕೆ ॥ ೪೦೪ ॥

ಶರಣರೊಳ್ಕೂಟ ಮೋಣ್ |
ಶರಣರೊಳ್ನೋಟವಾ |
ಶರಣರೊಳ್ಕೇಳ ಸಂಮೇಳಾ ||
ಶರಣರೊಳ್ ಸುಖದೊಳ್ |
ಪರಿಣತೆ ವಡೆದಿರ್ಪ |
ಧರಣೀಶ ಮಹಾದೇವರಾಣಿ || ೪೦೫ ||

ಲಿಂಗ ಭೋಗೋಪ ಭೋ |
ಗಂಗಳಲ್ಲದೆ ಅನ್ಯ |
ಕಂಗವಿಸದ ನಿಜಶರಣಾ ||
ಸಂಗತಿಯೊಡನೆ ದಿ |
ನಂಗಳಿವುತಮಿರೆ |
ಪೊಂಗಿ ಬಂದುದು ಮಧುಮಾಸಾ || ೪೦೬ ||

ಆ ಸಮಯದೊಳು ಭೂ |
ಮೀಶನಲ್ಲಿಗೆ ವನ |
ವಾಸ ರಾಗದೊಳೆಯ್ದಿ ಬಂದೂ ||
ಸೂಸಿ [1]ಪೂವಲಿಯ[1] ಸಂ |
ತೋಷದಿಂ ನತನಾಗಿ |
ಲೇಸನುಸುರೆ ಪೂರ್ವಸಂಧಿ || ೪೦೭ ||

**ಅಂತು ಸಂಧಿ ೧ ಕ್ಕಂ ಪದ ೪೦೭ ಕ್ಕಂ ಮಂಗಳಮಹಾ**

ಶ್ರೀ ಶ್ರೀ ಶ್ರೀ

---

1. ವಂಜುಲಿಯ (ಉ.) ; ಮೂವಲಮ (ಎ.)

# ಎರಡನೆಯ ಸಂಧಿ

## ಮೋಳಿಗೆಮಾರಯ್ಯಗಳು ಜಂಗಮಾರ್ಚನೆ ಮಾಡಿ ಶಿವನಲ್ಲಿ ಐಕ್ಯವಾದುದು.

### ಮತ್ತೇಭವಿಕ್ರೀಡಿತಾ ವೃತ್ತ

**ಸೂಚನೆ.—**

ವನಪಾಲಂಗುಡಲೀವುತ್ತೇಳ್ದು ಜಲಕೇಳಿ ಲೋಲನಾಗು[1]ತ್ತೆ[1] ಪ |
ತ್ತನ ವೈಹಾರಮನೆಯ್ದೆ ಮಾಡಿ ಚರವಾದಾರಾಧನಂಗೆ[2]ಯ್ದು[2] ಭ ||
ದ್ರನಿಗಂತಾ ಮುಳಿದಂತೆ ಸದ್ವಿರತಿಯಿಂ ಕಲ್ಯಾಣಮಂ ಪೊಕ್ಕು ತ |
ತ್ತನುವಂ ದಂಡಿಸಿ ಮೋಳಿಗಯ್ಯ ಮಿಗೆ ಪೋದಂ ರಜತಾಶೈಲಕಂ ||

ಪಂದತಿಶಯಮುದ |
ಸಿಂಧುರಾಜನ ಚಲ್ವ |
ಮಂದರಧರ ನತಚರಣಾ ||
ಅಂದುರುಗಮ ತಾತ |
ಸಿಂಧುಶೇಖರ ಸದಾ |
ನಂದ ಸೋಮೇಶಗೆರಗುವೆ || ೧ ||

ಕಾಣುತ ಮಹದೇವ |
ರಾಣಿ ನೃಪನಿಗೆ ಸು |
ಜಾಣನಂದನ ವನಪಾಲಾ ||
ಕ್ಷೋಣಿಯೊಳ್ಬಿದ್ದೆದ್ದು |
ಮಾಣದೆ ಲಲಿತ ಕೈ |
ಗಾಣಿಕೆಗಳನಿತ್ತನಾಗಾ || ೨ ||

ಪೂ[3]ದೊಡ[3]ಗಳ ಪಣ್ಣ |
ಲಾದಿಯನಿತ್ತು ಪ್ರ |
ಮೋದದೊಳಾ ವನಪಾಲಾ ||

---

1-ತ್ತ (ಅ,ಇ,ಉ,ಎ,ಕ,ಗ,ಟ.) 2-ಯ್ದ (ಇ.), ಯ್ದು (ಉ.) 3-ದೋಟ (ಕ,

ಪೋದುದು ಹಿಮಬಂದ |
ಮಾಧವನೆಂಬುದ |
ಭೂಧವನೊಡನುಸುರಿದನೂ || ೩ ||

ಪಲ್ಲವಗಳ ಮಾವು |
ಮಲ್ಲಿಗೆ ಪೂವ್ವ ಕಂ |
ಕೆಲ್ಲಿಯ ಶೋಕೆ ಕಣ್ಗಂಪಾ ||
ನೆಲ್ಲೆಲರಾಂತಿನಿ |
ವಿಲ್ಲನ ನಖನೊಳು |
ಸಲ್ಲೀಲೆ[1]ಯಿಂ[1] ಬಂದವೀಗಾ || ೪ ||

ಸುರಹೊನ್ನೆ ಬಕುಳ ಪಾ |
ದರಿ ಪಾರಿಜಾತಗಳ್ |
ಸುರಗಿ ಪುನ್ನಾಗ ತಮಾಲಾ ||
ಕುರವಕ ಶಿಖರಿದಾ |
ವರೆ ಪೂಗ ತಿಲಕ ವಂ |
ಕರುಹ ಚಂಪಕ ಸಿಂಧುವಾರಾ || ೫ ||

ನಿನ್ನ ಬರವ ಸಾರ್ದ |
ವೆನ್ನಲಾ ವನಪಾಲ |
ಗನ್ನಾಡೆ ಮಣಿದೊಡವಿತ್ತು ||
ಮನ್ನಿಸುತೊಡನೆ ಭೋ |
ರನೆದ್ದು ಜಲಕೇಳಿ |
ಗೆನ್ನುತ ಮಹಾದೇವರಾಣಿ || ೬ ||

---

1-ಯೊಳು (ಗ.)

ಏಳಲೊಡನೆ ಸನ್ನೆ |
[1]ದೋ[1]ಳು ಸೂಳೈಪ ನಿ |
ಸ್ಸಾಳ ತಂಬಟೆ ಭೇರಿ ಪಲಲವು ||
ತೂಳವರೆಯು ಚಿನ್ನ |
[2]ಗಾಳೆ[2] ತುತ್ತುರಿಗೊಂಬು |
ಗಾಳೆಗಳೊದರಿದವಾಗಾ || ೭ ||

ತೇರಾನೆ ತೇಜಿಗಳ್ |
ವೀರ ಭಟಾಳಿ ಕು |
ಮಾರ ಮಂತ್ರಿಗಳು ಮನ್ನೆಯರು ||
ಭಾರಿಯ ಕವಿಗಳ |
ಪಾರ ಗಮಕಿ ಚೆಲ್ವ |
ನಾರಿಯರುಗಳ ಸಂದಣಿ[3]ಯೂ[3] || ೮ ||

ದೇವು ಮಝುರೆ ಪ್ರೂತು |
ರಾವು ಭಲರೆಯೆಂಬ |
ಗೋವಾಳಿ ಗೊಲ್ಲರ [4]ಒ[4]ಸದಿ ||
ಭೂವರ ಮುದಿತದಂ |
ತಾವಲ ಶಿರವ ಮೋ |
ಲ್ಲಾವಧಾನದೊಳಡವರಿದನೂ || ೯ ||

ಚಾಮಿ ಕರಾಂಚಿತ |
ಚಾಮರ ತಳಿತಭಿ |
ರಾಮ ಧವಳಾತ ಪತ್ರಗಳೂ ||

---

1_ದೊ (ಅ, ಉ, ಎ, ಕ, ಗ.) ; ಡೋ (ಟ.)  2_ದೊಳೆ (ಅ, ಇ, ಕ, ಗ,
3_ಯಾ (ಕ.)  4_ ವ (ಇ, ಗ.)

ಸೋಮ ಸೂರ್ಯಾನ್ವಯ |
ಭೂಮಿಪರೊಗ್ಗಿನಿಂ |
ದಾ ಮಹಾದೇವ ನೃಪಾಲಾ || ೧೦ ||

ತೆರಳಿದ ರಿಪುರಾಯ |
ಗಿರಿ ವಜ್ರ ದಂಡ ಸಂ |
ಗರ ವೀರನೃಪ ವನಕಾಗಿ ||
ತೆರಳ್ದರಂಗಜನಂಬು |
ಪರಿಜಾಂತೊಲೆಸಿವ ಭಾ |
ಸುರತರ ಕೋಮಲಾಂಗಿಯರೂ || ೧೧ ||

ವಿಕಸಿತಾಂಭೋಜಾತ |
ಮುಖಿಯ[1]ರು ದರಹಾಸ್ಯ[1] |
ದಕಳಂಕ ಚಂದ್ರಾನನೆಯರೂ ||
ಪಿಕನಿನಾದೆಯರತಿ |
ಚಕಿತ ಮೃಗಾಕ್ಷಿಯರ್ |
ಸಕುಟಿಲಾಳಕಿಯರ್ನಡೆದಗೂ || ೧೨ ||

ಬಿಂಬಾಧರದ ನವ |
ಕಂಬುಕಂಧರದುರು |
ಕುಂಭ ಕುಚದ ತಳಿರಡಿಯಾ ||
ರಂಭಾ ರೂಪಿನ ನಿ |
ತಂಬದ ತೋರವ |
ರುಂಬಿನಬಲೆಯರೊದಗಿತೂ || ೧೩ ||

---

1–ಧಾ ದರಹಾಸ (ಉ, ಎ, ಜ.)

ತನಿನೇಹಡೆಸವ ಜಾ |
ಣಿನ ಬರ್ದಿನೆಯರು ಜೌ |
ವನದ ಮೇಲ್ಗಾಡಿ ವೈಸಿಕದಾ ||
ಬಿನದದೊಯ್ಯಾರದಿಂ |
ಪಿನ ಮನ್ಮಥಾಗಮ |
ದನುಭವದವರ್ಗಳೊಡಗಿತೂ || ೧೪ ||

ಗದಗದಿಸುವ ಕಟಿ |
ಮದದಂತಿಗಮನ ಬಿ |
[1]ಣ್ಬೊ[1]ದವಿದು ರೋಜವರ್ಮಗಳ ||
ಪದಿರುವಾ ಕೊಳಗಾದ |
ಹದದ ಕಾತುರದ ಮೇ |
ಲ್ಕದುಕು ನೋಟದ ಹಸ್ತಿನಿಯರೂ || ೧೫ ||

ಅರುಣಾಂಗದಲಘು ಪಿಂ |
ಗರದ ಚೊಕ್ಕಳವತಿ ನ |
ಲವಂಬಗಾಂತ ಯೋಗಿಗಳಾ ||
ಹುರುಳುಗೆಡಿಪ ಹೊಸ |
ಪರೆಯುದೇಳ್ಗೆಯ ವರ |
ಸೊರಸು ನೋಟದ [2]ಚಿತ್ತಿ[2]ನಿಯರೂ || ೧೬ ||

ಮಿಸುಪತೆಳ್ಪಸುರ ಕ |
ರ್ಕಶ ಕುಚದುರು ಚಿತ್ರ |
ವಸನದುಡೆಯುರಂಗಾಘರದಾ ||

---

1 ಣ್ಬೇ (ಇ)  2–ಶಂಖಿ (ಅ, ಇ, ಉ, ಎ, ಕ, ಚ, ಟ.)

ಬೆಸುಗೆವಾತಿನ ವಿಟ |
ರಸುಗುಬ್ಬಸಪ ಮಾಳ್ಪ |
ನಸೆಮುಸೆಯ ನೋಟ[1]ವ[1] ಶಂಖಿಸಿಯರು || ೧೭ ||

ಪೂಗಂಪಿನೊಡಲಂಚೆ |
ವೇಗ ಬಳ್ಮೊಲೆ ಮುಡಿ |
ಬೀಗಿ ಬೆಳೆದ ಕಟಿತಟದ ||
ರಾಗಾಧರದ ನಲ್ಮೆ |
ಯೋಗವಾತಿನ ಲಾಗು |
ವೇಗ ನೋಟದ ಪದ್ಮಿನಿಯರೂ || ೧೮ ||

ತೋರ ಹಾರದ ಬಾಹು |
ಪೂರ ತ್ರಿಸರದ ಕ್ಕೈ |
ಯೂರದ್ಮೆ ರನ್ನದೋಲೆಗಳಾ ||
ವೀರ ಮುದ್ರಿಕೆಯು ಮಂ |
ಜೀರದ ಕಟಕದ |
ಧಾರಗಂಕಣದ [2]ಬಾ[2]ಲೆಯರೂ || ೧೯||

ಭಾವಕಿಯರ಼ ಪದ |
ನೇವುರ ಕಿಂಕಿಣೀ |
ರಾವ ಚೆಂಡಿಗಳ ಕೊಂಡಾಟ ||
ಗೋವಾಳಿ ಗೊಲ್ಲರ |
ಗಾವಳಿ ಭೇರಿದಂ |
ದಾವಳವೆನೆ ನಡೆತಂದಾ || ೨೦ ||

---

1-ದೊಳು (ಅ, ಇ.)   2 ಬ (ಉ, ಗ, ಚ.)

ಘನ ಸಾರ ಕಾಶ್ಮೀರ |
ವಿನುತ ಬಾವನ್ನ ನೂ |
ತನ ಸುಜನವಾದಿ [1]ಕಸ್ತುರಿಯಾ[1] ||
ಪನಿನೀರ ಪಾತ್ರೆ ಜೀ |
ವನ ಯಂತ್ರ ಪೊನ್ನಂಡೆ |
ಕನಕಾದಿ ರಚಿತ ದೇವಾಂಗಾ || ೨೧ ||

ಇಂತಿವು ಮೊದಲಾದ |
ನಂತ ಸಹಿತ ಭೂ |
ಕಾಂತ ಬರಲು ಮುಂದೆಸೆಯೊಳೂ ||
ಕಂತು ವಸಂತರು |
ಮಂತಣವಿಹ ವನ |
ವಂ ತವೆ ಕಂಡ ಸಂತಸದಿ || ೨೨ ||

ಪೂತ ಮಲ್ಲಿಗೆ ಪಾರಿ |
ಜಾತ ತಿಲಕ ತೆಂಗು |
ಚೂತ ಮಂದಾರ ಜಂಭೀರ ||
ಜಾತಿ ಚಂದನ ಪೂಗ |
ವಾತುಂಗಶೋಭೆ ಮೇಲ್ |
ಜೋತೊರಗುವ ಪನಸೀಳೆ || ೨೩ ||

ಪೂಗಂಪನುಂಡುಂಡು |
ರಾಗಿಪ ಭ್ರಮರಗಳ್ |
ತೇಗುವ ಸೋಗೆ ಸೊಕ್ಕೇರಿ ||

1_ಕಸ್ತುರಿ (ಅ, ಉ, ಗ, ಚ.)

ಕೂಗುವ ಪಿಕ ವೃಂದ |
ವೇಗದಂಚೆಗಳಿಂ |
ಬಾಗಿ ಕೇಳಿವನವಿಹುದೂ || ೨೪ ||

ಸುಳಿವ ತಂಬೆಲರ ಚಿಂ |
ದಳಿರ ಮನೆಗಳನು |
ಣ್ಮಳಲ ಪೆರ್ವೆಟ್ಟಗಳಿಂದಾ ||
ಕುಳಿ[1]ವೃ[1]ದಕದ ತಿಳಿ |
ಗೊಳನಲ್ಲಿಗೆಯ್ತಂದ |
ಸಿಳಿಗಧಿನಾಥನರ್ಥಿಯಲಿ || ೨೫ ||

ಬರಲಲ್ಲಿಗೊಡನೆ ಪಂ |
ಕರುಹಮುಖಿಯರು ಕು |
ವರರು ಮಂತ್ರಿಗಳು ಮನ್ನೆಯರೂ ||
ದೊರೆಗಳಾಪ್ತರು ಕವಿ |
ವರರು ಸಖರು ಶಿವ |
ಶರಣರುತ್ಸವ ಮಿಗಿಲಲ್ಲಿ || ೨೬ ||

ಪಂಚೇಂದ್ರಿಯಂಗಳೆ |
ಪಂಚವಕ್ತ್ರಗಳಾಗಿ |
ಪಂಚ ವಿಷಯಗಳ ಸತತ |
ಸಂಚವರಿದು ಬೇಗ |
ವಂಚಿಸದೀವ ಪ್ರ |
ಪಂಚವಿದೂರರಂತಾಗಾ || ೨೭ ||

---

1. ವೊರ್ (ಕ, ಗ, ಜ, ಟ)

ಲಲನಾ ಕದಂಬದೊ |
ಳ್ನಲಿವನುಣ್ಪಿನ ಜಾಣ್ಮೆ |
ಸಲುವ ಬರ್ದೀವ ಭಾವಕಿಯರೂ ||
ಚೆಲುವಿನುನ್ನುತ ಕಲೆ |
ಯೊಲಿವ ಚೊಕ್ಕೆಹದೊರ |
ಳ್ಗಲಹದ ಪೆಣ್ಗಳೊಗ್ಗಿನಲಿ || ೨೮ ||

ಹರುಷದಿಂದಳಕಾ |
ಪುರದೊಳು ಕುಮುದಶೇ ।
ಖರ ಜಲಕೇಳಿ ಲೀಲೆಯುಲಿ ||
ತರುಣಿ ಸಹಿತಲಿರೆ |
ವರ ಮುನಿ ಶಪಿಸಲು |
ಶರೀರ ಪೆರ್ಬೊಲಸಾದಂತಲ್ಲಾ || ೨೯ ||

ಸುರಕನ್ನಿಕೆಯರೊಂದು |
ಸರಸಿಯೊಳು ಮುಳುಗಾಡು |
ತಿರಲವರ್ಗಳದ ವ್ಯೆಲಿಗೆಯಾ ||
ಹರಿಕದ್ದಧೋಮುಖ |
ದರುಶನಕೆಳಸಿ ಹೆ |
ಮ್ಮರನೇರಿ ನೋಡುವಂತಲ್ಲಾ || ೩೦ ||

ವಾರಿ ಕೇಳಿಯ ಸುರ |
ನಾರಿಯರ್ಗಳ ಕಂಡು |
ಬೀರು ಶರ್ಮರು [1]ಸೋತು[1] ಪಿಡೆಯೆ ||

---

1–ಕಂಡು (ಗ.)

ಪಾರಿ ಶಪಿಸಲೀಳು ।
ಧಾರುವಾದರು ನಕ್ರಾ ।
ಕಾರವನ್ನಾಂತರಂತಲ್ಲಾ ॥ ೩೧ ॥

ತರುಣಿಯರೊಡನೆ ಖೇ ।
ಚರಿ ಜಲಕೇಳಿಯೊ ।
ಳ್ಪರಿಣತೆ ವಡೆದಿರೆ ಮುನಿದು ॥
ವರ ಚಿತ್ರೆ ಶಪಿಸೆ ಕ ।
ತ್ತರಿವಾಣಿಯಾಗಲ ।
ಚ್ಚರಿವಟ್ಟು ಪೊರಮಟ್ಟಂತಲ್ಲಾ ॥ ೩೨ ॥

ತಾರಾಪೀಡನ ದಾ ।
ವಾರಿಗಳ್ಚಡಿಯಲು ।
[1]ಘೋ[1]ರ ಮುನಿಪ ಶಪಿಸಿದೊಡೆ ॥
ವಾರುಣಿಯಾದ ಕಾ ।
ಸಾರದೊಳ್ಮುಳುಗಿ ಕು ।
ಮಾರತಿ ನಾಂಚಿದಂತಲ್ಲಾ ॥ ೩೩ ॥

ಅಂಬುಕೇಳಿಯೊಳಿಪ್ಪ ।
ಜಾಂಬುನಂದನ ಸುತೆ ।
ಶಾಂಭವಿಯನು ರತ್ನಪಕ್ಷಿ ।
ನಂಬಿಸಿ ಮಣಿರಥ ।
ನಂ ಬಗಿಯಲು ದಾಳಿ ।
ಬೆಂಬಿಡಮುರೆ ಕಾದಿದಂತೆ ॥ ೩೪ ॥

1–ಗೋ (ಅ, ಇ, ಉ, ಗ.)

ಅಲ್ಲಲ್ಲ ಹರಭಕ್ತ |
ಪಲ್ಲವರಾಯ ಪಿಂ |
ದೆಲ್ಲ ಶರಣರೊಡಗೂಡಿ ||
ಸಲ್ಲೀಲೆಯಿಂ ನವ |
ಪಲ್ಲವಾಧರೆಯರೊಳ್ |
ಚೆಲ್ಲಿ ಸೂಸಿದೊಲು ಪನ್ನೀರಾ || ೩೫ ||

ಪರವೆ ಸೌಂದರರು ಶಂ |
ಬರ ಕೇಳಿಯಲ್ಲಿ ಶಂ |
ಕರನ ನೆನಹ ನೆಲೆಗೊಳಿಸಿ ||
ಹರುಷದಿಂದೋರ್ವರೋ |
ರ್ವರಮೇಲೆ ಚಲ್ಲಿದರ್ |
ಪಿರಿದಪ್ಪೈರ್ವೀಶ[1]ಗಿತ್ತಂ[1]ತೆ || ೩೬ ||

ಮಳೆಯುರಾಚೇಂದ್ರನು |
ತ್ಪಲದಳನೇತ್ರೆಯ |
ರೊಳು ಜಲಕೇಳಿ ಲೀಲೆಯನೂ ||
ಎಳೆವೆರೆ ಧರಗೆ ಪೊಂ |
ಪುಳಿಯೊಗುತಿತ್ತೊಲೋ |
ಕುಳಿಗುಜ್ಜಗಿಸಿದರರ್ಥಿಯಲಿ || ೩೭ ||

ತೊಡಗಿದಬ್ಬಾಲೆಯರ್ |
ಗಡಣವೊಂದೆಸೆ ಮುಗ್ಧ |
ವಡೆಯದೊಂದೆಸೆ ಮುಥ್ಯಮೆಯರಾ ||

---

1 ಗೀವ (ಅ, ಇ, ಉ, ಕ, ಗ.), ಸೀವ (ಟ.)

ಪಡೆಯುದೊಂದೆಸೆ ಸೊಬ |
ಗಡಿದ ವಿದಗ್ಧವಂ |
ಗಡಣವೊಂಡೆಸೆಯೊಳ್ಕವಿವರೂ || ೩೮ ||

ಸಾದಿನಕರದ ಜ |
ವಾದೀ[1]ಶ ಚಂ[1]ದ |
ನಾದಿಪಾಣಿಯು ಘನಸಾರಾ ||
ವೋದ ಕುಂಕುಮುಗ್ಗೈಯು |
ಕಾದಲೆಯುರುಸಿಳ್ದು |
ಮೇದಿನೀಪತಿ ಇದಿರಿನಲಿ || ೩೯ ||

ನಳಿತೋಳ ಲಾಡಿಗಂ |
ಗಳ ಬಾಣ ಧನು ಭ್ರೂ ಪೇ |
ರ್ವೊಲೆಯೆಖೆಡೆಯ ನಖ ಸುರಗಿ ||
ಸುಳಿಗುರುಳ್ಚಿಕ್ರದ |
ಬಲೆಯರೊಂದೆಸೆ ಪೊನ್ನ |
ಜಳಯಂತ್ರದವರ್ಗಳೊಂದೆಸೆಯಾ || ೪೦ ||

ಪಟುತರಲಾಸ್ಯದ |
ಘಟ ಕುಚೆಯರು ಬಿಟ್ಟ |
ಸುಟೆಯೊಳೊದಗಿ ಕೂರಿನೋಡಿ ||
ದಿಟವಾರು ಸನ್ನರ್ದ |
ವಟವೆಂಬ ನಿರಿಗೆ ನಿ |
ಶ್ಚಟವಾಗೆ ಮೂವಲಿಸಿದರೂ || ೪೧ ||

---

1. ಸವ (ಅ, ಕ.) ; ಶಯ (ಉ, ಜ, ಟ.)

ನಿಲ್ಲು ಹೋಗದಿರು ಭೂ ।
ವಲ್ಲಭ ದಕ್ಷನ ।
ಲಲ್ಲ ನೀ ನಿನ್ನ ಕಣ್ಮನವಾ ॥
ಸೊಲ್ಲಿಪೆವೀಗೆಮ್ಮ ।
ಫುಲ್ಲಾಸ್ತ್ರನಾಣೆಯೆಂ ।
ದೆಲ್ಲ ಕನ್ಯರಿಗೊಂಡೊದಗಿತೂ ॥ ೪೨ ॥

ಪೋಗದಿರೆಲೊ ನೃಪ ।
ಭೋಗಿಗಳರಸಿದಿ ।
ರಾಗೆಲೊ ಹಿಡಿ ನೀನೆಂದೂ ॥
ರಾಗದಿಂ ಸತಿಯರೊ ।
ಗ್ಗಾಗಿ ಕವಿದರಟ್ಟಿ ।
ಪೂಗಣೆಯವನಾಳ್ಗಳಂತೆ *॥ ೪೩ ॥

ಅರಸನ ಪಿಡಿದೊಬ್ಬ ।
ತರುಣಿ ತವಕದಿ ಮೇ ।
ಲ್ವರಿದು ತೊಡರಿ ಬಿಡದಿರಲೂ ॥
ಸ್ಮರಚಿನ್ಹಗಂಡು ಭೂ ।
ವರ ವರ್ಮದಾಣದೊಳ್ ।
ಕರವಿಡೆ ಸೊರಗಿದಳವಳೂ *॥ ೪೪ ॥

ಘನಸಾರ ಕಾಶ್ಮೀರ ।
ವನು ಹೊಯ್ದುಳೋರ್ವಳ ।
ವನಿಪನ ಕಣ್ಗೆ ಮತ್ತೋರ್ವ ॥

---

* ಈ ಪದ್ಯಗಳು (ಅ, ಇ, ಉ, ಎ, ಕ, ಗ, ಚ, ಟ) ಪ್ರತಿಗಳಲ್ಲಿ ಇಲ್ಲ.

ವನಿತೆ ಸಾದಿನಕರ |
ವನರುಹದೊಳು ಪೊಯಿುದು |
ಮನುಮಥನಧಟುದೋರಿದಳೂ || ೪೫ ||

ವದಿಗ ಪೂಚಂಡಿನೊಳ್ |
ಕದುಬಿ ಕಾಶ್ಮೀರದೊಳ್ |
ಪದೆದು ಬಾವನ್ನ ಪಂಕದೊಳೂ ||
ಮುದದಿ ಜವಾದಿಯೊಳ್ |
ಸುದತಿಯುರ್ಕವಿದಿಡ |
ಲಧಟುಗುಂದಿದನು ಭೂಪಾಲಾ || ೪೬ ||

ಜಳೆಯಂತ್ರದಿಂದ ಕೋ |
ಮಳೆ ಎಸೆಯೆ ಮತ್ತೋರ್ವ |
ನಳಿನಾಕ್ಷಿ ಪೊನ್ನಂಡೆಯಿಂದಾ ||
ಕುಳಿರ್ವೋದಕದಿನಿಡೆ |
ಪೊಳದಿಟ್ಟನವಳ ಭೂ |
ತಳಪತಿ ನಿರ್ಗಂತುಕದೊಳೂ || ೪೭ ||

ತಳಿರ ತಕ್ಕಡದರು |
ತ್ರಳದ ತೋಮರದವರ್ |
ನಳಿನ ಕೋರಕದಿಟ್ಟೆಯುವರು ||
ಹೊಳೆವ ಹೊಂಗೇದಗೆ |
ದಳದ ಕೂರಸಿಯುವರ್ |
ಬಳಸಿ ಕೈಮಾಡಿದರ್ ನೃಪನ || ೪೮ ||

ತರಹರಿಸದೆ ಝೋಂಪಿ ।
ಪರಸನ ಪಿಡಿದೋರ್ವ ।
ಳ್ಪರಿರಂಜಗೆಯ್ದೆದೆಹೊಯಿದೂ ॥
ಸ್ಮರನ ಕಟ್ಟಾಳ್ತನ ।
ದಿರವಿಡಿಗೆನೆನಾಣ್ಚಿ ।
ಸರಿದೋಡಿ ಸಾಹಸವಿಮ್ಮಡಿಸಿ ॥ ೪೯ ॥

ಹುಡಿಕಿ ಬಾಲೆಯರ ಕೈ ।
ದುಡಿಕಿ ಮುಗ್ಧೆಯರ ಕೈ ಮೇ ।
ಲಿಡಿಕಿ ಚಂದನವ ಮಧ್ಯಮೆಯರಾ ॥
ತೊಡಕಿ ಲೋಲೆಯರ ಕಾ ।
ಲ್ಗೆಡಿಪ ನೃಪನನಟ್ಟಿ ।
ಪಿಡಿದುಪಚಾರಿಪರಾಗಾ ॥ ೫೦ ॥

ಅಲರಂಬಿಗಿದಿರಾಂಪ ।
ಬಲುಗಯ್ಯ ವೀರವರ್ಮೂ ।
ನೆಲದೊಳಗಾರಾದರುಂಟೆ ॥
ಎಲೊ ನಿನ್ನ ಪಾಡೇಂ ಕು ।
ಟಿಲಯೆಂದುನುರು ಶೋಕ ।
ದೊಲವ ನುಡಿಯೆ ಧೃತಿಗೆಟ್ಟು ॥ ೫೧ ॥

ಸೋಲಕ್ಕೆ ಸುಗಿದು ಭೂ ।
ಪಾಲ ಕೆಟ್ಟೋಡಿ ಕೇ ।
ಳಾಲದೊಳ್ಪೊಗೆ ಪೊಕ್ಕರೊಡನೆ ॥

ರೋಲಂ ಬಾಳಕದ ಶುಂ |
ಡಾಲ ಗಮನದವರ್ |
ಕೋಲಾಹಲಂ ಗೆಯ್ದುರಾಗಾ || ೫೨ ||

ತಂಗದಿಮುರ್ಖಿಯೋರ್ವ |
ಳ್ಕಂಗದಿರ್ಗಳ ಚೆಲ್ವೆ |
ಯಂಗನೆಯೋರ್ವಳು ರೋಜಾ ||
ಸಿಂಗರಾಂಬುವ ಚೆಲ್ವೆ |
ಕಂಗೆ ನೃಪಾಲನ |
ಪಿಂಗಡೆಯೋರ್ವಳಪ್ಪಿದಳೂ || ೫೩ ||

ಕಡುಲೋಭಿಯುನ[1]ಗಿತ್ತ |
ಕೊ[1]ಡಚಿತ್ತ ವಿತ್ತವ |
ಬಿಡದಿರೆಂದಾಕಾವ ತನ್ನ ||
ಪಡೆಗೆ ಪೇಳಲು ಕಟ್ಟ |
ಹುಡುಕು ನೀರದ್ದುವೊ |
ಲ್ಮಡದಿಯರಾಟ ರಂಜಿಸಿತೂ || ೫೪ ||

ಮುಳುಗಿದಮೂರ್ಡಿದರ್ |
ಪೊಳೆದರೋಡಿದರು ಭೂ |
ತಳನಾಥ ನಿಲ್ಲು ನಿಲ್ಲೆನುತಾ ||
ತುಳುಕಿದರ್ಜಲವ ಕೋ |
ಮಲೆಯರ್ ನೃಪಾಲನೋ |
ರ್ವಳ ಮೇಲೆ ನೀರ್ದುಳುಕಿದನೂ || ೫೫ ||

---

1. ಗೀತ ' ಕು (ಉ, ಎ, ಕ, ಗ, ಚ.)

ನೆಯ್ದಿಲ್ಗಳೆಯ್ದಿ ಕ ।
ನ್ನೈಯ್ದಿಲಾದವು ಪದ್ಮ ।
ವ್ಯೈಯ್ಗರೆದುದು ಪದ್ಮದೊಳಗೆ ॥
ವ್ಯೈಯ್ದೇರಿದವು ಚಕ್ರ ।
ಸೈಯ್ಗಡದುದು ಕೇಕಿ ।
ಯ್ಯೈಯ್ದಿದಂಬ ನಿಭರಾಯುನಿದಿರಾ ॥ ೫೬ ॥

ಲೀಲೆ ಕೈಮಿಗಿಲು ಭೂ ।
ಪಾಲ ಕೆಟ್ಟೋಡಿತ ।
ತ್ಕಾಲವನಡರಲಂತಾಗಾ ॥
ಬಾಲಕಿಯರು ಪಿಂದೆ ।
ಸಾಲಿಟ್ಟರಾ ದೌತ ।
ಚೇಲಾಂಕದಂಗ ಭಂಗಿಯಲಿ ॥ ೫೭ ॥

ನಸುವಣ್ಣದುಟಿಯರ್ಗೆ ।
ಕಿಸುವಣ್ಣಗಣ್ಣಗೆ ।
ಸಸಿನಾದ ದಮ್ಮಿಲ್ಲದವರ್ಗೆ ॥
ಪೊಸದುಡ [1]ತೊಡುವ ಕೋ ।
ಟಿ ಸುದತಿ[1]ಯು ರಾಸ್ಯ ।
ಬಿಸಜ ತ[2]ರು[2]ಣ ಬಿಂಬದಂತೆ ॥ ೫೮ ॥

ಅತಿ ಸಂಭ್ರಮದೊಳು ಭೂ ।
ಪತಿ ರತಿಪತಿಮದ ।
ಹರನನರ್ಚಿಪನೇಹ ನಿಮಿರ್ದು ॥

---

1_ರೊಡಲು । ಕೊಟ್ಟಿಸೆದ ಸತಿ (ಅ, ಉ, ಎ, ಕ, ಗ, ಟ.) 2_ರ (ಇ, ಎ, ಚ.)

ಹಿತರನುನ್ನತರ ಸಂ।
ಸ್ತುತರ ಲಿಂಗಾಂಗ ಸಂ।
ಯುತರ ಶರಣರೊಡಗೂಡಿ ॥ ೫೯ ॥

ಕ್ಷೋಣೀಶ ಮಹಾದೇವ।
ರಾಣಿ ನೃಪಾಲಕ।
ನೇಣಾಂಕಧರನ ಶ್ರೀಪದವ॥
ಜಾಣಿಂದ ಪೂಜಿಸಿ।
ಪ್ರಾಣಸಖರೊಳು ಶಿ।
ವಾಣತಿಯಿಂದ ಶೇಷವನೂ ॥ ೬೦ ॥

ಸವಿದು ಶರಣರೊಳು।
ತ್ಸವ ಮಿಗೆ ಮತ್ತಗ।
ಜವನೇರಿ ತಳಿತ ಬೆಳ್ಗೊಡೆಯಾ॥
ಚವರಿ ಸೀಗುರಿ ಮುಂದೆ।
ಯುವತಿಯರ್ಕುವರರು।
ಕವಿಗಮಕಿಗಳು ಮನ್ನೆಯರು ॥ ೬೧ ॥

ಪಾರಕ ಜನದ ಕೊಂ।
ಡಾಟ ಕಾಲಾಳ್ಗಜ।
ಘೋಟ ವಿತಾನತೆರ್ಬಹಳ॥
ಮೀಟು ಜವ್ವನೆಯರ।
ಘಾಟದ ಚಕಿತ [1]ಕ।
ಣ್ಬೇ[1]ಟದೊಳ್ಬೆರಸಿ ಬೆಚ್ಚಂತೆ ॥ ೬೨ ॥

---

1–ಕಂ। ಬೇ (ಉ, ಕ, ಟ.)

ಬರೆ ವರೆ ಪುರದ ಗೋ |
ಪುರದ ಪ್ರಾ[1]ಕಾರ[1]ದೊಳ್ |
ವರ ಭದ್ರಮಂಟಪಂಗಳಲಿ ||
ನೆರೆದು ನೋಡುವ ಚೆಲ್ವ |
ತರುಣಿಯರನು ಕಾಣು |
ತರಸನೆಯ್ತಂದರಮನೆಯಾ || ೬೩ ||

ಮುಂದಿಳಿದಾನೆಯ |
ನಿಂದು ಕಳುಪಿದರ |
ವಿಂದ ಮುಖಿಯರ ಮನ್ನೆಯರಾ ||
ವಂದಿ ಜನರು ಜಯ |
ವೆಂದೆಂಬ ರವದೊಳಾ |
ನಂದದಿಂ ಸಿಂಹವಿಷ್ಟರವಾ || ೬೪ ||

ನಡರೆ ಕಣ್ಬೆಳಗಿನೊ |
ಪ್ಪಿಡಿ ನಡುವಿನ ಸೋರು |
ಮುಡಿಯ ಕೆಂಬಲ್ಲ ಪೇರ್ವೊಲೆಯಾ ||
ಜಡಿವ ಜಘನದ ಮೆ |
ಲ್ಲಡಿಯರಾರತಿಗಳ |
ಪಿಡಿದು ನಿವಾಳಿಸಲಾಗಾ || ೬೫ ||

ಕಳುಪಿದನವರ ಭೂ |
ತಳನಾಥ ಮಿನುಪ ಮು |
ಗುಳು ನಗೆಯಿಂದುಳಿದಾಪ್ತ ||

---

1_ಸಾದ (ಅ, ಉ, ಕ.)

ರೊಳು ಸುಖವಿರಲಿತ್ತ |
ಜಲಜಗೆಳೆಯು ಸಾರ್ದ |
ಕಳೆಯೋಡಿ ಪಶ್ಚಿಮಾದ್ರಿಯ[1]ಲಿ[1] || ೬೬ ||

ರಸುವೆ ತನ್ನಾಳ್ಗಳ್ಗೊ |
ರಸಿಯೆ ಕಿರಣದೊಳಿ |
ಕಿಸುಸಂಜೆವನೆ ಪಡುವೆ[2]ಣ್ಣಾ[2] ||
ಎಸೆವ ಪೆಂಡಿರು ದುರ್ಗ |
ದೆಸೆವೆಟ್ಟಿನಗ್ರದೊ |
ಳೆಸೆದಿನನತಿ ವೈಭವದಲ್ಲಿ || ೬೭ ||

ಕುಲಟೆಯರ್ಸಂಕೇತ |
ಸ್ಥಲವ ಸೂಚಿಪ ಪೊತ್ತು |
ಲಲನಾ ವಿಟಾಳಿ ಸಿಂಗರಿಸಿ ||
ಅಲರಂಬಗತ್ಯಂತ |
ಗೆಲವನಾಗಿಪ ಪೊತ್ತು |
ಸಲೆಸೊಂಪಿನೆಸೆವ ತಂಪೊತ್ತು || ೬೮ ||

ಇನನು ಪರಾಂಗನೆ |
ಯನು ಕೂಡೆ ನೋಡಿ ಪ |
ದ್ಮಿನಿ ನೋವಪೊತ್ತು ಕಣ್ಮುಚ್ಚಿ ||
ಮನದೊಳ್ಚಂದ್ರನ ಬರ |
ವನೆ ಬಯಸುತ ಕುಮು |
ದಿನಿಯರೆ ಪೂವಿನ ಪೊತ್ತು || ೬೯ ||

---

1. ನು (ಎ, ಗ, ಟ.) 2. ಣ್ಣು (ಎ, ಕ, ಗ, ಚ, ಜ, ಟ.)

ಆ ಸಮಯದಿ ತಾ |
ರಾಸತಿಯರು ಕಂಡು |
ಗಾಸಿಮಾಡುವರೆನ್ನ ಬಾಳ್ಕೆ ||
ಮೋಸರಿಸಿದುದೆಂದು |
ಹೇಸು ತರುಣನಂಬು |
ರಾಶಿಯೊಳ್ಬಿದ್ದು ವೈಗರೆದಾ || ೭೦ ||

ಸುಳಿವ ಸಮೀರ ಪೊಂ |
ಪುಳಿಪ ಚಕೋರನು |
ಮ್ಮಳಿಪ ರಾಜೀವನುಬ್ಬೇಳ್ವ ||
ಜಳನಿಧಿ ಸಂತಸ |
ದಳಿವ ನಿಲಾಬ್ಜದಿಂ |
ಹಳಿಸುವ ಚಕ್ರವಾಕಗಳೂ || ೭೧ ||

ಪಸರಿಸಿದುದು ತಮ |
ಬಿಸಜಸಂಭವನ [1]ಪೂ[1] |
ಯುಸದಂತೆ ಮಾಯಾ ತಮಂಧಾ ||
ಮುಸುಕಿದಂದದಿ ದಶ |
ದೆಸೆಯೊಳು ಕಾರ್ಮೇಘಾ |
ಮುಸಗಿದಟ್ಟೈಸಿತೆಂಬಂತೆ || ೭೨ ||

ಘೋರಂಧಕಾರದೊಳ್ |
ಚೋರರೊಳ್ ಪಾಣ್ಬರೊಳ್ |
ಕೂರಿಸಲ್ ಲೀಲೆಕ್ಕೈಮಿಗಲೂ ||

---

1. ಪಾ (ಅ, ಗ, ಚ.); ಪ (ಇ, ಉ, ಎ, ಕ, ಜ.)

ಆರವೆ ಸೂಂತಿಕಾ |
ಗಾರ ಜೀರ್ನಾಲಯಂ |
ದೂರದಾವೇಶ ಗೋಸಾಲೆ || ೭೩ ||

ಮನಕಿನಿದಿನ ತಾಣ |
ವೆನಿಸಿರಲ್ಲಿಗೋ |
ರ್ವನು ಬರೆ ಮತ್ತೋರ್ವ ಜಾರೆ ||
ಇನಯು ಪೇಳಿದ ಕುರು |
ಪೆನುತ ಬಾರದ ಮುನ್ನ |
ಮನಸಿಜಕೇಳಿಗುಜ್ಜುಗಿಸೆ || ೭೪ ||

ಅವಳು ತನ್ನೋಪನೆಂ |
ದವನು ತನ್ನಿನೆಯುಳಿಂ |
ದವರೀರ್ವರಾಗ ಕಾಮುನನು ||
ಭವದಿ ಸತ್ಕಲೆಗಳ |
ಸವಿ ಸರಿಬಾರದಿರ |
ಲವರೀರ್ವರರಿ[1]ದು ಹಾಯೆ[1]ಂದೂ || ೭೫ ||

ನಗುತ ಕೈವೊಯಿವುತೊ |
ಯ್ಯನೆ ಪೋಗಲವರತ್ತ |
ಮಗುಳೋರ್ವ ಜಾರೆಯೆಯ್ತಪಾರ್ ||
ಬಗೆಗೊಂಡಭಿಕನೋರ್ವ |
ಬಿಗಿಯುಪ್ಪಿ ನೆರೆಯೆ ಸುಂ |
ಮಗೆ ಸೋಲಕೊಡಲನೀಡಾಡಿ || ೭೬ ||

---

1. ಧಹರೆ (ಇ, ಉ, ಎ, ಕ, ಟ.)

ಜಾರ ಚೋರತೆಗೆದು ।
ದಾರಿಯಲ್ಲವೆ ನೋಡು ।
ನಾರಿಯೆನುತ ನೇಹ ನಿಮಿರ್ದು ॥
ಕೂರಿ ಕೂಡಿದರು ಮ ।
ನೋರಾಗರಸವಾರ್ಧಿ ।
ಮೇರೆದಪ್ಪಿದುದೊ ಎಂಬಂತೆ ॥ ೭೭ ॥

ಕಾರಾಟ ಕದ್ರುಂಕಿನೊ ।
ಯ್ಯಾರ ಚುಂಬನಗಳ ।
ಮೇರೆಲಾವಕನಂಚೆ ಬರ್ಹಿ ॥
ಪಾರಿವ ಪರಪುಟ್ಟ ।
ದೋರೆಗೆ ಒಲಿತ ಹೂಂ ।
ಕಾರೋಕ್ತಿ ನೇಮಗತಿಗಳಾ ॥ ೭೮ ॥

ಜೊಂಮಿಂದ ಕವಿತಹ ।
ಮುಂಮು[1]ರಿ ವ್ರೊ[1]ಲ್ಲವ ।
ತಿಂಮುಸದೊಳಗಾಗಿ ತೀರ್ಚಿ ॥
ಬಿಂಮುವಟ್ಟರೆ ತವ ।
ಕಂ ಮಿಕ್ಕು ಮತ್ತೋರ್ವಳ್ ।
ಸುಂಮುನೆಯ್ತಂದು ಪಾಳ್ಕನೆಗ ॥ ೭೯ ॥

ಕಿಡೆಯಲ್ಲಿ ತವಕದು ।
ಕ್ಕುಡುಗದೆ ತೆಗೆದಪ್ಪಿ ।
ತುಡುಕಿ ಬಾಯ್ಗೂಡಿ ಲಲ್ಲೈಸಿ ॥

---

1. ರಹೆ (ಇ, ಉ, ಎ, ಜ, ಟ.)

ಕಡೆಗಾಣದಾರ್ಥದಿಂ |
ದೊಡಗೂಡಿ ನಸು ಜೊಂಪಿ |
ಪೊಡಲಿಂಪು ಪುಳುಕ ಸ್ವೇದಗಳಿಂ ॥ ೮೦ ॥

ನಖದ ಬಾಸುಳು ಪಲ್ಗ |
ದ್ರುಕಿನುಬ್ಬು ಮೂರ್ಛೆಯೊಳ್ |
ಸುಕರವಾಗಿರಲಾ ಸಮಯದಿ ॥
ಪ್ರಕಟಿಸುತ್ತಿರ್ಪ ತಾ |
ರಕಿ ನಿಶಾಂಗನೆಯ ಸೂ |
ಸಕವೆನಿಪಂತೆ ರಾಜಿಪವೂ ॥ ೮೧ ॥

ಗಗನ ಗಂಗಾ ಡಿಂಡೀ |
ರಗಳೊವ್ಯೋಮಾಳಕ |
ಮಿಗೆ ಋಷಿಕುಲವೆಲ್ಲ ಪರಸಿ ॥
ಬಗೆವೆಚ್ಚಿ ತಳಿದಕ್ಷ |
ತೆಗಳೊ ಬೆಳ್ವೆಳದಿಂಗ |
ಳಗೆಯೊ ತಾರಾಮಂಡಲಗಳೊ ॥ ೮೨ ॥

ಇಂತಿರೆ ಪೂರ್ವ ದಿ |
ಶಾಂತರಾಳದೊ[1]ಳೊ[1]ಂದು |
ಕಾಂತಿಯನುಗುಳುತೇೞ್ದೆಸಗೆ |
ಕಂತುರಾಜನ ಬಿರು |
ದಾಂತ ದಿಗ್ನಾರಿ ಸೀ |
ಮಂತಮಣಿಯೊಲೆಸೆದಿರ್ದ ॥ ೮೩ ॥

---

1-ಳಿ (ಅ, ಇ, ಉ, ಎ, ಒ, ಗ, ಚ); ಳಗಿ (ಜ)

ಪೊಡವಿಯ ಜನರ್ಗೆ ಪೊಂ ।
ಬೊಡೆಯ ನಿರ್ಮಿಸಿದ ಕೈ ।
ಪಿಡಿಯೊ ಮನ್ಮಥ ವಿರಹಿಗಳ ॥
ಬಿಡದರಸುತ ಕಾಣ ।
ದೊಡನೆ ಪೊತ್ತಿಸಿದ ಹೆ ।
ಜ್ಜೊಡರೊ ಎನಿಸಿತಿಂದುಬಿಂಬಾ ॥ ೮೪ ॥

ಸುರಪತಿಯೂರ ಪೊಂ ।
ಗರುವಾಡದಗ್ರದಿ ।
ಸ್ಫುರಿಸುವ ರನ್ನಗಳಸದಾ ॥
ಪರಿಯೆನಿಸಿಹುದು ಚಂ ।
ದಿರ ಬಟ್ಟು ಮೂಡಣ ।
ಗಿರಿಯ ಚಲ್ವ ಪರಿಭಾಗ[1]ದೊಳು[1] ॥ ೮೫ ॥

ಅಮರ ಸಂಕುಳಕೆಲ್ಲ ।
[2]ಕಮರ್ದ[2]ನುಣಿಸಿದನಾ ।
ಕ್ರಮದಿ ಚರಾ ಚರಂಗಳಿಗೆ ॥
ಅಮರ್ದನುಣಿಪೆನೆಂದು ।
ಸಿಮಿರ್ದು ಪೇರ್ಜೊನ್ನ ಮಂ ।
ಬಮರ್ದ ಸೂಸಿದನು ಚಂದ್ರಮನೂ ॥ ೮೬ ॥

ಗುರುದಾರದಿಂದ ಬಂ ।
ದುರು ಕಿಲ್ವಿಷಾಂಕವೊ ।
ವರ ವೀರಭದ್ರ ಕೋಪದಲಿ ॥

---

1_ದಲಿ (ಉ, ಎ, ಕ, ಗ.)  2_ಮೃತವ (ಗ )

ಭರದೊಳೊದೆಯೆ ಕಂದಿ |
ದುರವೊ ನಿಶಾಂಗನಾ |
ಪರಿ ರಂಭವೆನೆ ಚಿನ್ನವೆಸೆಯೆ || ೮೭ ||

ವಿಧುವರಿದಾವಿಧುಂ |
ತುದನಗೆಲಲು ಜೋಡಿ |
ಸಿದ ಪ್ರಾಕಾರವೊ ಸರ್ವ ಜನದಾ ||
ಮುದದ ಬೀಜಕೆ ಬ್ರಂಹ |
ಪದೆದಾಲವಾಲ ಗ |
ಟ್ಟಿದನೆಂಬೊಲೆಸೆದುದಾ ಪರಿಧಿ || ೮೮ ||

ಆಗಲಂತಾ ವಿಟ |
ನಾಗರಿಕಾದಿಗಳ್ |
ಬೇಗದಿ ಬಂದು ವ್ಯೆಯಿಕ್ಕಿ ||
ಈಗೆಮ್ಮ ನಗರ ಚೆ |
ಲ್ವಾಗಿದೆ ನೋಡಲು |
ದ್ಯೋಗಿಸು ನೃಪಯೆನ್ನಲೊಡನೆ || ೮೯ ||

ಸಿಂಗರಗೆಯ್ದು ಸು |
ರಂಗಿಪ ತೆಳುವೆಳು |
ದಿಂಗಳೊಳಗೆ ಸಖರೊಡನೆ ||
ಅಂಗಜ ರಾಜನ |
ಭಂಗಿಪ ಗಾಡಿ ಬೆ |
ಡಂಗುಗೆ ನೃಪ ನಡೆತಂದಾ || ೯೦ ||

ಬರೆವರೆ ಮಂಡಳಿ ।
ಕರ ರಾಜ ಕುವರರ ।
ದೊರೆಗಳ ದಂಡಾಧಿಪರಾ ॥
ಭರತ ಕವೀಂದ್ರ ಮ ।
ಲ್ಲರ ಗಾಯಕರ ಪೊನ್ನ ।
ಕರುವಾಡಗಳ ನೋಡುತೆಯ್ದಾ ॥ ೯೧ ॥

ಬರಲಿತ್ತಲತ್ತ ಸಿಂ ।
ಗರದ ಗಾಡಿಯ ಜಾಣೆ ।
ನುರುತರ ವೈಸಿಕದೊಲುಮೆ ॥
ಸ್ಮರತಂತ್ರದೋಜೆ ಹ ।
ರಿರುಗನ್ನಗದುಕು ಭೋ ।
ಸರ ಉದಯಿಪ ತಾಣವೆಸೆಯೆ । ॥ ೯೨ ॥

ಆ ಪುಣ್ಯವೀಥಿಯೊಳ್ ।
ಮಾಪಜಕಾಯ್ದಿಕ್ಷು ।
ಚಾಪ ಕುಸುಮಾಸ್ತ್ರವನಾಂತು ॥
ಯೋಪೊತ್ತೆಸೆವ ನವ್ಯ ।
ರೂಪು ಯೌವನ ಸತ್ಕ ।
ಲಾಪ ವಿವರ ದೊರೆಗೆಡಿಸಿ ॥ ೯೩ ॥

ಪೊಂಗರುವಾಡದ ।
ಮುಂಗಡೆ ಪಳುಕಿಂದ ।
ಸಿಂಗರಿಸಿದ ಗೋಪುರಗಳೂ ॥

**ಕಂಗೆಡ್ಡವಾದ ರ |**
ನ್ನಂಗಳುಪ್ಪರಿಗೆ ಪಾ |
ರಾಂಗನಾ ಕೇರಿಯೊಳಿಹವೂ || ೯೪ ||

ಮೆರೆದರಾವಗ ಮಿಗ |
ವರಿಗಣ್ಣಾ ಬೆಳಗಿಡಿ |
ಕಿರಿದ ಮೊಲೆಯು ಬಿಂಬಾಧರದಾ ||
ಪರಮೆಗುರುಳ ಸೊಂಪು |
ಗರೆವ ನಿತಂಬದ |
ಸರಿ ಮಿಂಡಿಯರುಗಳೊಗ್ಗಿನಲಿ || ೯೫ ||

ಜಾಣ್ಪರಿ ಜಾಳುಗಾಡಿ |
ನಣ್ಪೋಜೆ ನಸೆಬದುರ್ |
ಬಿಣ್ಪುಳುಗಳು ಪೂಸರನಾ ||
ಗೆಣ್ಪೋನ್ನತಿಯ ಪೇವೋರ್ಲೆ |
ಮೆಣ್ಪೋರೆ ದರಹಾಸ |
ಗಾಣ್ಪೇ ಜವ್ವನೆಯರೆಸೆದರೂ || ೯೬ ||

ಹರನ ತಾಮಸವ ಶ್ರೀ |
ಹರಿಯು ಸಾತ್ವಿಕವ ಪಂ |
ಕರುಹಸಂಭವನ ರಾಜಸವ |
ತರಳಾಕ್ಷದೊಳು ತಾಳ್ದ |
[1]ವ[1]ರ ಬಗೆಯುನು ಸದ್ವಿ |
ಟರಿಗೆ ಮಾಡುವಳೋರ್ವ ವನಿತೆ || ೯೭ ||

---

1_ನಿಬ (ಗ.)

ಸಿರಿಖಂಡದೊಲು ಮಧು |
ಕರನಂತೆ ನವ ಮಂದ |
ಮರುತನೊಲ್ಬಾಲಕರಂತೆ ||
ಶರಧಿಯೊಲ್ಕಂಚಗಾ |
ರರವೊಲು ಬೆಲೆವೆಣ್ಗ |
ಳುರವಣಿಸಿದರೊತ್ತಿಗೆಂದೂ || ೯೮ ||

ಮೊಗ ನಡು ಮೊಲೆಗೆಟ್ಟೊ |
ರಗೆ ಮುಗ್ಧರೊಳು ನೋಟಜಾ |
ಣ್ಮೆಗೆ ಮಾರುವೊಗಲ್ದುರ್ವಿಟರಾ ||
ಬಗೆಯ ದಿಟ್ಟೆಪರ ಕಾ |
ಮಗೆ ಸೂಚಿವುದು ಕಿನಿ |
ಸೋಗೆಯುದ ನವರಸಾಂಗಿಯರೂ || ೯೯ ||

ನಸುನೋಟದಿಂ ವಿಟ |
ರಸುವನಂಗಜನ ಕೂ |
ರಸಿಗಿತ್ತು ಮಾನಧನವನೂ ||
ವಶಮಾಡಿಕೊಂಡು ಮೇ |
ಲ್ಜಸವಡದಿಹರ ನಿ |
ಟ್ಟಿಸು ನೃಪಯೆನೆ ಸಖನೋರ್ವ || ೧೦೦ ||

ಕಾಣುತ ಮಹಾದೇವ |
ರಾಣಿ ಬರಲು ಮುಂ |
ದೇಣಾಕ್ಷಿಯೋರ್ವಳಂಗಜನಾ ||

ಬಾಣ ತಟ್ಟುಗಿದತಿ ।
ನಾಣುಗೆಟ್ಟರೆ ಬಂದು ।
ಪ್ರಾಣೇಶನಪ್ಪಿ ಚುಂಬಿಸಿದಾ ॥ ೧೦೧ ॥

ತಿಲ ತಂಡುಲಿತ ಪಾಲ ।
ಜಲವಲ್ಲಿ ವೇಷ್ಟಾದಿ ।
ಲಲಿತಾಲಿಂಗನ ಭ್ರಾಂತಾಂತ್ವರಿತ ॥
ಚಲ ಜಿಹ್ವೆ ಪಾನವೆಂ ।
ಬಲಘು ಚುಂಬನವುಲ ।
ದೊಲೆವ ಹುಡುಕುವ ತುಡುಕುವಾ ॥ ೧೦೨ ॥

ವೊಲೆ ಬ[1]ದಿ[1]ತೀಗ ಬೆನ್ನು ।
ತಲೆಯೊಳುದಿಸಿ ತೋರ್ಪ ।
ಸಲೆನಾಡಿ ಮೂಲವ ತಿಳಿದೂ ॥
ಗೆಲವಿತ್ತು ಸುಸಿಲಿಂಪು ।
ಕಲಿಸಿ ಕಾಣಿಪರ ಪೂ ।
ವಿಲುಗಾರನಾಗಮಾರ್ಧವನೂ ॥ ೧೦೩ ॥

ಪಂಚ ವಿರತಿಗಳ ।
ಸಂಚ ಶಕುನಿ ಮಂಚ ।
ದಿಂಚರಸ್ತನಿೀತ ಸೀತ್ಕಾರ ॥
ಮುಂಚುವ ಪೂಬಾಣ ।
ದಾಂಚಿತ ಸಪರಿಯು ।
ಕರ್ಣಂಚೆಯೊಗೆದ ಸುಸಿಲೇಳ್ಗೆ ॥ ೧೦೪ ॥

---

1_ರಿ (ಉ.), ಡ (ಕ.)

ಸರಸಿಜಾಸನಲಂಬ |
ಕರಿಲೀಲೆ ಝಾನು ಕೂ |
ರ್ಪರ ಪಾಣಿ ಜಘನ ಕರ್ಕಟಿಕಾ ||
ಪರಿವರ್ತನಲಘು ಬಂ |
ಧುರಿತ ಸಂಪಾದನಾ |
ಗರವತಿಶಯನವಿಶಾಖಾ || ೧೦೫ ||

ಕರಣದಿಂ ಬೆರಸಿ ಭೋ |
ಸರಸಿ ದ್ವೈನ್ಯದಿ ನಾಮೋ |
ಚ್ಚರಣೆಗೆಯ್ವುತ ನೇಮಗಳಿಗೆ ||
ಕರವಿಡೆ ಕೇಲ್ಕ್ಮಾಗಿ |
ವರೆಗಣ್ಚುಂಮಿರಿದು ತಂ |
ಪೊರೆದೊಗುವರಲಂಬ ಜಲವು || ೧೦೬ ||

ನಿಡುಸುಯಿ ಬೆಮರ್ಪುದಿ |
ದೊಡಲು ರೋಮಾಳಿ ಬಿ |
ಣ್ಪಿಡುಗಿದುರೋಜ ಕಂಪಿಸುವಾ ||
ತೊಡೆಗಳ ಕೆದರ್ದಪೆ |
ರ್ಮುಡಿಯುರೆದಿಲಕದ |
ಮಡದಿ ಸುಶಿಲ ಕಡೆಯಲ್ಲಿ || ೧೦೭ ||

ಇಂತಿರೆ ಮತ್ತೋರ್ವ |
ಕಾಂತೆ ಚಿಂತಾ ಚಿತ್ರ |
ದಂತಿರಲಿನಯನ್ನೈತಂದೂ ||

ಕಂತು ಮುದ್ರೆಗಳ ಕಂ |
ಡಂತಂತೆ ಕಣ್ಮುಗಿ |
ವಂತಸ್ತಗಂಡಡಿಗೆರಗಿ || ೧೦೮ ||

ಕಾಲ್ದಿಗದೆನಗೆಲೊ |
[1]ಮೇ[1]ಲ್ದೋರಿದಾ ಪೋ ಪೋ |
ಗೊಲ್ದಲ್ಲಿಗೆಂದು ಬೈ ಬೈದೂ ||
ಪಲ್ಬಿಂದು ಕಾಯಿದೊದೆ |
ಯುಲ್ದರಹಾಸ್ಯದಿಂ |
ನಲ್ದಪ್ಪಿಕೊಂಬ ವಿದೂಷಕನೂ || ೧೦೯ ||

ದಿಟ ಶುದ್ಧನಂತೇ ನು |
ಣ್ಣಟಕಿ ಗಂಮುದೆಯೊಮ್ಮೆ |
ತುಟ ಮಿಡುಕದಿರಲದನರಿದೂ ||
ಪಟುತರ ಕಾ[2]ಯ್ಪಿ[2]ನು |
ಬ್ಬಟಗಂಡು ಕಣ್ಮುಚ್ಚಿ |
ವಿಟ ನುಡಿಸಿದ ತನ್ನಿನಿಯಳಾ || ೧೧೦ ||

ಬಳಿಕಲೊಂದೆಡೆಯೊಳೋ |
ರ್ವಳಿಗಿಂಪ ನುಡಿಯಲ್ಕಂ |
ಗಳ ಮುಗಿಯಲಿಕೆ ಮತ್ತೋರ್ವ ||
ನಳಿನ ವದನೆಗೆ ಕ |
ಜ್ಜಳವನೆಚ್ಚುತಲೋ |
ರ್ವಳ ಚುಂಬಿಸಿದನು ದಕ್ಷಣನು || ೧೧೧ ||

---

1-ವೋ (ಗ) 2 ಯ್ಪ (ಉ, ಎ, ಕ, ಚ.)

ಬಾಲಕಿ ನಿನ್ನೋಳ್ಸ |
ಲ್ಲೀಲೆಯಲ್ಲದೆ ಮರ |
ದಾಲಿಸೆ ನೋಡೆ ಮತ್ತೋರ್ವ ||
ಬಾಲೆ ಕೇಳೆನಗಿದು |
ಶೀಲವೆಂದೆಂಬನು |
ಕೂಲನಾಯಕನ ಸಿಟ್ಟಿಸುತಾ || ೧೧೨ ||

ತರುಣಿ ನಲ್ಲನನಗ |
ಲ್ದಿರೆ ಕರ್ಬುವಿಲ್ಲನ |
ತಿರುವಿನೊಳ್ತೊಡಚಿ ಮಾಕಂದ ತಾ ||
[1]ಶಿ[1]ರದಿನೇಸಲು ಕಾವ |
ಪೊರಳ್ದಳವಳಿಗತಿ |
ವಿರಹವೆಂಕೆಗೆ ತನುಗೊಟ್ಟೊ || ೧೧೩ ||

ವಿರಹದುರಿಗೆ ಪಾಸಿ |
ದರಳ್ಗಳಿಲ್ಲವು ಕರಿ |
ಮುರಿಯೋಪವೊರೆದ ಚಂದನವೂ ||
ಕರಿಕೇಳ್ಗು [2]ವಿಜನ[2]ದೆ |
ಲರಿಂದ ಪನಿನೀರ್ಗ |
ಳಿರಿದೆ[3]ಚುಯಿಚ್ಚು[3]ಯೆಂದಿಂಗುವವೂ || ೧೧೪ ||

ಸ್ಮರನಾಣತಿಯೊಳು ಚಂ |
ದಿರನಿವಳಳಿಕಾ |
ಕ್ಷರವನಳಿವುದಕೆ ಬಂದಾ ||

---

1-ಸ (ಅ, ಇ, ಉ, ಕ, ಜ.); ಶ (ಗ.) 2-ಬಿಜ್ಜಣೆ (ಅ, ಜ.) 3-ಚಚ್ಚು (ಇ, ಒ, ಗ.)

ಪರಿಯೆನಿಪಂತತಿ |
ವಿರಹ ವೇದನೆಗಿಟ್ಟ |
ಸಿರಿಕಂಡ ತಿಲಕವೊಪ್ಪಿದುದೂ || ೧೧೫ ||

ಕ[1]ಣ್ಣು ಗಿ[1]ಕ್ಕೊಡನೆ ಕ |
ವ್ಮಣ್ಣೆಯುನಳಕದಿಂ |
ನುಣ್ಣಿಸು ಲಲಿತ ಕಜ್ಜಳವಾ ||
ಬಣ್ಣಿಸಿ ಸವಿದಿನಿ |
ವಣ್ಣ ನೋಡೆನ್ನಾಣೆ |
ಹೆಣ್ಣೆಯೆಂದಳು ವಿರಹದಲಿ || ೧೧೬ ||

ನಸು ಮುನಿಸಿಂದೋರ್ವ |
ಶಶಿಮುಖಿಯಿರೆ ತಳಿರ್ |
ವಸುಕುಂಭವಲ್ಲಿ ಹೊಂಬಾಳೆ ||
ಬಿಸಜಂಗಳ್ಳೈದೆ ಕಂ |
ಪಿಸುವವು ಕನ್ನೈದಿ |
ಲೆಸಳಂಬುದುಂಬಿ ರಾಜಿಪವು || ೧೧೭ ||

ಬಗ[2]ಸಿ[2]ಗಣ್ಬಡನಡು |
ಮೃಗ ಶಾಬಾಯತ ನೇತ್ರೆ |
ಮಿಗೆ ಕೋರ್ವಿದುತ್ತುಂಗು ರೋಜಾ ||
ನಿಗ[3]ರ[3] ಕತ್ತುರಿಬೊಟ್ಟು |
ತಿಗುರಿಟ್ಟ ಸಿರಿಗಂಪು |
ಸೊಗಸೀವ ಬೆಲೆವೆಣ್ಗಳಿಸೆಯೆ || ೧೧೮ ||

---

1_ಣ್ಣಿನಿ (ಅ, ಉ, ಕ, ಗ, ಚ, ಟ.) 2_ಸೆ (ಕ.) 3_ರಿ (ಗ, ಒ.)

ಧನದಕುವರಸಿಂದ್ರ ।
ತನಯನ ಶ್ರೀ ಹರಿ ।
ಯನು ಪಂಚಶರನ ಸೌಭಾಗ್ಯ ॥
ಘನ ಭೋಗ ಪ್ರೌಢಿ ರೂ ।
ಪಿನಲಿ ಪಳಿವ ಭುಜಂ ।
ಗನಿಕಾಯ ಕವಿದು ಕಾತರಿಸಿ ॥ ೧೧೯ ॥

ಲಲಿತ ಲತಾಂಗಿಯು ।
ತ್ಪಲ ನೇತ್ರೆ ಹರಿಮಧ್ಯೆ ।
ಯೆಲರುಣಿವೇಣಿ ಪೇಳ್ವ ನಗೆ ॥
ಬೆಲೆಯೇನೆಂದೆನಲು ಸಂ ।
ಕುಲ ಬಿಸಿಲ್ಗಜ ಕೇಕಿ ।
ಕುಲವೆನೆ ನಾಂಚಿದರ್ಚಿತ್ರಾ ॥ ೧೨೦ ॥

ಪಿಡಿಯನೊಪ್ಪಿಡಿಯ ಕೈ ।
ಪಿಡಿಯನರಸುಗಿರ ।
ನುಡಿಯ ಮನ್ಮಥನ ಮುಂಗುಡಿಯಾ ॥
ಪಡಿ[1]ಯಲ್ಲೆ[1]ನಿಪ ನಡೆ ।
ನಡು ಮೊಗ ನುಡಿ ದಿಟ್ಟಿ ।
ಗಡೆಯ ಕಾಮಿನಿಯರೊಪ್ಪಿದರೂ ॥ ೧೨೧ ॥

ಬೇರೆ ಸಿಂಗರವೆಣ್ಣಿ ।
ರಾರು ಮೂರಾರು ನಾ ।
ಲ್ಕಾರೈದಾರು ಆರಾರು ॥

---

1. ಯಂದೆ (ಅ, ಇ.)

ವಿಾರಿದೇಳಾರು ಎಂ |
ಟಾರರಿಂದತ್ತತ್ತ |
ತೋರಿ ತೊತ್ತಿಗೆ ಬೀದಿಗಳಲ್ಲಿ || ೧೨೨ ||

ಆರೆ ಅರೆದೋರುವ |
ಖರಗಾನ ಪೊಡೆಯೊಡ |
ನಿರುತಿಪುರ್ರೋಜಾನೆ ಮಧ್ಯ ||
ಶರನಿಧಿ ಮೊಗದ ಕ |
ಪುರ್ರ ವೇಣಿ ಪಿಡಿದು ಮುಂ |
ಬರೆಯುದ ವಿಟರ ಕಾಡುವಳೂ *|| ೧೨೩ ||

ಧರೆಯಂತೆ ಪೂರ್ಣ ಚಂ |
ದಿ್ರನಂತೆ ಲಂಕಾ |
ಪುರದಂತೆ ಹರನ ಭಾಳಾಕ್ಷ ||
ದುರಿಯಂತೆ ಗಂಧ ಸಿಂ |
ಧುರದೊಳು ಮದದಂತಿ |
ಹರು ಕೆಲ ಬೆಲೆವೆಣ್ಣಗಳಲ್ಲಿ || ೧೨೪ ||

ಅಲ್ಲಿಂದ ಮುಂದೆ ಭೂ |
ವಲ್ಲಭ ಬರೆ ಕರ |
ಪಲ್ಲವಗಳ ತಾಳಜತಿಗೆ ||
ನಿಲ್ಲದಾಡುವ ಪೆಣ್ಣ |
ಳೆಲ್ಲರಾನಂದ ಗಂ |
ಡಲ್ಲಿ ಜನಿಸೆ ಮಂದಹಾಸ || ೧೨೫ ||

---

*—ಈ ಪದ್ಯ (ಇ.) ಪ್ರತಿಯಲ್ಲಿಲ್ಲ.

ಅಕ್ಕಜವಿಡಿದಾಡು |
ವಿಕ್ಕಟಿ ಪೊಗರಿಂದ ||
ಕಕ್ಕದಿಸುವ ಪೇರ್ವೊಲೆಗಳೂ ||
ಸೊಕ್ಕು ಕಣ್ಬಿಡು ಮುಡಿ |
ಉಕ್ಕುವಾನಂದದ |
ಪೆಕ್ಕಣ ಪೆಣ್ಗಳೊಂದೆಸೆಯಾ || ೧೨೬ ||

ವಾಗ್ಜ್ಯೋತಿ ಬಳಿಕ ವಿ |
ದಗ್ಧವಾಕ್ಕಿಂದ ಸ |
ವ್ಯಾಗ್ಹ್ರರಹಾಸಗೆದರುತಾ ||
ಮುಗ್ಧೆ ಸತ್ಪ್ರೌಢಿಯೊ |
ಳ್ವಾಗ್ದೇವಿ ಗಾಡಿಯೊ |
ಳ್ದಗ್ಧಾಂಬುಸುತೆ ಸರಿಯಲ್ಲಾ || ೧೨೭ ||

ಧನವುಳ್ಳ ಸೊಬಗುಳ್ಳ |
ವಿನಯವುಳ್ಳಧಿಕ ಯೌ |
ವನವುಳ್ಳ ಜಾಣ್ಮರಿಯುಳ್ಳ ||
ಬಿನದದಿಂಪೆಸೆವ ಮೋ |
ಹನಮುಳ್ಳ ಭೋಗಿಯೊ |
ಳ್ವನಿತೆ ಬೆಚ್ಚಂತಿರುತಿಹುದೂ || ೧೨೮ ||

ರತಿರಾಜ ತಂತ್ರದು |
ನ್ನತಿಯನರಿವ ಕಲಾ |
ವತಿಯು ನೂತನ ರೂಪಾವತಿಯಾ ||

ಸತತಿಚ್ಛೆಗಾರ್ತಿಯೊ |
ಳ್ನುತಿಸಿ ಲಾಲಿಸುತ[1]ಸೀ[1] |
ತ್ಕೃತದಿ ಕೂಡುವ ದೇವನಲ್ತೆ || ೧೨೯ ||

ಎಂದೆಂಬ ನುಡಿಗೇ[2]ಳು[2] |
ತಂ ಧರಾಧಿಪ ಬರ |
ಲೊಂದೆಡೆ [3]ಕ[3]ನಕ ರಚಿತ ||
ಅಂದಳವೇರಿ ಪೂ |
ರ್ಣೇಂದುವದನೆಯಿರೆ |
ಕಂದರ್ಪ ಕನಲಿ ನೋಟಕರಾ || ೧೩೦ ||

[4]ಮಸೆ[4]ಗಾಣಿಸಲು ಪೊಸ |
ಕುಸುಮಾಸ್ತ್ರದಿಂದಲಿ |
ದ್ದೆಸೆಯಲ್ಲಿ ನಿಡಿಯಲರ್ಗಣ್ಣಾ ||
ವಿಶಿಖದಿಂದೆಸಬಿದ್ದ |
ರಸುವ ತುಳಿವೊಲು ಸಂ |
ತಸದೊಳುಯ್ಯಲನೋರ್ವವನಿತೆ || ೧೩೧ ||

ರಾಜನೆಯ್ತರಲೆನ್ನ |
ತೇಜವೇನಿಂದೊಡೀ |
ರಾಜಿಪಂಬುಧಿಯೊಳ್ ಮೈಗರೆದಾ ||
ರಾಜೀವಾಪ್ತೆಗೆ ದ್ವಿಜ |
ರಾಜಗೆ ಸಂಧಿಗೆಯಿ |
ಪಾಜವ ಸಂಧ್ಯಾಂಗನೆಯೊ[5]ಳು[5] || ೧೩೨ ||

---

1-ಚಿ (ಉ.)  2-ಳ್ದು (ಇ, ಉ.)  3-ಕಾ (ಉ, ಎ, ಕ, ಚ, ಜ, ಟ.)
4-ವಶ (ಇ.)  5 ಲು (ಉ, ಜ.)

ಆಡುತಿರಲು ಭೂಪ |
ನೋಡಿ ಮುಂಬರಿ ವರಿ |
ನಾಡೆ ಸ್ವೈಪಿನ ತಾಣವೆನಿಸಿ ||
ಕೂಡೆ ಶೈವಾಗಮ |
ದಾಡಂಬರದೊಳಿರ್ದ |
ರೂಢಿಗಪ್ರತಿಮ ದೇಶಿಕನೂ || ೧೩೩ ||

ಸಕ ಲನಿಷ್ಕಲ ಭೇದ |
ದ ಕುಟಿಲಾತ್ಮನನರಿ |
ಪ್ರಕಟ ಲಿಂಗವ ಪೂಜೆಮಾಡು ||
ಸುಕರವೆನಿಪ ಮಂತ್ರಾ |
ಧಿಕ ಭಸ್ಮ ರುದ್ರಾಕ್ಷೆ |
ನಿಖಿಲಾಚಾರದ ಬಗೆವೇಳ್ದ || ೧೩೪ ||

ತನುವಳಿಯಲೊಂದು |
ಶುನಿ ಬೂದಿ ಸಹಿತ ಭೋಂ |
ಕನೆ ಮೆಟ್ಟಲಾ ಫಲದಿಂದಾ ||
ಮನುಜರೊಳಧಿಕನೆಂ |
ದೆನಿಪ ಖಗೇಂದ್ರನಾ |
ಥನು ಭೂತಿ ಮಹಿಮೆಯಾರಳವೆ || ೧೩೫ ||

ವನದೊಳ್ವನೇ ಚರ |
ಶುನಿಗೆ ತಾರೆಯಮಣಿ |
ಎನುತ ರುದ್ರಾಕ್ಷಿಗಟ್ಟಿರಲೂ ||

ತನುವಳಿಯಲು ಕೃತಾಂ ।
ತನಿಗರುಪಲು ಚಮೂ ।
ಪನುಮಾದ ಪೊಗಳಲಾರಳವೆ ॥ ೧೩೬ ॥

ಶರಣ ಸಾನಂದ ಶ್ರೀ ।
ಗುರುಸಿದ್ಧ ರಾಮರೀ ।
ರ್ವರು ನಮಃಶ್ಶಿವಾಯ ನಮಯೆಂದು ॥
ಚ್ಚರಿಪ ಮಂತ್ರವ ಕೇಳ್ದ ।
ನರಕಿಗಳ್ಸಾಲೋಕ್ಯ ।
ದರಸಾದರಿದು ತಥ್ಯವಿನ್ನೂ ॥ ೧೩೭ ॥

ಹರಗಣ ಹರಗಣ ।
ಹರಗಣವೆನುತವೆ ।
ಹರಣವ ಬಿಟ್ಟ ಶೂದ್ರನಿಗೆ ॥
ಹರಗಣಪದವಿತ್ತ ।
ಹರ ಸ್ವೇತ ಮಾರ್ಕಂಡೇ ।
ಯರಿಗಿತ್ತ ಹರಪೂಜೆ ಇರವಾ ॥ ೧೩೮ ॥

ಸಕಲ ಶಾಸ್ತ್ರಂಗಳ ।
ಮುಖದಿಂದ ಶಿಷ್ಯರ್ಗೆ ।
ಪ್ರಕಟವಾಗರುಪುತವರಿಗೆ ॥
ಮುಕುತಿ ರಾಜ್ಯವನೀವ ।
ನಕಳಂಕನಚಲ ಚಿ ।
ತ್ಸುಖಪೂರ ಪಾರ ಗಂಭೀರಾ ॥ ೧೩೯ ॥

ಗುರುವಾಕ್ಯಗೇಳ್ದು ಶಂ ।
ಕರ ಶರ್ವ ಭವ ಭೀಮ ।
ಹರ ಹರೆನುತ ಬಂದು ತನ್ನ ॥
ಅರಮನೆ ಹೊಗುತಲೆ ।
ಲ್ಲರ ಬೀಳ್ಕೊಟ್ಟು ಮೋ ।
ಲ್ಪರಮನಾರಾಧನೆಗೆಯ್ದು ॥ ೧೪೦ ॥

ಸುಖನಿದ್ರೆಗೆಯ್ವನಿ ।
ತಕೆಯರುಣೋದಯ ।
ಪ್ರಕಟವಾಗಿರಲಾಗ ಬೇಗಾ ॥
ಚಕಿತ ಲೋಚನದ ಗಾ ।
ಯಕಿಯರ್ಪಾಡಿದರು ವ ।
ಲ್ಲಕಿವಿಡಿದೊಡ[1]ನು[1]ಪ್ಪವಡಕೆ ॥ ೧೪೧ ॥

ಪಾಳಿಯಿಂದೆಸೆವ ಭೂ ।
ಪಾಳಿ ಗಾಂಧಾರಿಯಾಂ ।
ದೋಳಿ ಸಂಪೀರ ರೇಗುಪ್ತಿ ॥
ಗೌಳ ಸಾ[2]ವೇರಿ[2] ಬಂ ।
ಗಾಳ ವೇಳಾವಳಿ ।
ಸಾಳಂಗ ಮಲಹರಿ ಲಲಿತೆ ॥ ೧೪೨ ॥

ಎಂಟು ಪುರುಷರು ಮೂ ।
ರೆಂಟು ಸ್ತ್ರೀಯರು ಸಹ ।
ಮೀಂಟಾದರಾಗ ನಾಲ್ಕೆಂಟು ॥

---

1_ಮ (ಗ.) 2_ಳಗ (ಇ.)

ಗೆಂಟೆಲ್ಲದಿಹ ವೆಂ |
ಟೆಂಟೆ ಮಿಶ್ರಿತರಾಗ |
ವಂಟೆ ಪಾಡಿದರುಪ್ಪವಡಕೆ || ೧೪೩ ||

ಶಿವನ ಲೀಲಾ ಕಥ |
ನವ ಪುರಾತನರ ಗೀ |
ತವನುಚ್ಚರಿಸೆ ಕೇಳ್ದು ನೃಪನು ||
ಭವ ಭರ್ಗ ಗಿರಿಜಾ |
ಧವ ಹರ ಹರ ನಮಃ |
ಶಿವಾ [1]ನಮಃ ಶಿವಾ[1]ಯೆನು[2]ತೆದ್ದು[2] || ೧೪೪ ||

ಲಿಂಗವ ಮಣಿಗಣ |
ರಂಗಿತ ದರುಶನ |
ಮುಂಗಪಿಲಾಜ್ಯ ಭಾಂಡವನೂ ||
ಮುಂಗಾಣುತಿರೆ ಬಂದ |
ರಂಗಿಪ ಕಿರಣ ತ |
ರಂಗಿಸಲಿನ ಮೂಡಗಿರಿಗೆ || ೧೪೫ ||

ಕುಮುದ ಚಕೋರಾಬ್ಧಿ |
ಹಿಮಗಲ್ಗಳತ್ಯಂತ |
ಕುಮುದವಾಂತಿಹವು ರಥಾಂಗ ||
ಕಮಲಂಗಳುರುತರ |
ಕಮಲವಾಗಿಹ ಸೂ |
ರ್ಯಮನುದಯಾದ್ರಿಗೆ ಬರಲೂ || ೧೪೬ ||

---

1–ಶಿವ ಶಿವ (ಗ, ಚ.) 2–ತ ಕೈಮುಗಿದು (ಜ)

**ಆ ವೇಳೆಯೊಳು ಮಹಾ |**
ದೇವರಾಣಿ ನೃಪಾಲ |
ಭಾವಜಾರಿಯ ಪೂಜೆಯಮಾಡಿ ||
ಪಾವನಾತ್ಮಕರ ಲಿಂ |
ಗಾವಧಾನದ ಶರ |
ಣಾವಳಿಗಳ ಕರೆಯೆನಲೂ || ೧೪೭ ||

ಪರಿಚಾರಕರು ಪರಿ |
ಪರಿದು ಜಂಗಮುವನಾ |
ಪುರದ ನಾಲ್ದೆಸೆಯೊಳೆಲ್ಲರಸಿ ||
ತಿರುಗಿ ಬಂದೊಡನೆ ಭೂ |
ವರಗೆ ಬಿನ್ನಹವಮಾಡಿ |
ದರು ಓರ್ವರಿಲ್ಲವೆಂಬುದನೂ || ೧೪೮ ||

ಕೇಳುತ್ತೆಲ್ಲಿಗೆ ಪೋದ |
ಭಾಳಾಕ್ಷನಿಭಜಂಗ |
ಮಾಳಿಯೆಂದೆನಲು ಕೈಮುಗಿದೂ ||
ಪೇಳಿದರತಿ ವಿನೆ |
ಯಾಳಾಪದಿಂ ಭಕ್ತಿ |
ಯೇಳಿಗೆಯೊಂ[1]ದಚ್ಚ[1]ರಿಯಾ || ೧೪೯ ||

ಬಿನ್ನಪ ಬಕುತಿ ಸಂ |
ಪನ್ನ ಬಸವನೆಂಬ |
ನುನ್ನತ ಕಲ್ಯಾಣಪುರದೊಳೂ ||

---

1-ದಾಶ್ಚ (ಅ, ಕ, ಗ, ಟ.)

ರನ್ನವನಿತೆ ಭೂಮಿ |
ಪೊನ್ನು ವಸನವನ್ನು |
ವನ್ನೀವನಮಲ ಜಂಗಮಕೆ || ೧೫೦ ||

ಶರಣರಾವುದ ಬೇಡೆ |
ಪಿರಿದೀವ ಬಿರುದಿನು |
ಪ್ಪರ ಗುಡಿಗಟ್ಟಿ ಕಲ್ಯಾಣ ||
ಪುರದೊಳೈದನೆ ಬಸ |
ವರಸನೆಂಬವನಲ್ಲಿ |
ಗಿರದೆ ಪೋದುದು ಜಂಗಮಾಳಿ || ೧೫೧ ||

ಎನಲಾತಗೀಸೊಂದು |
ಧನವೆಲ್ಲಿ ಬಪ್ಪುದೆಂ |
ದೆನೆ ದೇವರಸಸಿದ್ಧಿಯುಂಟು ||
ಎನಿತೆನಿತರ್ಥವ |
ನೆನೆಯೆ ದೊರಕುತಿಹು |
ದನವರತದರಿಂ[1]ದಲಾರು[1] || ೧೫೨ ||

ಬೇಡದ ಮುನ್ನೀವ |
ರೂಢಿ ಸೂಚಿತ ಭೋಜ |
ತೊಡಲ ಚರಪಟ್ಟೆಯೆಂಬ ||
ಗಾಡಿವಡೆದ ಸಿದ್ಧ |
ನೊಡಲದ ಮನದ |
ನಾಡಲೇನದು ವಿಪರೀತಾ || ೧೫೩ ||

---

1-ದಾರಾರು (ಅ, ಉ, ಎ, ಕ, ಚ, ಜ, ಟ.)

ಅತಿ ಚಿತ್ರವಿದು ಷದ್ಮ |
ವತಿಯುರುರಸವಾದ |
ತತಿಶಯ ವಜ್ರಪಂಜರನಾ ||
ಮತಿಗೆ ಮಾರಣಸಿದ್ಧ |
ಷತಿಯಕ್ಷನುಗು[1]ಳ್ದ[1]ಪೊಂ |
ಗತಿ ವಿಪರೀತವತೀತ || ೧೫೪ ||

ತನುವೆಲ್ಲ ಮಿಾಟಾದ |
ಕನಕವರ್ಣಮದಾಗೆ |
ಮನ ನೆನೆದನಿತು ಪೊಂಜರಿಯಾ ||
ನೆನೆದಾಗಲುಗುಳ್ವನಾ |
ವನಿಗತಿ ಚೋದ್ಯವೆಂ |
ಬಿವ ಸಿದ್ಧವರ ಸಾಮುಗಾನಾ || ೧೫೫ ||

ಪರುಷವೇದಿಯ ಬಲ್ಲ |
ಪಿರಿಯಸಿದ್ಧರಿಗತಿ |
ಪಿರಿಯನೆನಿಸುವ ಖರ್ಪರನೂ ||
ಸರಿಯಲ್ಲ ಜ್ವಾಲಿಕಾ |
ವರನಿತ್ಯ ನಾಥರ |
ಪರಿಯಲ್ಲವಿಂತಿದಾಶ್ಚರ್ಯ || ೧೫೬ ||

ಸಿದ್ಧರೊಳತಿಧನ |
ವೃದ್ಧನೆನಿಪ ಬಲ |
ಭದ್ರನ ಬಗೆಯದಲ್ಲಲ್ಲಾ ||

1-ಳ್ಕ (ಇ, ಉ, ಎ, ಜ.)

ಉದ್ಧತವಮತಿ ಷಲ |
ವಿದ್ಯಾ ಸಾಗರನಾದ |
ಕೃದ್ಧಭಂಗಾಳಿಯಂತಲಪ್ಲಿ || ೧೫೭ ||

ವರರತ್ನಘೋಷನ |
ಪರಿಯಲ್ಲ ದಿವ್ಯ ಸಾ |
ಗರನಾದ ವ್ಯಾಳಿಯಂತಲ್ಲಾ ||
ಪರಮ[1]ಚಾ[1]ಂಧಸನಾದ |
ನುರುತರ ಘೋರಾಂಟ |
ನಿರವಲ್ಲವಿದು ಕರಚಿತ್ರಾ || ೧೫೮ ||

ಸಿರಿಗಿರಿಯನು ಸುರ |
ಗಿರಿಯಂತೆ ಮಾಳ್ಪೆನೆಂ |
ಬುರು ಸಿದ್ಧ ನಾಗಾರ್ಜುನನೂ ||
[2]ಸ[2]ರಿಯಲ್ಲ ಸಿಂಧು ಶಿ |
ಖರಿಯನು ಬೆಳ್ಳಿಯ |
ಗಿರಿಯನಾಗಿಪೆನೆಂಬ ಸಿದ್ಧಾ || ೧೫೯ ||

ಅಂತಲ್ಲ ಕೇಳು ಭೂ |
ಕಾಂತ ಜಂಗಮ ಭಕ್ತ |
ತಿಂಥಿಣಿ ತಮ್ಮ ತಮ್ಮ ಮನದಿ ||
ಚಿಂತಿಸಿದುದನೀವ |
ಚಿಂತಾಮಣಿಯೆನಿಪ |
ಸಂತಸ ಮಿಗೆ ಬಸವೇಶಾ || ೧೬೦ ||

---

1-ಚ (ಅ, ಒ.) 2-ಸಿ (ಇ, ಉ.)

ಏನೇನ ಬೇಡಲ ।
ತ್ಯಾನಂದದಿಂದನು ।
ಮಾನಿಸದೀವ ಜಂಗಮಕೆ ॥
ಭೂನಾಥ ಕೇಳೆಂದು ।
ಸಾನುರಾಗದೊಳೋರ್ವ ।
ಮಾನಸನತಿ ಕುಟಿಲದೊಳು ॥ ೧೬೧ ॥

ಎನೆಕೇಳ್ದು ನಸುಗೋಪ ।
ಜನಿಸುತೆನ್ನಯ ಭಕ್ತಿ ।
ಯನುಗೆಟ್ಟುದದರಿಂದವರನೂ ॥
ಘನವೇಗದಿಂತೀರ್ಚಿ ।
ದನಿಗೀವೆ ಬೇಡಿತ್ತ ।
ನೆನುತ ನೃಪತಿ [1]ಕೇ[1]ಳಲೊಡನೆ ॥ ೧೬೨ ॥

ಬೆಸನಾವುದೆನುತೀರ್ವ ।
ರಸಮ ಭಟರು ಕೇಳೆ ।
ವಸುದೀಶ ಮಹದೇವರಾಣಿ ॥
ಬೆಸನಿತ್ತು ಪೋಗಿ ಬಾ ।
ಬಸವನಸುವಿಗೆ ನಿ ।
ಮ್ಮಸುವೀವುದೆನುತ ಬೀಳ್ಕೊಡಲು ॥ ೧೬೩ ॥

ಬಂದವರತಿ ವೇಗ ।
ದಿಂದುರೆ ಬಸವನ ।
ಮಂದಿರದೊಳು ಪೋಗಲಂಜಿ ॥

---

1-ಪೇ (ಕ.)

ಬಂಧಿವಿಡಿವ ವೇಷ |
ವಂ ಧರಿಸಿದರೇನ |
ನೆಂದಪೆನವರ ಪುಣ್ಯವನೂ || ೧೬೪ ||

ಧರಿಸಿ ವಿಭೂತಿಯುಂ |
ಬರದ ಸೆರಗಿ ನೊ |
ಳ್ಕರಿಯ ವಾತರ್ಾಕದ ಫಲವನೂ ||
ಕೊರಳೊಳು ತಳೆದು ಬಂ |
ದಿರೆ ಕಾಣುತೆಮ್ಮ ಶ್ರೀ |
ಗುರು ಬಸವೇಶನಿಂತೆಂದ || ೧೬೫ ||

ಶಿವಪೂಜೆ ಮಾಳ್ಪುದೆಂ |
ದವರ್ಗೆ ಪೇಳಲು ಕೇಳು |
ತವೆ [1]ವ್ಯಥೆ[1]ವೆರಸಿ ನೋಳ್ಪಾಗಾ ||
ತವೆ ಬಾಣಲಿಂಗವಾ |
ದವು ವೃಂ[2]ತಾ[2] ಫಲಗಳಾ |
ಗವರಿರ್ದರತಿ ಬಕುತಿಯುಲಿ || ೧೬೬ ||

ಮೊಲೆಯುಲಗುಪ್ಪೆನು |
ಣ್ಮಳ[3]ಲು[3] ಪೇಬರ್ಳ್ಳ |
ಬೊಳು ಪಿಕ್ಕೆ ಬುದ್ದ ಪೇಗುರ್ಂ[4]ಡು[4] ||
ಗಳ ಶಿವನೆಂದುರೆ |
ತಿಳಿದು ಭಾವಿಸಿದೊಲ |
ಮುಳಲಿಂಗವಾದವವರಿಗೆ || ೧೬೭ ||

---

1-ವೇಥೆ (ಅ, ಇ, ಉ, ಗ, ಟ.) 2-ತ್ರ (ಕ) 3 ರ (ಇ.) 4 ಡುಗಳ (ಇ, ಉ,

ಅರೆಯುರೆ ನೋಟದೊಳ್ ।
ಸುರಿವಾಶ್ರು ಕಣ[1]ಉಬ್ಬಿ[1] ।
ಪುರಿಗೊಳ್ವ ಪುಳುಕ ಗದ್ಗದಿಪಾ ॥
ಸ್ವರ ಬೆಮರ್ಕಂಪಿಪ ।
ಕರದಿನಿರ್ವ[2]ರು[2] ಬಸ ।
ವರಸನಡಿಗೆ ಬೀಳಲೊಡನೆ ॥ ೧೬೮ ॥

ಪಿಡಿದೆತ್ತಿ ಕೃಪೆಯಿಂದ ।
ತೊಡದು ದುರ್ಲಿಖಿತವ ।
ನೊಡನೆ ಪೂತಾತ್ಮರ ಮಾಡಿ ॥
ನೃಡ ಶರಣ ನೇವೆ ।
ಗೊಡಲೀವುದೆನುತ ಬೀ ।
ಳ್ಕೊಡಲಿತ್ತಲತ್ತ ಮಾಂಡವ್ಯ ॥ ೧೬೯ ॥

ಪುರದಧಿನಾಥನೀ ।
ಪರಿಯುನೆಲ್ಲವ ಕೇಳ್ದು ।
ಹರ ಹರ ಶಿವ ಮಹಾದೇವ ॥
ಪರಮಪುರುಷ ಬಸ ।
ವರಸನಾತನ ಪಾದ ।
ಸರಸಿಜಗಂಡು ಬದುಕುವೆನೂ ॥ ೧೭೦ ॥

ಎನುತ ಪಟ್ಟವ ತನ್ನ ।
ತನಯು ಲಿಂಗಾರತಿ ।
ಯೆನಿಪಗೆ ಕಟ್ಟಿ ವಿರಕ್ತಿ ॥

---

1_ಉಬ್ಬೆ (ಕ.) 2_ರ (ಖ, ಗ.)

ಮನವಾಗಿ ಧನ ಧಾನ್ಯ |
ವನಿತೆ ವಾಹನ ಭೋಗ |
ವನು ಬಗೆಯದೆ ಪೋಗುತಿರಲೂ || ೧೭೧ ||

ಪತಿಹಿತೆಯಮಲ ಸ |
ನ್ಮತಿಯುತೆ ನಿತ್ಯ ಶಾ |
ಶ್ವತೆ ಶೈವಸೊಬ[1]ಗೆ ಸ[1]ದ್ಭಕ್ತಿ ||
ಯತಿಶಯ ಕೀರ್ತಿ ವಿ |
ಶೃತೆ ಗಂಗಾದೇವಿ ಮೋ |
[2]ಲ್ಸ[2]ತಿ ಕುಲರನ್ನೆ ಬೆಂಬಿಡದೆ || ೧೭೨ ||

ಬರೆ ಬೇಗ ಮಾಂಡವ್ಯ |
ಪುರದೀಶ ಕಲ್ಯಾಣ |
ಪುರಕೈದಿ ಬಂದು ಬಸವನ ||
ಶರಣಗೋಷ್ಠಿಯ ಪಂಚ |
ಪರುಷದುನ್ನತಿಗಾಣು |
ತಿರದಿಂತು ಮಾಳ್ಪೆ ನಾನೆನುತಾ || ೧೭೩ ||

ಮೈಯಿಕ್ಕಿ ಶರಣರ್ಗೆ |
ಕೈಯ್ಯಮುಗಿವುತ್ತೈನ |
ಗಯ್ಯ ಕಾಯಕವಿದೀಗೆಂದು ||
ಮುಯ್ಯಾಂತೆಸೆವ ಮೋಳಿ |
ಗಯ್ಯ ಜಂಗಮ ಸೇವೆ |
ರಯ್ಯವೆನಲು ಮಾಡುತಿರ್ದಾ || ೧೭೪ ||

---

1. ಗೀಶಭ (ಗ.)  2. ಲ್ಪ (ಎ.)

ತನು ಮನ ಬಳಲಿ ವಿ ।
ಪಿನಕ್ಕೈದಿ ಕಟ್ಟಿಗೆ ।
ಯನು ತಂದು ಭಕ್ತರ್ಗೆ ಕೊಟ್ಟು ॥
ಮನವೊಲಿ[1]ದೇನನಿ ।
ತ್ತನಿತ[1] ಕೈಕೊಂಡು ಬಂ ।
ದನಘ ಜಂಗಮಕೆ ಮಾಡುವನೂ ॥ ೧೭೫ ॥

ಪಾದೋದಕವನು ಪ್ರ ।
ಸಾದವನಾರತ ।
ಸ್ವಾದಿಸುತಿಹ ಲಿಂಗಭೋಗಿ ॥
ಆದರಿಸುತ ಭಕ್ತಿ ।
ವಾದವ ನೆರೆ ಸಂ ।
ಪಾದಿಸುತಿಹ ನಿಜ ಶರಣಾ ॥ ೧೭೬ ॥

ನಿಷ್ಠೆ ಬಲಿದು ಕೆಚ್ಚು ।
ಗಟ್ಟಿ ಭಕ್ತರು ಬರ ।
ಲಿಷ್ಟವೇನೇನೆಂದುರೆ ಕೇಳ್ದು ॥
ಸಾಷ್ಟಾಂಗವೆರಗಿ ಸಂ ।
ತುಷ್ಟಿಬಡಿಸುವಘ ।
ರಟ್ಟೆ ಮೋಳಿಗೆಯ ಮಾರಯ್ಯಾ ॥ ೧೭೭ ॥

ಒಂದುದಿವಸ ಕಾಷ್ಠ ।
ಕೆಂದಾರಣ್ಯಕ್ಕೆ ಪೋ ।
ದಂದವರಿದು ಬಸವೇಶಾ ॥

1_ದಿತ್ತ ಹಾ । ಗವ (ಎ.) ; ದವರಿತ್ತ । ಧನ (ಗ, ಜ.)

ಬಂದು ಗಂಗಾಂಬೆಗೆ |
ವಂದಿಸಿ ಹರಪೂಜೆ |
ಯಂ ದಿಟವಮಾಡಿ ಪೋಪಾಗಾ || ೧೭೮ ||

ಮಿನುಪ ಜಾಳಿಗೆಯು ಮ |
ಜ್ಜನ ಪಾತ್ರೆಯೊಳಗಿಟ್ಟೊ |
ಯ್ಯನೆ ಪೋಗೆ ಬಸವ ಮಾರಯ್ಯಾ ||
ಮನೆಗೆ ಬಂದೀಶ್ವರಾ |
ರ್ಚನೆಯ ಮಾಡುತ ಕಂಡು |
ಕನಲುತೆಲ್ಲಿಯದೆಂದು ಬಿಸುಡೆ || ೧೭೯ ||

ಕೇಳಿದ ತನ್ನ ಸಂ |
ಮೇಳದಂಗನೆಯ ಭ |
ಕ್ತಾಳತಿಗಳದ ಕಾರ್ಮಿಕವಾ ||
ಹೇಳಿದಳತಿ ಭೀತಿ |
ಯೊಳು ಕರಮುಗಿ |
ದಾಳೋಕಿಸಿ ಪತಿಯೊಡನೆ *|| ೧೮೦ ||

ಬರುತೋರ್ವ ಬಕುತ ಶಂ |
ಕರನ ಪೂಜೆಯಂ ಮಾಡಿ |
ಪರಮ ಪ್ರಸಾದವ ಸವಿದು |
ಶರಣೆಂದು ಪೋದರ |
ವರದಾರೆಂದರಿಯೆನೆಂ |
ದಿರದೆ ಗಂಗಾಯಿ ಬಿನ್ನೈಸೆ || ೧೮೧ ||

---

* ಈ ಪದ್ಯ (ಅ, ಇ, ಉ, ಎ, ಕ, ಗ, ಚ, ಜ.) ಪ್ರತಿಗಳಲಿಲ್ಲ.

ನೃಡನ ಭಕ್ತರು ಕಡು |
ಬಡವರೆಂದೊಡವೆಯು |
ಕೊಡುವ ಧರ್ಮಿಗಳಾರು ಭಲರೆ ||
ಪೊಡವಿಯೊಳ್ಪಸವಂಗೆ |
ಪಡಿಗಾಣೆ ನಾನೆಂದು |
ನುಡಿದ ಮೋಳಿಗೆಯ ಮಾರಯ್ಯ || ೧೮೨ ||

ಹರನೋರ್ವ ರಸಸಿದ್ಧ |
ನಿರವಿಸಿಂದೈತಂದು |
ಪರುಷವೇದಿಯನೀಯೆ ಬಿಸುಟು ||
ಉರದ ಮಲಿನದಿಂದ |
ಪರುಷವ ಪಳಿದನ |
ತ್ಯರುತರ ಮೊರನವೇಮಯ್ಯಾ *|| ೧೮೩ ||

ಅಂಗಡಿಯೊಳು ಶಿವ |
ಲಿಂಗವನಡಹಿಟ್ಟು |
ಪೊಂಗುತ ಬರೆ ಬಂಕಿದೇವಾ ||
ಮುಂಗಡೆ ಕಲಕೇತ |
ಯ್ಯಂಗಳ ಕಾಣುತಾ |
ಷ್ಟಾಂಗವೆರಗಿ ಶರಣೆನಲೂ || ೧೮೪ ||

ಏನೇನು ಮನದ [1]ಸುಂ |
ಮಾ[1]ನವು ಬಂಕಯ್ಯ |
ಬಾ ನೀನೆಲ್ಲಿಗೆನಲು ನಿಮಿತ್ತ ||

* ಈ ಪದ. (ಬಿ.) ಪ್ರತಿಯಲಿಲ. 1_ಸನಾ [ಇ. ಎ.] : ದುಮಾ. (ಕ.)

ದಾನಿ ಬಸವನಲ್ಲಿ |
ಗಾನೆಯ್ದಿ ಧನವ ಮ |
ನ್ಮಾನಸ ದಣಿವಂತೆ ಪೊತ್ತು || ೧೮೫ ||

ತರಬೇಹುದೆನಲವ |
ದೊರೆಯೆ ಪೇಳಲತ್ಯಂತ |
ದೊರೆಯಲ್ಲದೇನು ನಿರ್ಧಸಿಕಾ ||
ಕಿರುಕನೆ ಎನಲಾಗ |
ದರಹಾಸಮುಖನಾಗಿ |
ಕರದೊಳಿಸೆವ ಮೇಷಶೃಂಗಾ || ೧೮೬ ||

ವನು ಫಲಕನೆ ಬೀಳ್ವ |
ಕನಕಧಾರಾವೃಷ್ಟಿ |
ಯನು ಕಂಡು ಪೋಗಿ ಬಂಕಯ್ಯ ||
ಅನಘ ಬಸವ ಕೋಡಾ |
ಳನು ಹೊನ್ನ [1]ಹೊರು[1]ವರೆಂ |
ದೆನೆ ನಾಚಿದುದನೇನರಿಯೆನೆ || ೧೮೭ ||

ಬಡವಾದೆ ನಾ ಬೇಡು |
ವೊಡೆಯರ್ಗಳಿಲ್ಲೆಂಬ |
ನುಡಿಗೇಳ್ದು ಮಾಚಯ್ಯ ತನ್ನ ||
ಅಡಿಯಿಂ ನೀರ್ದುಳುಕೆ ರಂ |
ಗಿಡಿದ ರತ್ನಗಳಾಗ |
ಲಡಿಗೆರಗಿದನಂದು ಬಸವ || ೧೮೮ ||

---

1-ಥಾರಿ (ಬ.)

ಬಡಭಕ್ತನೆಂದೊಂದು |
ಹೆಡಗೆ ಧಾನ್ಯವಕೊಡ |
ಲೊಡನೆ ದಾಸನತಿ ತವಸಿಧಿಯಾ ||
ತಡದನವರು ಹೊಡ |
ಗೆಡೆಯೆಪೆ[1]ಚಿತ್ರ[1] ಕ |
ಟ್ಟೊಡೆಯ ಶಂಕರದಾಸಿಮಯ್ಯ || ೧೮೯ ||

ಹರಭಕ್ತರಿಗೆ ಪಂಚ |
ಪರುಷವುಂಟೆಂಬುದ |
ಶರಣ ಕನ್ನದಬ್ರಂಹಿದೇವಃ ||
ಧರಣೀಶ ಬಿಜ್ಜಳ |
ನರಮನೆಯೊಳು ಬಸ |
ವರಸಗೆ ದೃಷ್ಟದೋರಿದನು || ೧೯೦ ||

ಭಸಿತದಿಂದಮಲ ಚಿ |
ಲ್ವಿಸೆವ ಲಿಂಗವನೊಂದ |
ಹೊಸ ಹೊನ್ನ ರಾಸಿಯನೊಂದಾ ||
ರಸೆಯುರಿಯಲು ಮಾಡು |
ತೊನೆದು ರೇವಣ್ಣಸಿದ್ಧ |
ಶಶಿಮುಖಿಗಿತ್ತನುತ್ಸವದಿ || ೧೯೧ ||

ಗುರುರೂಪಿನಿಂ ಬಂದು |
ಚರಪಾದತೀರ್ಥದಿಂ |
ಪಿರಿದು ಚಿನ್ನವ ಮಾಳ್ಪೆನೆಂಬಾ ||

---

1. ಚಿತ (ಕ ಜ.)

ಪರಿಗೇಳಿ ನಗುತ ಕಂ ।
ಕರಿಗೋಲ ಹೇಮುಗೆ ।
ಯ್ದಿರದೆ ಸನ್ಯಾಸಿ ಘುಂಚಯ್ಯಾ ॥ ೧೯೩ ॥

ಧನವಿಲ್ಲ ಶಿವಗೇಹ ।
ವನು ಮಾಳ್ಪಡೆಂದು ತ ।
ನ್ಮನದೊಳು ನುಸುನಸುಗೊಂಡು ॥
ಜಿನುಗುವ ಬೊಮ್ಮಣ್ಣ ।
ನನುವರಿದಿತ್ತನು ।
ಕನಕರಾಶಿಯು ಸಿದ್ಧರಾಮಾ ॥ ೧೯೪ ॥

ಬೆಲೆವೆಣ್ಣುಗಳ ಚಿತ್ತ ।
ವಲರುವೊಲರ್ಥ ಸಂ ।
ಕುಲವ [1]ಪಲ್ಲವಿಪ[1] ಜಂಗಮಕೆ ॥
ಸಲೆ ಮಿಂಡಸಂಗಯ್ಯ ।
ನಲಿದೀಯೆ ಕಾಣುತ್ತ ।
ಹಲುಗಿರಿದುದ ತಾ ಮರೆದನೆ ॥ ೧೯೫ ॥

ಧನಿಕನೆ ತಾ ನಾವೆ ನಿ ।
ರ್ಧನಿಕ[2]ರೆ[2] ಹರ ಹರ ।
ಇನಿತು ಮತ್ಸರವೇಕೆನುತ ॥
ಅನಘ ಬಸವನೊಡ ।
ನೆನಿತು [3]ಜಂಗಮ[3] ಭಕ್ತ ।
ರ ನಿಕಾಯಕಿತ್ತು ಭೂತಿಯನೂ ॥ ೧೯೬ ॥

---

1-ಪಲ್ಲವಿತ (ಅ, ಎ, ಒ, ಚ.) 2-ನೆ (ಅ, ಎ) 3-ತನಿತೀಶ (ಉ, ಎ, ಕ, ಗ)

ಕರತಂದವರ ಶ್ರೀ |
ಚರಣವಂ ತೊಳೆದು ಮಂ |
ದಿರದೊಳು ಕುಳ್ಳಿರಲಿತ್ತು ||
ಪಿರಿದುಪಚರಿಸಿ ಶಂ |
ಕರಪೂಜೆಗೇನನು |
ಶರಣರು ಬೇಡಲಿತ್ತಿತ್ತು ವ್ಯೆವೆತ್ತು || ೧೯೬ ||

ರಸ ರಸಾಯನಗಳ್ಪಾ |
ಯಸ ಪಂಚಭಕ್ಷ್ಯ ಪಾ |
ಲ್ಪೊಸರುಪ್ಪುಗಾಯಿ ಶಾಕಗಳ ||
ವಿಸರಾಜ್ಯ ಮಧುವಿನಿಂ |
ದೊಸರ್ವ ಪಣ್ಗಳನಾರೋ |
ಗಿಸಿದರ್ ಶರಣರ್ ಸಂತಸದಿ || ೧೯೭ ||

ಬರುತ ಪನ್ನೀರಿಂದ |
ಲೊರಸಿ ಬಾವನ್ನವ |
ಕರತಲಕಿತ್ತು [1]ಕರ್ಪೂ[1]ರ ||
ವೆರಸಿ ವೀಳೆಯಗುಡೆ |
ಶರಣಾಳಿ ಭಾವೆಂದು |
ಪರಸಿದರ್ ವೋಳಿಗಯ್ಯಗಳ || ೧೯೮ ||

ಖ್ಯಾತಿಗೆ ಬಂದ ಪು |
ರಾತರಗಣಿತ ವಿ |
ಖ್ಯಾತ ಪಲ್ಲವಿಪ ಜಂಗಮರು ||

---

1. ಪನ್ನೀ (ಗ)

ಸ್ವಾತಂತ್ರ್ಯ ಶೀಲರ |
ಜಾತರೆಲ್ಲರಿಗಿತ್ತ |
ನಾತತ್‌ಕ್ಷಣದೊಳಾಶ್ಚರ್ಯ || ೧೯೯ ||

ಒಂದೊಂದು ಸಾಸಿರ |
ಪೊಂದಂಡಗಳ ಕೊಟ್ಟು |
ವಂದಿಸಿ ಕಳುಪೆ ಕಾಣುತ್ತ ||
ಇಂದುಮೌಳಿಯ ಭಕ್ತ |
ವೃಂದ ಭಾಪುರೆ ಭಾಪು |
ರೆಂದು ಕೀರ್ತಿಸಿದರಂತಾಗ || ೨೦೦ ||

ಜೋಳವನುರು ಮುಕ್ತಾ |
ಜಾಳವಾಗಿಸಿ ಜಂಗ |
ಮಾಳಿಗಿತ್ತನು ಬಸವೇಶ ||
ಪಾಳಿಯಿಂ ಧನಧಾನ್ಯ |
ದೇಳಿಗೆಯೀವ ಕ |
ಟ್ಟಾಳು ಶ್ರೀ ಪಡಿಹಾರಿಬಸವ || ೨೦೧ ||

ಸಾಸಿರೊಡೆಯರಿಗೊಂ |
ದೇ ಸಮಯದಿ ಬಹು |
ಭೂಷಣಂಗ[1]ಳ[1] ಸಿದ್ಧರಾಮಾ ||
ದೇಶಿಕೋತ್ತಮನಿತ್ತ |
ರಾಶಿ ಪೊಂಗಳ ಶಶಿ |
ಭೂಷಗಿತ್ತನು ಮಾರಗಾಡ || ೨೦೨ ||

---

1_ಳೆ (ಇ.)

ಮನನಟ್ಟುದಿವಳ ನೀ ।
ಯೆನುತೋರ್ವ ಜಂಗಮ ।
ಮಿನುಪ ಚಿತ್ರವ ತೋರಿಸಿದೊಡೆ ॥
ಅನುರಾಗದಿಂದವ ।
ಳನು ವಶ ಮಾಡಿತ್ತ ।
ವನಿಯೊಳು ಶೂಲಾಯುಧಯ್ಯ ॥ ೨೦೩ ॥

ಹರನ ಮೂರುತಿಯು ಕಂ ।
ಡರಿಯೆ ತೋರಿಪುದೆಂದು ।
ಪರಸಿದಯ್ಯಗಳನೆನ್ನೊಡನೆ ॥
ಸರಸವೆ ಎ[1]ನುತಲಿ ।
ವರ[1]ಗೌಳಭಟ್ಟಾರ ।
ಕರುತೋರಿಸಿದ ಕನ್ನಡಿಯೊಳು ॥ ೨೦೪ ॥

ಎಂದು ಗಣಾವಳಿ ।
ಸಂದಣಿ ಮಿಗೆ ನುಡಿ ।
ಪಂದಗಾಣುತ ನಡನಡುಗಿ ॥
ಹಂದೆಯ ಹಾವಡ ।
ರ್ದಂದದಿ ಬಸವೇಶ ।
ಬಂದು ಮೋಳಿಗೆಯ್ಯಗಳಿಗೆ ॥ ೨೦೫ ॥

ಪೊಡಮಡುತೆನ್ನಿಂದ ।
ಜಡರಾರು ಸಿಮ್ಮಿಂದ ।
ಮೃಡಮೂರ್ತಿ ಕರುಣಿಗಳಿರು ॥

---

1 ಸ್ತುತವರ (ಅ, ಉ, ಜ, ಟ ) ; ಂದೆನುತ (ಕ.)

ತಡೆಯುದೆನ್ನಯ ಶಿರ ।
ವಿಡಿದೆತ್ತಿ ಪಾಲಿಸೆಂ ।
ದಡಿಗೆರಗಿದ ಬಸವನೊಳು ॥ ೨೦೬ ॥

ಭಾವ ಪರುಷವೆಂಬು ।
ದಾವುದು ಬಸವೇಶ ।
ದೇವನ ಮುಟ್ಟಿಹುದೊಂದೆ ॥
ಸ್ತ್ರೀ ವಸು ವಸ್ತ್ರಾನ್ನ ।
ಭಾವಿಸೆ ರತ್ನವೇ ।
ನೂವಲ್ಲವಿದು ಸತ್ಯವೆನಲೂ ॥ ೨೦೭ ॥

ದೇವ ಹಸಾದ ನಾ ।
ನಾವುದ ಬಲ್ಲೆನಾ ।
ಭಾವವೆಂತಿಹುದೆಂಬುದರಿಯೆ ॥
ನೀವೆ ನಿಮ್ಮಯ ಕರು ।
ಣಾವಲೋಕದಿ ತೋರಿ ।
ಪಾವನ ಮಾಳ್ಪುದೆಮ್ಮವನು ॥ ೨೦೮ ॥

ಎನೆ ನಿಷ್ಕಳಂಕ ಮ ।
ಲ್ಲನ ಭಾವ ಬಲಿದುನು ।
ಮನಿಯ ತಾಣದೊಳ್ತೊಳತೊಳಗೆ ॥
ಇನಕೋಟಿ ತೇಜ ಬಾ ।
ರೆನೆ ಮುಂದೆ ಬಂದು ಭೋಂ ।
ಕನೆ ನಿಜರೂಪುದೋರಿದನು ॥ ೨೦೯ ॥

ದಶಭುಜ ವಿಷವಾಕ್ಷ |
ಬೆಸವೊಗ ಶಶಿ ಗಂಗೆ |
ವಿಷಫಣಿದೊಡ ಶೂಲಡವುರು ||
ಭಸಿತವ[1]ಜಿನನಭಯ[1] |
ಪಶುಪ ಪಂಕಜ ಹರಿ |
ಬಿಸಜಭವೇಂದ್ರ ಮುನಿಗಳು || ೨೧೦ ||

ಸುರರು ಕಿನ್ನರರು ಖೇ |
ಚರರು ಗಂಧರ್ವರ |
ಪ್ಸರರು ಸಿದ್ಧರು ವಿದ್ಯಾಧರರು ||
ಗರುಡ ಗುಹ್ಯಕರು ದಿ |
ಗ್ವರರಷ್ಟ ವಸುಗಳ್ಮಾ |
ತರ ನವಗ್ರಹ ಯೋಗಿಣಿಯರೂ || ೨೧೧ ||

ನಂದಿ ಗಣಪ ಭೃಂಗಿ |
ಸ್ಕಂದ ವೀರೇಶನ |
ರುಂಧತಿ ಶಚಿ ವಾಣಿ ರಂಭೆ ||
ಇಂದಿರೆ ಮೊದಲಾದ |
ರ್ಬಂದಿರೆ ಸುಮನಸರ್ |
ದುಂದುಭಿ ಪೂಮಳೆ ಸುರಿಯೆ || ೨೧೨ ||

ನೋಡು ಬಸವ ಬೇಡು |
ಬೇ[2]ಡೇನನಾದರೆಂ[2] |
ದಾಡುವ ಮೋಳಿಗಯ್ಯಗಳಾ ||

---

1-ಭಯಾಸ್ಯ (ಉ, ಎ, ಕ, ಗ, ಚ.)    2-ಡಾವರೇನನೆಂ (ಅ.)

**ನೋಡಿ ಕೊಂಡಾಡಿ ಮುಂ |**
**ದಾಡಿ ಸೋಮೇಶ ಮೇ |**
ಲಿ[1]ಡಿಕಿರಿ[1]ದಪ್ಪಿ ತನ್ನೊಳಗೆ || ೨೧೩ ||

ಬೆರಸಿ ಬೇರಿಲ್ಲದಿ |
ರ್ವರನೆಲ್ಲ ಪ್ರಮಥರ |
ಚ್ಚರಿವಟ್ಟು ನೋಡೆ ಕೈಲಾಸ ||
ಪುರಕೊಯಿದು ಸಾರೂಪ್ಯ |
ದರಸುತನವ[2]ನಿತ್ತು[2] |
ದೊರೆದ ಸತ್ಪ್ರೌಢ ಪುರಾಣಿ || ೨೧೪ ||

ಪೇಳ್ದ ಪ್ರಬಂಧವ |
ಕೇಳ್ದತಿ ಹರುಷವನು |
ತಾಳ್ದು ಭವೇಭ ಮಸ್ತಕವಾ ||
ಪೋಳ್ದಘ ಕೂಪವ |
ಪೂಳ್ದು ಭೈರವರಾಜ |
ನಾಳ್ದ ಶಿವಾನುಭಾವದಲಿ || ೨೧೫ ||

ಎಂದಿಗೀ ಸಂಸಾರ |
ಬಂಧಮೋಚನವಹು |
ದೆಂದಿಗೆ ನಾ ಭಕ್ತನೆನಿಸಿ ||
ಇಂದುಜೂಟನ ಕಾಣ್ಬೆ |
ನೆಂದು ಚಿಂತಿಸಿ ಸಲೆ |
ಸಂದಿರುತಿರಲೊಂದು ದಿವಸ || ೨೧೬ ||

---

1. ಡಿರಿ (ಉ, ಎ, ಕ, ಗ.)   2. ನಿತ್ತನೆಂ (ಕ.)

ಸಿರಿ ಮಂಚದಗ್ರದೊಳ್ ।
ತರುಣಿ ಸಹಿತ ಬಂದು ।
ಪರವಶಕೊಡಲನೀಡಾಡಿ ॥
ಇರಲೊಂದು ಸ್ವಪ್ನವ ।
ಚ್ಚರಿಗಂಡು ಭೋಂಕನೆ ।
ದ್ದರವಿಂ[1]ದ[1]ವದನೆಗಿಂತೆಂದಾ ॥ ೨೧೭ ॥

ಯುವತಿ ಕೇಳೊಂದು ಸ್ವ ।
ಪ್ನವ ಕಂಡೆ ಗುರುರೂಪ ।
ಶಿವ ತಾಳ್ದು ಬಂದೆನ[2]ಗ[2]ಂದಾ ॥
ಭುವಿಯೊಡತನ ಬೇಡ ।
ಶಿವನೊಲಿದಪ ನಡೆ ।
ಜವದೊಳಾ ಮಲ್ಲಿಪಟ್ಟಣಕ್ಕೆ ॥ ೨೧೮ ॥

ಅಂತಲ್ಲಿ ಗುರು ಕೃಪೆ ।
ಯಂ ತವೆ ಪಡೆದು ನೀ ।
ಮುಂತೆ ಸಾಸಲಿಗೆ ಪೋಗಲ್ಲಿ ॥
ಸಂತಸಮಿರಲು ನಿನ್ನ ।
ನಾಂ ತಡೆಯದೆ [3]ರಾಷ್ಟ್ಯ ।
ರಾಂತ[3]ದೊಳ್ಸುಖ ಮಿರಿಸುವೆನು ॥ ೨೧೯ ॥

ಬಿರಿದು ನಿನ್ನಯಕರ ।
ಸುರಗಿಯ ನೀನುಳ್ಳ ।
ಪರಿಯಂತ ಬಿಡಬೇಡವೆಂದೂ ॥

---

1_ದು (ಅ.) 2_ಗೊ (ಇ) 3_ಸಾರು । ಷಾಂತ (ಎ.)

ಕರುಣದಿಂ ಪೇಳ್ದ ದೇ |
ವರದೇವ ಮುಂಬಪ್ಪ |
ಧುರವಗೆಲಲುಬಹುದೆಂದು || ೨೨೦ ||

ಎನ್ನ ಪೆಸರು ಸಾಸ |
ಲನ್ವಯು ಸೋಮೇಶ |
ನನ್ನಿ ನಿನ್ನಾಣೆ ನಂಬೆಂದೂ ||
ಎನ್ನ ಶಿರದಿ ಕರ |
ವನ್ನಿಟ್ಟು ಪೋದ ಸಂ |
ಪನ್ನತೆಗಾಂ ಕಣ್ಣುದೆರೆದೆ || ೨೨೧ ||

ಎಂದ ಮಾತಿಗೆ ಮಗು |
ಳ್ದೆಂದಳು ಮಹಾದೇವಿ |
ಇಂದುಶೇಖರ ಸ್ವಪ್ನದೊಳಗೆ ||
ಬಂದು ಪ್ರಮಧಗಣ |
ವೃಂದದೊಡನೆ ಪೇಳಿ |
ದಂದ ನಮಗೆ ಪುಸಿಯಲ್ಲಾ || ೨೨೨ ||

ತಪ್ಪದೀ ಕನಸು ಕ |
ಣ್ಣಪ್ಪದೇವನಿಗಂದು |
ಶೂರ್ಪಾಸುರಾರಿ ವಿರೋಧಿ ||
ಯಿಪ್ಪ ತಾಣವಿದೆಂದು |
ಮುಪ್ಪುರ [1]ಉಡಿಗನು[1] |
ಸ್ವಪ್ನದೊಳಗೆ ಪೇಳಿದಂತೆ || ೨೨೩ ||

---

1-ವೃಂಗಸು (ಅ, ಇ, ಉ, ಎ, ಒ, ಕ, ಚ.)

ಕನಸಿನೊಳ್ವೀರಭ |
ದ್ರನು ಖಡ್ಗಫಳಕವ |
ಘನವೀರ ಸಿರಿ ಭುಜಬಲವ ||
ವಿನುತ ಮಾಸಾಳ್ವನ |
ವನುಕೊಟ್ಟೀಣಾದಿನಾ|
ಧನ ಪೊರೆ[1]ದ[1]ಂತಾದುದೀಗ || ೨೨೪ ||

ಬಂದು ಕೇರಳ ನಂಬಿ |
ಯಂದಗಾಣುತ [2]ಕಡು[2] |
ನೊಂದು ಸೀನಿವನಿಗೊಲಿವರೆ ||
ಕಂದುಗೊರಳಯ್ಯನ |
ಲಂದು ಸ್ವಪ್ನದಿ ಪೇಳೆ |
ಸಂದೇಹವಳಿಯದೆಂತಂತೆ || ೨೨೫ ||

ಅಂಗ ಲಿಂಗದ ಭೇದ |
ಮಂ ಗುರುಮುಖದಿಂದ |
ಸಾಂಗವಾಗರಿಯಬೇಕೆಂಬಾ ||
ಇಂಗಿತಕತಿ ಮಚ್ಚಿ |
ಪೊಂಗಿ ಸ್ವಪ್ನಟ ಪೇಳ್ದ |
ನಂಗಾರಿ ಭಾನುದೇವನಿಗೆ || ೨೨೬ ||

ಬಡಿಹೋರಿಬ್ರಂಹಯ್ಯ |
ನೊಡನೆ ಸ್ವಪ್ನದಿ ಬಂದು |
ನೃಡನೀ ಕಾಯಕ ನಿನಗೆಂದೂ ||

---

1-ವ (ಎ, ಬ.)   2-ಕಂಡು (ಬ.)

ನುಡಿದಂತೆ ಪೇಳ್ದನೆ |
ನ್ನೊಡೆಯ ಸೋಮೇಶನೆಂ |
ದಡಿಗೆರಗಿದಳು ತತ್ಪತಿ[1]ಗೆ[1] || ೨೨೭ ||

ಶಿವಪೇಳ್ದ ಸ್ವಪ್ನಕು |
ತ್ಸವಿಸುತ ತನ್ನಯು |
ಯುವತಿಯೊಡನೆ ಪೇಳಿ ಪೇಳಿ ||
ಭವ ಶರಧಿಯ ದಾಂಟಿ |
ಯವಿರಳತರ ಸುಖ |
ನಮಗಾಯಿತೆಂದು ನಿಶ್ಚೈಸಿ || ೨೨೮ ||

ಮುಂದುವರಿದು ಹರು |
ಷಂದಳೆದೀ ರ್ಭ[2]ದ[2] |
ಮಂದಿ ಕುದುರೆ ದೇಶ ಕೋಶಾ ||
ವಂ[3]ದು[3] ಭಕ್ತರಿಗಿತ್ತು |
ವಂದಿಸಿ ತನ್ನ ಪೂ |
ರ್ಣೇಂದುವದನೆ ಸಹವಾಗಿ || ೨೨೯ ||

ಪೊರಮಟ್ಟು ಮೋಪೂರ |
ಕರಿಗೊರಲನ ಧ್ಯಾನ |
ಕರಿಗೊಂಡು ಭೈರವರಾಜ ||
ಕೆರೆ ತೊರೆ ಪುರ ಗ್ರಾಮ |
ಖರುವ ಪತ್ತನವೆಂಬು |
ದರಿಯದ್ವೈತರುತಿರ್ದರಾಗ || ೨೩೦ ||

---

1 ಯಾ (ಇ, ಒ.)  2 ಥ (ಅ, ಉ, ಎ, ಒ, ಕ, ಗ, ಚ.)  3 ದಿ (ಗ.)

ಪಾರಿ ಯಾತ್ರಕನೆಂಬ |
ಭೂರಮಣ ಪಟ್ಟದ |
ನಾರಿಯು ಕಾಪಾಲಿಕನೊಡನೆ ||
ಮಾರ ಯುದ್ಧವನು ಕ |
ಣ್ಣಾರೆ ಕಂಡಾಗ ಸಂ |
ಸಾರವ ಬಿಟ್ಟೊಲಿದಲ್ಲಾ || ೨೩೧ ||

ಧನಸೇನಶೆಟ್ಟಿಯುಂ |
ಗನೆಯು ಬಿಟ್ಟತಿ ಮುಕ್ತಿ |
ಯನು ಕಂಡುದಿಲ್ಲ ನಾಗಾರಿ ||
ಯೆನಿಪ ನೃಪತಿ ಕುವ |
ರನಿಗೆ ಪಟ್ಟವ ಕಟ್ಟಿ |
ಘನ ತಪಗೈದಂತುಟಲ್ಲಾ || ೨೩೨ ||

ಶಿಶುತನದೊಳು ವಿದ್ಯಾ |
ವಿಷಯ ಜವ್ವನದೊಳಾ |
ಯಸ ತಪ ವಾರ್ಧಿ[1]ಕ್ಯ[1]ದಲ್ಲಿ ||
ಉಸು[2]ರ[2] ಯೋಗದಿ ಬಿ[3]ಡೆ[3] |
ವಸುದೀಶರೆಂಬುದ |
ನಸುನಗುತಾಗ ನಡೆದ[4]ನು[4] || ೨೩೩ ||

ವರವಧು ಮಾಳ್ಪ ದು |
ಶ್ಚರಿತಕೋಸುಗ ಭರ್ತೃ |
ಹರಿ ಬಿಟ್ಟು ಸಕಲ ಭಾಗ್ಯವನೂ ||

---

1-ಕ (ಉ, ಕ, ಜ.) 2-ರೆ (ಗ.) 3-ಡು (ಗ.) 4-ರು (ಉ, ಕ, ಟಿ.)

ವಿರತನಾಗೈತಂದ |
ಪರಿಯಲ್ಲ ಭೈರವೇ |
ಶ್ವರ ಮಹಾದೇವಿಯು[1]ಗೂರ್[1]ಡಿ || ೨೩೪ ||

ಬರುತಿರೆ ಮಹಾದೇವಿ |
ಯರು ಗಿರಿಜಾತೆಯು |
ಚರಣ ಕಮಲವ [2]ಜಾ[2]ನಿಸುತಾ ||
ಉರುತರ ಸತಿಯರ |
ಶಿರರತ್ನವೆನಿಸುವ |
ಪರಮರುಂಧತಿಯು ನೆನೆವುತಾ || ೨೩೫ ||

ಪರಮ ಪ್ರಸಾದವೆ |
ಶರೀರದ ನಾಗಾಯು |
ಚರಣ ಕಮಲವ ಜಾನಿಸುತಾ ||
ಹರನ ಕಾರುಣ್ಯದಿ |
ಬೆರೆದ ಶಿವಪ್ರಿಯ |
ದುರುನಾಚಿಯರ ನೆನೆವುತಲಿ || ೨೩೬ ||

ತಿಲಕವ್ವೆಯರ ನೆನ |
ಹಲದುರ್ ಸತ್ಯಕ್ಕನ |
ಮಲಪಾದಯುಗವ ನೆನೆವುತಾ |
ಛಲವಂತೆ ಮಹಾದೇವಿ |
ಯೊಲವಾಂತು ಮುಕ್ತಾಯಿ |
ಗಳ ಕರುಣವ ನೆರೆಪೊತ್ತು || ೨೩೭ ||

---

1-ಗೂ (ಇ, ಉ, ಗ, ಚ, ಜ.)    2-ಧ್ಯಾ (ಎ, ಚ.)

ಸೂರಾಂಬೆಯರ ಪಾದ |
ವಾರಿಜ ಸ್ಮರಣೆಯೊಳ್ |
ಚಾರು ಮಂಗಾಯಕ್ಕರಸಿಯಾ ||
ಓರಂತೆ ನೆನೆವುತ |
ಧೀರೆ ಗುಡ್ಡವ್ವೆಯ |
ಪಾರ ಮಹಿಮೆಯ ಧ್ಯಾನಿಸುತಾ || ೨೩೮ ||

ಚಂಗಳವ್ವೆಯ ಪಾದ |
ಪಿಂಗದೊಮ್ಮೊಮ್ಮೆ ಸಾ |
ಷ್ಟಾಂಗವೆರಗಿ ಪೊಡಮು[1]ಡು[1]ತಾ ||
ಮಂಗಳಾತ್ಮಕಿಯಮ |
ಲಾಂಗಿ ದುಗ್ಗಳೆಯ ಪಾ |
ದಂಗಳ ಮನದೊಳಿರಿಸುತಾ || ೨೩೯ ||
ಸಿರಿ ಭಾರತಿಯರ ಧಿಃ |

ಕ್ಕರಿಸುತ ಋಷಿಪತ್ನಿ |
ಯರ ಬಾಳ್ಕೆಗತಿ ಕೊಕ್ಕರಿಸುತ ||
ಧರಣಿಜೆ ದ್ರೌಪತಿ |
ಯರ ಚರಿತೆಗೆ ಪೇಸು |
ತುರು[2]ಮಾ[2]ನ್ಯಮಯೆ ಮಹಾದೇವಿ || ೨೪೦ ||

ತೊಡೆ ನಡು ಮೊಲೆ ಮೊಗ |
ನುಡಿ ಮುಡಿ ಕಣ್ದುಟಿ |
ನಡೆ ಚಿ[3]ತ್ರ[3] ಚರಿತ ಮೈಗಾಂತಿ ||

---

1–ಡ (ಒ.) 2–ಪ (ಇ, ಒ.); ಹೂ (ಅ, ಉ, ಎ, ಕ, ಗ.); ಹೊ (ಚ.)
3–ತ್ತ (ಅ, ಇ, ಉ, ಎ, ಗ.)

ದೃಢಭಾವದಲ್ಲಿ ತ |
ಳ್ತಿ[1]ಡೆದೇಳ್ದಿನ[1]ದಿ |
ನಡೆದೊಲ್ ಬಂದಳು ಮಹಾದೇವಿ || ೨೪೧ ||

ಒಡಲ ಬಳಿಯ ಛಾಯೆ |
ನುಡಿಯ ಬಳಿಯೊಳರ್ಥ |
[2]ದೃ[2]ಢ ಭಕ್ತಿ ಜ್ಞಾನ ವಿರಕ್ತಿ ||
ಯೊಡನೆ ಸನ್ಮುಕ್ತಿ ಬೆಂ |
ಬಿಡದೊಲು ಮಹಾದೇವಿ |
ನಡೆದಳ್ ಭೈರವರಾಜ[3]ನೊಡನೆ[3] || ೨೪೨ ||

ಪೋಗುತುನ್ನತ ವಾಯು |
ವೇಗದಿ ಹರ ಕೃಪಾ |
ಸಾಗರದೊಳಗಾಳುತೇಳು ||
[4]ತಾ[4]ಗಳು ಮನದನು |
ರಾಗ ವಿಭ್ರಮದೋರ |
ಲಾಗಲ್ಲಿಗೆರಡನೆಯ ಸಂಧಿಪೂರ್ಣ || ೨೪೩ ||

**ಅಂತು ಸಂಧಿ ೨ ವೃತ್ತ ೨ ಕ್ಕಂ ಪದ ೬೪೨ ಕ್ಕಂ ಮಂಗಳಮಹಾ**

ಶ್ರೀ ಶ್ರೀ ಶ್ರೀ ಶ್ರೀ ಶ್ರೀ



1—ಡಿದೆರಡೆಳ್ನ (ಅ, ಇ, ಉ, ಎ, ಒ, ಚ.) 2—ವ್ಯ (ಅ.) 3 ನಿದಿರ (ಗ.
—ತೇ (ಅ, ಉ, ಎ, ಕ, ಗ, ಜ, ಟ.)

# ಮೂರನೆಯ ಸಂಧಿ

## ಭೈರವರಾಜನು ಅತಿ ಪ್ರವಾಹವಂ ತಡೆದು, ಹಾಲ ಸೋಮನಾಥನ ದರ್ಶನವ ಮಾಡಿ ತೃಪ್ತನಾದುದು.

### ಚಂಪಕಮಾಲಾ ವೃತ್ತ

ಸೂಚನೆ :—

ತ್ರಿಣಯನತರ್ಕ್ಯನಪ್ರತಿಮನಿಂದುಕಲಾಧರ ಪೇಳ್ದ ಮಲ್ಲಿಪ |
ಟ್ಟಣಕಿರದೆಯ್ದಿ ವೀರಭಟನೋರ್ವನ ಶೀರ್ಜಿ ಬಳಿಕ ಜೇಂಟಿಯೊಂ ||
ದಣಿಯರದಿಂದ ಲಿಂಗವನೆ ಕಂಡುಗು[1]ರನ್ಸಯಗೇಳುತ್ತೈಡಿ[1] ಮುಂ |
ಕಣಿಸಿದ ವೇಣಿಯಂ ಬಗಿದು ಬಂದು ವಟಾಖ್ಯ[2]ದಿ ನಿಂ[2]ದ ಭೈರವಂ ||೧||

**ಪದ**

ವಾಮಾರ್ಧಕಾಯ ನಿ |
ರಾಮಯನಾಮಯ |
ಸಾಮಯನಮೃತನನಂತ ||
ಭೀಮ ನಿಸ್ಸೀಮನು |
ದ್ದಾಮ ಸಾಸಲ ಶಂಭು |
ಸೋಮೇಶನಡಿಗೆ ವಂದಿಸುವೆ ||೧||

ಬರೆ ಬರೆ ಮುಂದೆ ಶಂ |
ಕರನ ಕಾರುಣ್ಯದ |
ಹರವರಿ ಮುಕುತಿಯ ತಾಣ ||

---

1 ರೋತ್ತಮರ (ಅ.)   2 ಕೆ ಬ (ಅ, ಇ, ಉ, ಎ, ಗ.) ; ಕೇಯ್ದಿ (ಕ.)

ಸ್ಥಿರ ಭಕ್ತಿ ಜ್ಞಾನ ವುಂ ।
ದಿರ ಸರ್ವ ಸಂಪದ ।
ದುರು ಕೋಶ ಮಲ್ಲಿವಟ್ಟಣವು ॥ ೨ ॥

ಬಂದನಲ್ಲಿಗೆ ಬೇಗ ।
ದಿಂದ ಭೈರವರಾಜ ।
ನಂದು ತನ್ನರ್ಧಾಂಗಿ ಸಹಿತ ॥
ಇಂದುಶೇಖರ ಕೃಪಾ ।
ಸಿಂಧುಯಿಳಿಯುಮೇಶ ।
ನಂ ದಿಟ ಕಂಡಡಿಗೆರಗಿ ॥ ೩ ॥

ದೇವ ದೇವರ ಗಂಡ ।
ದೇವ ದೇವರ ದೇವ ।
ದೇವೇಶ ದೇವರಾದಿತ್ಯ ॥
ದೇವ ವೇಶ್ಯಾ ಭುಜಂ ।
ಗಾವಲೋಕಿವುದೆನು ।
ತಾ ವಿಭು ಭೈರವರಾಜ ॥ ೪ ॥

ನುತಿಗೆಯ್ಯು ತನ್ಮ[1]ಡಿ[1] ।
ಸ್ಥಿತವಾದರಲನೊಂದ ।
ರತಿಪಾರಿ ಕೊಡೆ ಭೈರವಾಂಕ ॥
ಅತಿ ಸಂತಸದೊಳಿರ್ಪ ।
ನಿತಕೆ ವೈಹಾಳಿಯೊ ।
ಗುತ ಕಂಡನಾ ರಾಮರಾಜ ॥ ೫ ॥

---

1_ದಿ ( ಉ )

ಅರಿ ಗಜ ಸಿಂಹ ಸಂ |
ಗರ ವೀರ ವಿಕ್ರಮ |
ಬಿರಿದಂಕ ಸಾಹಸ ಮಲ್ಲ ||
ಧುರಗಲಿ ಭಟರ ಸಂ |
ಹರ ಭೈರವಾಂಕನ |
ಚರಣದಿ ನೆಲ್ಲಬೊಂಬೆಗಳ || ೬ ||

ನೋಡಿ ಸಂತಸದಿ ಕೊಂ |
ಡಾಡುತಿರಲು ಪಂಥ |
ಪಾಡನುಸುರುತೋರ್ವ ಭಟನು ||
ಕೂಡೆ ತಡೆದು ರಾಯ |
ನೋಡಿವನಸುವನೀ |
[1]ಗೂ[1]ಡುವೆನೆ[2]ನ್ನ[2] ಕೂರಸಿಗೆ || ೭ ||

ಎನೆ ಕೋಪ ಕೊನರಿ ಕಣ್ |
ಗೊನೆ ಕಿಡಿಯಿಡುತಲ |
ವನಿಪಾಲ ನಿನ್ನ ಕಣ್ದಣಿಯ ||
ಮೊನೆದೋರಿ ಬಿದ್ದಿಕ್ಕು |
ವೆನು ಜವರಾ[3]ಜಗೀ[3] |
ತನನೆಂದ ಭೈರವರಾಜ || ೮ ||

ಸುರಗಿ ಸೂನಗಿ ಶಕ್ತಿ |
ಕರವಾಳು ಗದೆ ಖಡ್ಗ |
ಪರಶು ಪಟ್ಟಿಸ ಕೊಂತ ಲಾಡಿ ||

---

1_ಡಾ (ಗ), ಗಾ (ಎ, ಚ, ಟ)   2_ಂದು (ಇ.)   3_ನೀನೀ (ಕ.)

ಹರಿಗೆಯುಬ್ಬಣ ತೋ ।
ಮರ ಮಾರಿವದನ ಮು ।
ದ್ಗರ ಮೊದಲಾದಾಯುಧ[1]ದೊಳು[1] ॥ ೯ ॥

ಲಘು ಲಕ್ಷ್ಯ[2]ಸು[2]ಟಿಯೊಳೊ ।
ದಗಿ ಪೊ[3]ಕ್ಕು ಪೊಡದಿ[3]ರಿ ।
ದೊಗೆದು ಸಂಗ್ರಾಮ ಮುಖ ದೊಳು ॥
ಬಗೆಗುಂದಿಸು[4]ವ[4]ನು ಶ ।
ತೃಗಳ ಭೈರವರಾಜ ।
ನಿಗದಾವನಾಂಪ ನೋಡೆನುತ ॥ ೧೦ ॥

[5]ಭೇ[5]ತಾಳನಂತೆ ಭೀ ।
ತಾತಿರೇಕವ ಚಂಡಿ ॥
ಕಾ ತರುಣಿಯೊಲದು[6]ಭು[6]ತ ॥
ಜಾತಿದೋರುತ ಬಂದಾ ।
ರತಿಯಿದಿರ ನಿಂದು ।
ಕಾತರಿಸುತ ಭೈರವಾಂಕ ॥ ೧೧ ॥

ಪುಟನೆಗೆದೂ[7]ರ್ವಿ[7] ಮ ।
ರ್ಕಟ ಗಜ ವರಾಹ ಕು ।
ಕ್ಕುಟ ಮಲ್ಲ ಹೊ[8]ಲಹಿದಿರೇಳ್ಗೆ[8] ॥
ದಿಟ ಮಾರುನಿರಿಗೆ ನಿ ।
ಶ್ಚಟದಿ ಸಂಗ್ರಾಮ ಲಂ ।
ಪಟ ಭೈರವಾಂಕನಿಂದಿರಲು ॥ ೧೨ ॥

---

1-ಗಳನು (ಗ.) ೨-ಣ ಶೂ (ಗ, ಚ.) 3-ಕ್ಕಿರಿವೆ ಪೊಕ್ಕಿ (ಗ.) 4-ವೆ (ಗ.) 5-ವೇ (ಗ, ಚ.) 6-ಭೂ (ಎ, ಕ.) 7-ಬ್ಬಿ (ಇ.) 8-ಯಿಲಿದಿರೇಳೆ (ಗ.) ; ಹೊಲ ಹಿದಿ ಕೇಳೆ (ಇ, ಉ, ಎ, ಜ )

ಗಳಿಯೋಸರಿಸಲು ಮುಂ |
ದಳದೊಳು ಥೆಮ್ಮನೆ |
ಲುಳಿಯಲೊದಗಿ ಮೊನೆದೋರಿ ||
ಕಳೆದು ಲಾವಣಿಯೊಳಾ |
ಗಳೆ ಹೊಕ್ಕನೆದೆ ಡೋರು |
ಗಳವಂತೆ ತಿವಿದು[1]ರುಳಿಸಿ[1]ದ || ೧೩ ||

ಭಲ ಭಲ ಭಲ ನಿಜ |
ಕಲಿಗಳರಸ ಹೊ ಹೋ |
ನಿಲು ನಿಲ್ಲೆಂದಾ ರಾಮರಾಜ ||
ನಲಿದುಡ ತೊಡಕೊಟ್ಟು |
ಸಲೆ ಸೇಹ ಬಲಿದು ಬೆಂ |
ಬೆಲ[2]ನೀ[2]ತ ನನಗೆಂದು ನಂಬಿ || ೧೪ ||

ಮುಂದಿಟ್ಟುಕೊಂಡಿರ |
ಲೊಂದು ದಿವಸ ಬೇಂಟೆ |
ಗೆಂದು ಕಿರಾತ ಸಂದೋಹ ||
ಬಂದು ಬಿನ್ನೈಸಲಾ |
ನಂದದಿಂ ಪೊರಮಟ್ಟೆ |
ನಂದು ಭೈರವರಾಜ ಸಹಿತ || ೧೫ ||

ಬಡಿಗೋಲು ಬಿಲ್ ಬಾಣ |
ಗಿಡುಗ ಭಂಡಿಯ ಹುಲಿ |
ತಡಿಕೆ ಪೇರ್ಬಲೆ[3]ಗಳಗೂಡಿ[3] ||

---

1-ಕೆಡಪಿದ (ಉ, ಕ, ಟ) 2-ವೀ (ಅ, ಉ, ಗ, ಚ, ಜ, ಟ.) 3-ಗಾಣ (ಅ, ಉ, ಎ, ಗ.)

ಪಿಡಿದ ನಾಯಿಗಳಟ್ಟಿ ।
ವಿಡಿದು ಕಿರಾತರ ।
ಪಡೆ ತೆರಳ[1]ದುದು[1] ಕಾನನಕೆ ॥ ೧೬ ॥

ಕರಡಿ ಕಾಡ್ಗೋಣ ಪೇ ।
ರ್ಮರೆ ಚಿತ್ರಕಾಯ ಸೂ ।
ಕರ ಖಡ್ಗ ಕಡವೆಯು ಸಾರಂಗ ॥
ನರಿಯೇಣ ಮೊಲ ವೃಕ ।
ತರುವಂದಿ [2]ಸ[2]ಲ್ಯ ಭೂ ।
ಧರಗುರಿ ವಿಹಗ ವೀ[3]ಧಿಯುನು[3] ॥ ೧೭ ॥

ಕಡಿ ನಡೆ ಪೊಡೆ ಪೋಳು ।
ಪಿಡಿ [4]ಬ[4]ಡಿ ಕಡಿದೆಚ್ಚು ।
ಕೆಡೆವಿರಿ ತರಿ ಸನ್ನೆದೋರು ॥
ಇಡು ಕ[5]ಡಂಗಡಿ[5]ವಿಡಿ ।
ಬಿಡು ಬಲೆಗಳನೆಂಬ ।
ನಿಡುದನಿ ತುಂಬಿತಡವಿಯ ॥ ೧೮ ॥

ಮರನೇರಿ ಕೂಗುವ ।
ಬ್ಬರ ಹರೆಗುಟ್ಟುವ ।
ಬಿರುದನಿ ವ್ಯಾಧರ ಬೊಬ್ಬೆ ॥
ಗಿರದಂಜಿ ನಿಮಿರ್ದು ನಿ ।
ಬ್ಬರದ ಮೊಲನನೋರ್ವ ।
ಪರಿದು ತಿರ್ರನೆ ತಿರುಪಿಟ್ಟ ॥ ೧೯ ॥

---

1_ತು (ಅ.) 2 ಶ ( ಇ ) 3_ಧಿಗಳ ( ಇ, ಉ, ಕ. ) 4 ಜ ( ಇ ) 5_ಂಡಕಡಿ ( ಗ. )

ಇಡೆ ಬಡಿ ಕೋಲೊಳು ।
ತೊಡರಿ ತೊಪ್ಪನೆ ಬೀಳ ।
ಲೊಡನೆದ್ದು ಪರಿವ ಮರಿಗಳ ॥
ದಿಡುಗುಗಾಣುತಲಿದಿ ।
ರಡಸಿ ತಿವಿದು ನೂಂಕಿ ।
ಕೆಡ[1]ಹಿ[1]ದನೋರ್ವ ಲುಬ್ಧಕನು ॥ ೨೦ ॥

ಭರದಿಂದ ಲಂಘಿಸಿ ।
ವೊರದು ಹುಂಕರಿಸಿ ಬೇ ।
ಡರ ಪೊಕ್ಕು ಪೋ[2]ಳ್ದ[2] ವೇಬುರ್ಲಿಯು ॥
ಉರುಳಿಗಡಿಯಲಿತ್ತ ।
ಪರಿದು ಸ್ಸೈರಿಭಗಳ ।
ಬ್ಬರವಿಗೆ ಮುಲತು ನಿಟ್ಟಿಸುತ ॥ ೨೧ ॥

ಕೆಕ್ಕಳಿಸುತಮುರ ।
ಸಿರ್ಕಡಿಗ[3]ಳಿದೊಕ್ಕ[3] ।
ಲಿಕ್ಕುತ ರಾಣೆಗಿಟ್ಟವಸಿಯು ॥
ನೆಕ್ಕಸೊದೆವ ಕೋಣ ।
ನಕ್ಕಜಗಂಡು ಬೊ ।
ಬ್ಬಿಕ್ಕಿ ಕಿರಾತ ಸಂದೋಹ ॥ ೨೨ ॥

ಕವಿದೆ[4]ನೆ[4] ಹೊಮ್ಮಿರಿ ।
ದವರಸಿಕ್ಕಡಿ ಮಾಡಿ ।
ಸವರಿ ಸಂಹರ ಮಾಡು[5]ತಿರಲು[5] ॥

---

1–ಪಿ (ಕ, ಗ.) 2–ಳ್ದ (ಅ.) 3–ಳತೋರಿತಿ (ಗ.) 4–ಸವುತ (ಎ.)
5–ತಿರೆ (ಅ, ಇ, ಉ, ಎ, ಕ, ಚ, ಜ)

ಬವರಿದಿರುಗಿ ನಿಂದು |
ತಿವಿದು ನೊಂಕದ ಮುನ್ನ |
ಜವದೊಳೊದಗಿತು ವರಾಹ || ೨೩ ||

ದಾಡೆಗಡಿವುತ ಮಾ |
ತಾಡದ ಮುನ್ನ ಹೊ |
ಯ್ದೋಡುವೆಕ್ಕಲಗೆ ಮುಮ್ಮೊಳಿದು ||
ಕೂಡೆ ಕೂರ್ನಾಯ್ಗಳ |
ಜೋಡಿಸಿ ಬಿಡೆ ಮುಟ್ಟಿ |
ಮಾಡಿ ತೆಗೆಯೆಕಿಸಿಸೇರಿ || ೨೪ ||

ಘುಡುಗುಟ್ಟಲಳಲಿದ್ದು |
ಹೊಡೆದು ದಿಕ್ಕಡಿಯಾಗಿ |
ಕೆಡೆದ ಬಲ್ನಾಯಿಗಳ ಕಂಡು ||
ಪಿಡಿದಿಟ್ಟಿಗೊಂಡು ಹೊ |
ಕ್ಕಡೆ ಮುಗು[1]ಳ್ದೆ[1]ತ್ತಿ ಜಂ |
ಗಡೆಗಿಟ್ಟುದವನ ಮತ್ತೋರ್ವ || ೨೫ ||

ಲಾಗಿಂದ ಬಂದಿದಿ |
ರಾಗಿ ತಿವಿಯಲೆತ್ತಿ |
ಭೂಗೊರಗಿಸಲೋರ್ವ ಶಬರ ||
ಚಾಗು ಭಲರೆಯೆನ |
ಲಾಗೋರ್ವನಿರಿದುದಿ |
ಬ್ಭಾಗವಪ್ಪಂತೆ ಕೆಡಪಿದ || ೨೬ ||

1-ಳಿ (ಅ, ಗ.)

ಮದವೆದ್ದು ಮದದಂತಿ |
ಯೊ[1]ದಗೆ[1] ಲಾಗಿಸುತೋರ್ವ |
[2]ಬಿದುವನಿಬ್ಬಗಿದು ಮೌಕ್ತಿಕವ[2] ||
ರುಧಿರ ಸಹಿತ [3]ಕಿ[3]ತ್ತು |
ಕೆದರೆ ಕೊಂಡಾಡಿದಳ್ |
ಚದುರೆ ಮೆಲ್ಲುಣ್ಗಟಕಿಯ[4]ಲಿ[4] || ೨೭ ||

[5]ಸೋಹಿದ[5] ಮೃಗದ ಸ |
ಮೂಹವ ನೃಪನಿಪ್ಪ |
ತೋಹಿನ ತೆರೆವೇಂಟೆಗಾಗಿ ||
ಸಾಹಸ ಭಟರು ಸ |
ನ್ನಾಹದಿ ನಿಂದಾಗ |
ದೇಹದ ಹುಲಿಗಳ ಬಿಡಲು || ೨೮ ||

ಹುಲುಗಿ [6]ಹೂಂಕರಿ[6]ಸಿ ಕಾಲ್ |
ಗಳ ನಿಡಿನಿಮಿರ್ದು ಮುಂ |
[7]ಮು[7]ಳಿದು ಧಿಂಕಿಟ್ಟಟ್ಟಿ ಮುಟ್ಟಿ ||
ಹೊಳೆದು ಹೊಮ್ಮರಿದೋಡು ||
ವಳವಿಗೆಡಿಸಿ ಹುಲ್ಲೆ |
ಗಳ ಚಿತ್ರಕಾಯ ಕೊಲ್ಲುತಿರೆ || ೨೯ ||

ಕಂಡು ನಿಲ್ಲದೆ ಭಯ |
ಗೊಂಡು ಲಾಗಿಸುತುಬ್ಬಿ |
ದುಂಡಿಸಿ ತೆರೆಯ ಸರಳಿಸಿ |

1-ದೆಯೆ (ಅ, ಇ, ಚ.) 2-ಚದುರ ತಿವಿಯೆ ಮಸ್ತಕದೆ (ಗ.) 3-ಮು (ಗ.) 4-ನು (ಗ ) 5-ತೋಹಿನ (ಇ ) 6-ಹಮ್ಮೈ (ಇ.) 7-ಕ (ಅ.)

ಹಿಂಡೊಡದೋಡಿತು ।
ದ್ದಂಡ ಭೈರವನಿಂದ ।
ದಂಡಿ[1]ಸಿ[1]ಕೊಳುವೆನೆಂಬಂತೆ ॥ ೩೦ ॥

ದಶರಥ ತೋಹಿನೊಳ್ ।
ಬಿಸವಂದವಪ್ಪಂತೆ ।
ಮುಸೆಗಾಣಿಸಿದನು ಚೌಡಲನ ॥
ದೆಸೆಯಿಂದ ಬಹಳ[2] ಪ ।
ಯ[2]ಸವಾಂತರನೆಯೊಳು ।
ಪುಸಿಯಲ್ಲ ಬಳಿಕಲಿನ್ನೋರ್ವ ॥ ೩೧ ॥

ಮೇದಿನಿಪತಿಯು ಸಿ ।
ತೋದರ ತೋಹಿನೊಳ್ ।
ಕಾದಿರೆ ಮುಂದಡ್ಡ ಸುಳಿದ ॥
ಮಾದೇವಗಾಧಾರ ।
ವಾದ ನಂದಿಯನೆಸ ।
ಲಾದಪಖ್ಯಾತಿಯಂತಲ್ಲ ॥ ೩೨ ॥

ಸಾಂದ್ರ ಕುಪಿತನು ಮು ।
ನೀಂದ್ರ ಕಲ್ಪಿಸಿದುರು ।
ಪೇಂದ್ರಾವತಾರದ ಕಿಟಿಯ ॥
ರಂಧ್ರ ಮಾಡಿದ ಮನು ।
ಜೇಂದ್ರ ಮೂಲಿಗ ಹರಿ ।
ಶ್ಚಂದ್ರನ ಬಗೆಯಿದಲ್ಲಲ್ಲ ॥ ೩೩ ॥

---

1–ಸ (ಅ.) 2–ಸಾಯ (ಆ, ಚ.) ; ಪ್ರಾಯ (ಎ, ಒ, ಕ, ಟ.), **ಸಮ** (ಗ.)

ರತಿಗೆಯ್ವುತಿರೆ ವ್ಮೃಗ ।
ಕೃತಿಯೊಳುತ್ತಮ ಋಷಿ ।
ಮಿಥುನಗಾಣುತ್ತ ತೋಹಿನೊಳು ॥
ಅತಿ ಪೆರ್ಚಿ ಪಾಂಡು ನೃ ।
ಪತಿಯೆಚ್ಚನ್ನುತ ಶಾಪ ।
ಯುತನಾಗಿ ಪೋದಂತುಟಲ್ಲ ॥ ೩೪ ॥

ಸೌಂದರ ತೋಹಿನೊಳ್ ।
ನಿಂದರೆ ಹರಿಗಂಡು ।
ಪಿಂದಟ್ಟಿ ರೋಷ ಭಾಸ್ಕರನ ॥
ನಂದನವಳಿದುದ ।
ರಿಂದವ ಶಪಿಸಲು ।
ಹೊಂದಿದರವರಂತಿನಲ್ಲ ॥ ೩೫ ॥

ಜಾತವೇದನ ತನು ।
ಜಾತ ವಿದ್ರುಮರಾಜ ।
ನಾ [1]ತೋಹಿ[1]ಗೋರ್ವ ತಾಪಸನು ॥
ಪ್ರೀತಿಯಿಂ ಬರೆ ಬೈದೊ ।
ಡಾತ ಶಪಿಸಲು ಪೇರ್ ।
ಭೂತವಾಕ್ಷಣವಾದಂತಲ್ಲ ॥ ೩೬ ॥

ತಾರಕಾಸುರನು ಕಾಂ ।
ತಾರದಿ ಬೇಂಟೆಯ ।
ಭೂರಿ ಭಟರೊಳಾಡುವಾಗ ॥

---

1-ಕಳಿ (ಇ.)

ಘೋರನೆ ಸ್ವಾಮಿ ಕು ।
ಮಾರನೊಡನೆ ಕೈ ।
ಹೋರಿ ಸತ್ತಂತುಟೆದಲ್ಲ ॥ ೩೭ ॥

ತೆಲುಗಜೊಮ್ಮಯ್ಯನ ಕೂ ।
ರಲಗಂಬಿಗಿದಿರಾದ ।
ಕಲಿಮೃಗ ಕುಲವೆಂತುಟಂತೆ ॥
ನಲಿದು ಕಣ್ಣೊಂದನು ।
ಜ್ವಲ ಬಾಣದಿಂ ಮುಕ್ತಿ ।
ವಳೆಯುಲೆಯ್ದುವ ಏಣನಂತೆ ॥ ೩೮ ॥

ಭರದಿಂದ್ಯೈದಾರ್ಜಂಗ ।
ವರೆಸರಳಿಸುತಿರ್ಪ ।
ಹರಿಣನುರವ ಭೈರವಾಂಕ ॥
ಸುರಗಿಯಿಂದಿರಿದು ಸಿ ।
ಬ್ಬರದಿ ತೆಗೆಯಲಾಗ ।
ಹರ ಹರೇನೆಂಜೆನಚ್ಚರಿಯು ॥ ೩೯ ॥

ಗುರು ಸಿದ್ಧರಾಮುನಿ ।
ದಿರೆ ಗಾಯವ[1]ಟ್ಟೊಂ[1]ದು ।
ಹರಿಣರೂಪಿನ ಮಯೂರಕನು ॥
ಭರದಿ ಬೀಳಲು ನಿಜ ।
ಕರದಿ ನೆಗ[2]ವೆ[2] ದಿವ್ಯ ।
ಶರೀರವಡೆದೊಲಾದುದಾಗ ॥ ೪೦ ॥

---

1–ಲ್ತೊ (ಇ.) 2–ಪಿ (ಉ, ಕ, ಗ, ಚ.)

ಪೆಂಪೆಸೆದಿಹ ಜಸ |
ಗಂಪನ ಕೈ ಸೋಂಕಿ |
ನಿಂ ಪಂದಿ ರೂಪನೀಡಾಡಿ ||
ಕಂಪುಗಣೆಯುನ ರೂ |
ಪಂ ಪಳಿವಂತಾದ |
ಸಂಪನ್ನ ವನಜನಂತಾಗ || ೪೧ ||

ಪಿಂಗಳನೆಂಬತಿ |
ಪುಂಗವ ಶಪಿಸಲು |
ತುಂಗ ಬಾಲಾರ್ಕ ಯತೀಂದ್ರ ||
ಪೊಂಗಿ ಪೇರ್ಬುಲಿಯಾಗಿ |
ಜಂಗಮ ಸೇವೆಯಿಂ |
ದಂಗವಡೆದೊಲಾದುದಾಗ || ೪೨ ||

ಮುನಿಪತಿ ಶಾಂಭವ |
ಮುನಿದು ಕನಕ ಪ್ರಭೆ |
ಯನು ಶಪಿಸಲು ಕಪಿಯಾಗಿ ||
ಮನಸಿಜಹರನ ಭೋಂ |
ಕನೆ ಪೂಜೆಗೈದಂಗ |
ವನು ಪಡೆದಂತಾದುದಾಗ || ೪೩ ||

ಇಂದು ವದನೆ ಮತ್ಸ್ಯೆ |
ಗಂಧಿ ಪರಾಶರ |
ನಿಂದ ಯೋಜನಗಂಧಿಯೆನಿಸಿ ||

ಸೌಂದರತರವಡೆ |
ದಂದ ಭೈರವರಾಜ |
ನಿಂದೇಣಗಂತಾದುದಾಗ || ೪೪ ||

ಪಿರಿಯ ಕಲ್ಲೊಂದರಿಂ |
ವರ ಪೂರ್ಣ ಭದ್ರನ |
ಶಿರ[1]ವ[1] ಸುನೇವ್ಯಸಿಟ್ಟುದರಿಂ ||
ದುರು ಬ್ರಹ್ಮ ರಾಕ್ಷಸ |
ನಿರವಾಗೆ ಪೋದುದು |
ಸ್ಮರ ವಿಜಯನೆಂದೆಂತುಟಂತೆ || ೪೫ ||

ತನುವ ಬಾಧಿಪ ಶೂಲೆ |
ಘನವಾಗೆ ವಾಗೀಶ |
ಯ್ಯನ ಪೂವಾಟಯೊಳಿಹ ತನ್ನ ||
ಅನುಜಗೆರಗೆ ಕರ |
ವನರುಹ ಸೋಂಕೆ ಪಾ |
ವನತೆವೆತ್ತಂತಾದುದಾಗ || ೪೬ ||

ತರಣಿ ಘಂಟಾಕರ್ಣ |
ನುರು ಶಾಪದಿಂ ಕುಷ್ಠ |
ಶರೀರವನಾಂತತಿನೊಂದು ||
ಪರಮ ಪಾವನ ಮುನೋ |
ಹರಗಣ ವರನ ಶ್ರೀ |
ಚರಣ ತೋಯದಿ ಬದುಕಿದೊಲು || ೪೭ ||

---

1_ಸ (ಗ.)

ಹರಿಣನೆಸೆವ ಕಳೇ |
ವರ ಸ್ಮರರೂಪಾಂತು |
ಭರದೊಳಾಗಸ ಪಥಕಡರೆ ||
ಸುರಗಿಯು ಮೊನೆಯೊಳಿ |
ದುರ್ಗರು ಶಶಿಕಾಂತದ |
ಸರತರ ಲಿಂಗವಪ್ಪಿದುದು || ೪೮ ||

ಹರಿಣ ರೂಪಾಗಿರ್ದ |
ಹರಿಯುಸು ವೀರನ |
ಸರಳ ಮೊನೆಗೆ ಬಂದಂತೆ ||
ಧರಣೀಶಾನುಮಿಷಂಗೆ |
ವರ ನಂದಿ ತೋರ್ವ ಭಾ |
ಸುರ ತೇಜೋ ಲಿಂಗವೆಂಬಂತೆ || ೪೯ ||

ಸತಿ ಚಂದ್ರಮತಿಯು ಭೂ |
ಪತಿ ಹೊಯ್ದು ಗಾಯದಿ |
ಶಿತಿಕಂಠ ಮೊಗದೋರಿದಂತೆ ||
ಸಿತಗ ಜೈನರು[1] ಕುಂಭ[1] |
ಯುತ[2] ಸರ್ಪ[2]ದೋಲ |
ಪ್ರತಿಲಿಂಗ ದಾಸಗಾದಂತೆ || ೫೦ ||

ಉಳಿಯು ಮೊನೆಯೊಳಾ |
ಗಳೆ ಧೂಳಯ್ಯಗಳಿಗ |
ಮಳ ಲಿಂಗ ಕಾಣಿಸಿದಂತೆ ||

---

1_ಸರ್ಪ 2_ಕುಂಭ (ಇ.)

ಸಳೆದು ತೆಗೆಯೆ ಬಲೆ ।
ಯೊಳಗತಿಭಕ್ತಗಂ ।
ದೆಳೆವೆರೆಧರದೋರ್ದಂತೆ ॥ ೫೧ ॥

ಉರಿಲಿಂಗದೇವರ ।
ತ್ತುರೆ ಪೆದ್ದಣ್ಣಯ್ಯನ ।
ಕರದ ಜ್ಯೋತಿರ್ಲಿಂಗದಂತೆ ॥
ಭರದಿ ಚಿಕ್ಕಲೆದೆಗ ।
ದಿರದಿವಾಚಾರ್‍ಯ ಭೀ ।
ಮರಸನ ಕೈಯ ಲಿಂಗದೊ[1]ಲು[1] ॥ ೫೨ ॥

ಮಿಸುಗುವ ನಿಶಿತ ಕೂ ।
ರಸಿಯ ಮೊನೆಗೆ ಸಿ[2]ಕ್ಕ[2] ।
ಶಶಿ ರವಿ ಕೋಟಿ ಕಾಂತಿಯನು ॥
ಮಸುಳಿಪವಮಲತರ ।
ವೆನೆವ ಲಿಂಗವ ಕಾಣು ।
ತೆನೆವಾಶ್ರು ಪುಳಕ ಕಂಪನದಿ ॥ ೫೩ ॥

[3]ತೆಗೆದು ಮೊಗದು ಕರ ।
ಯುಗದಿಂದ ಬಿಗಿಯಪ್ಪಿ ।
ಬಗೆವೆಚ್ಚಿ ಲಿಂಗದ ಬಸುರ ॥
ಬಗಿದು ತಳಿಂಕದಿಂ ।
ಪೊಗುವೊಲುಜ್ಜಗಿಪ ಸಂ ।
ದೆಗವನುಳಿದು ಭೈರವಾಂಕ । ॥ ೫೪ ॥

---

1-ಲಾಗ (ಇ)  2-ಲ್ಕಿ (ಕ.)  3-ನೆ (ಇ.)

ಅರಿಯಮ್ಮ ಕೋಳೂರ ।
ತರಳೆ ಸತ್ಯಕ್ಕ ಭಾ ।
ಸುರತರ[1]ದೆಸೆ[1]ವ ಸೋಹಳೆಯು ॥
ನಿರುತ ಸೋಮವ್ವೆಯು ।
ಪರಿಯಂತೆ ಲಿಂಗದಿ ।
ಬೆರಸುವ ಬಗೆಯು ಜಾನಿಪನು ॥ ೫೫ ॥

ನೋಡುವನಮದುರ್ಗ ಮುಂ ।
ದಾಡುವ ನಿಮಿದುರ್ಗ ಕೊಂ ।
ಡಾಡುವ ಕುಕಿಲಿಟ್ಟು ಕುಣಿವ ॥
ಕೂಡೆ ತತ್ಸುಖದೊಳೋ ।
ಲಾಡುತಿರಲು ಕಂಡ ।
ರೂಢೀಶನಾ ರಾಮರಾಜ ॥ ೫೬ ॥

ಪೊಡೆಗೆಡದನು ಭಕ್ತಿ ।
ವಿಡಿದು ಭೈರವರಾಜ ।
ನಡಿಗಳಿಗಾ ರಾಮರಾಜ ॥
ಒಡನೆದ್ದು ಭಾಪುರೆ ।
ನ್ನೊಡೆಯ ಧನ್ಯನದಾವ ।
ಪೊಡವಿಯೊಳೆನ್ನೊಲೆಂದಾಗ ॥ ೫೭ ॥

ಅಂದಳದೊಳಗಿಟ್ಟು ।
ಮುಂದೆ ಗೋವಳ ಗೊಲ್ಲ ।
ರಂದದಿ ಜಯ[2]ಜೀ[2]ಯ ಎನುತ ॥

---

1_ಧೇನು (ಇ.), ದೇವನು (ಗ.)  2 ಜ (ಉ, ಎ.)

ಮಂದಿ ಕುದುರೆಯಾನೆ ।
ಸಂದಣಿ ಬಹುವಾದ್ಯ ।
ದಿಂದಲೈತಂದ ತತ್ಪುರಕೆ || ೫೮ ||

ಸಿಂಗರಗೆಯ್ದಿನ ।
[1]ದಿ[1]ಂಗಳ ಬೀದಿಯೊಳ್ ।
ಪೊಂಗುತಲುಳಿಯುಮೇಶ ||
ಲಿಂಗದಲ್ಲಿಗೆ ಬಂದು ||
ಪಿಂಗಲಾರದೆ ಭೈರ ।
ವಂಗಿತ್ತ ನೃಪ ಬಕುತಿಯುಲಿ || ೫೯ ||

ಧನ ಧಾನ್ಯ ವಸ್ತ್ರ ವಾ ।
ಹನ ಪರಿಚಾರಕ ।
ರನು ಗೃಹ ಕ್ಷೇತ್ರವೆಲ್ಲವನು ||
ವಿನಯದೊಳ್[2]ತ್ತು[2] ಭೂ ।
ವನಪಾಲ ಪೋಗೆ ಸಂ ।
ಜನಿಸುದುದ ಶರೀರ ವಾಕ್ಕು || ೬೦ ||

ಮಾಕಾಂತ ನಮಿತನಂ ।
ದೇಕಾಂತರಾಮಯ್ಯ ।
ಗಾಕಸ್ಮಿತದಿ ನುಡಿದಂತೆ ||
ಪ್ರಕಟವೆನೆಯಲಂ ।
ಬಾಕಾಂತನ ಶರೀರ ।
ವಾಕ್ಕಾಗಿ ಪಗಲ್ಮೊಣೆಯಾಂಡಿ || ೬೧ ||

---

1 ತಿ (ಇ, ಉ, ಕ)  2-ತ್ತ (ಕ, ಜ.)

ಗುಸುರ್ದಂತೆ ಚೊಕ್ಕನಾ |
ಗೇಸೆವ ನರಿಯ ಹರಿ |
ವಿಸರ ಮಾ[1]ಡೆಂದುಸುರ್ದ[1]ಂತೆ ||
ಪಶುಪತಿಯಿಹ ರಾವ |
ನೊನೆದೊಕ್ಕಲಿಗಮುದ್ದ |
ಗಸಮಲೋಚನ ಪೇಳಿದಂತೆ || ೬೨ ||

ಕರಿಕಂಠನಾ ಕುಲ |
ಕ್ಕರಿಯುಗೆ ಶೂಲವ |
ನೆರೆ ರಚಿಸೆಂದುಸುರ್ದಂತೆ ||
ಬಿರುದನಿಯಿಂ ಧರ್ಮ |
ಗುರೆ ಸಾರಿ ದೃಷ್ಟವ |
ಮೆರದ ಖಚರ ವಾಕ್ಕಿನಂತೆ || ೬೩ ||

ಗುರುವಂಗಿ ಸಾಗಲ |
ಪುರದಿಂದಲೈತಂದು |
ಕರಪೀರಕೀವೆ ಲಿಂಗನನು ||
ಇರದೆ ನೀಪೋಗು ನುಂ |
ದಿರಕೆಂಬ ನುಡಿಗೇಳಿ |
ಹರ ಹರೆನುತ ನಡೆತರಲು || ೬೪ ||

ಬರೆ ಕಾಣುತಿದಿರೆದ್ದು |
ಚರಣವ ತೊಳೆದು ಕು |
ಳ್ಳಿರಲಿತ್ತು ರಸರಸಾಯನವ ||

---

1. ಡಿಯೆಂಬ (ಇ, ಉ, ಎ, ಕ, ಚ, ಟ)

ಭರದಿ ತಂದಿರಿಸೆ ಶಂ |
ಕರ ಪೂಜೆಗೆಯ್ದು ನಾ |
ಪರಮನೊಕ್ಕುದನಲ್ಲದೊಲ್ಲೆ || ೬೫ ||

ಎಂಬ ನುಡಿಗೆ ಹರು |
ಷಂಬೋಗಿ ಮಹಾದೇವಿ |
ಯಂಬು ಗಂಧಾಕ್ಷತೆ ಕುಸುಮ ||
ತಾಂಬೂಲಾದಿಯನಿ[1]ತ್ತು |
ತ್ರ್ಯ[1]ಂಬಕನರ್ಚಿಸೇ |
ಳೆಂಬವಳೊಡನೆ ಇಂತಲ್ಲ || ೬೬ ||

ಸಾಸಲಪುರದ ಸೋ |
ಮೇಶನಾಳಿನ ಮಾಘ |
ಮಾಸದುತ್ತಮ ಬಹುಳಾಮಾ ||
ವಾಸೇಂದು ವಾರದೊಳ್ |
ತಾ ಸದುಗು[2]ರು ಸೀ[2]ವಿ |
ಲಾಸದಿ ಬಂದೆನ್ನ ಭವವ || ೬೭ ||

ಪರಿದಪೆನೆಂದನಾ |
ಕುರುಹುಗಾಬನ್ನಕೊಂ |
ದರ ಹಂಗು ಬೇಡೆಂಬ ತನ್ನ ||
ಎರಮನಿಚ್ಚೆಗೆ ಸಂದು |
ನೆರೆ ಹಸು ತೃಷೆಗಳ |
[3]ಮ[3]ರದುಪವಾಸಿಗಳಾಗಿ || ೬೮ ||

1-ತ್ರಿ | ಯ (ಕ, ಗ, ಟ) 2 ರ್ಗ (ಉ, ಎ), ಮಿನ (ಇ.) 3-ಪ್ಪ (ಇ.)

ತನುವ ದಂಡಿಸಿ ತವ್ಮ್ನ |
ಮನವ ಶ್ರೀ ಗುರು ಪಾದ |
ವನಜದೊಳಿಟ್ಟು ಜಾನಿಸಲು ||
ಕನಸು ಪ್ರಸಾದ ವಾ |
ಕ್ಕಿನ ಸೋಮನಾಥ ಭೋಂ |
ಕನೆ ಹಾಲ ಸೋಮೇಶನೆಂಬ || ೬೯ ||

ನಾಮದಿಂ ಗುರು ರೂಪ |
ನಾಮಯ ತಾಳ್ದು ಬಂ |
ದಾ ಮಹಾ ಭೈರವಾಂಕನಿಗೆ ||
ಪ್ರೇಮದಿಂ ಮೊಗದೋರೆ |
ಶ್ರೀ ಮಹಾದೇವ ಮತ್ |
ಸ್ವಾಮಿಯೆಂದಡಿಗಳಿಗೆರಗಿ || ೭೦ ||

ಉನ್ನತಾಸನವಿತ್ತು |
ಪನ್ನಳಿನವತೊಳ |
ದೆನ್ನಾಳ್ದ ಬಳಲಿದಿರೆಂದು ||
ನನ್ನಿವಾತಿಂದ ಕೇ |
ಳ್ದಿನ್ನೆತ್ತಣಿಂ ಬಂದಿ |
ರೆನ್ನುತ ಭೈರವರಾಜ || ೭೧ ||

ಎನೆ ಪೇಳ್ವೆ ಮಗನೆ ಕೇ |
ಳನ[1]ವ[1]ದ್ಯನಗಣಿತ |
ಚಿನುವ ಯಾನಂತನಪ್ರತಿಮ ||

---

1. ಮ್ಯ (ಗಾ.)

ಮನುಮಥ ಪುರ ಕಾಲ |
ವನ ವೀತಿಹೋತ್ರನೆಂ |
ದೆನಿಪ ಸೋಮೇಶ ಪ್ರಾರ್ವದಲಿ || ೭೨ ||

ಮನುಜರೆಲ್ಲರ ಭವ |
ವನಧಿಗೆ ವಡಬನೆಂ |
ದೆನಿಸುವಾಚಾರ್ಯಸೋರ್ವನನು ||
ಮನವಾರೆ ಪಡದಪೆ |
ನೆನುತಾಗ ಸೋಮೇಶ |
ನೆನೆದನು ತನ್ನ ಚಿದಂಶ || ೭೩ ||

ಸಾಸಿರದೊಳಗೊಂದು |
ಲೇಸೆನಿಸುವ ಸದ್ವಿ |
ಲಾಸವನೊಡಗೂಡಿ ಸೋಡಿ ||
ಭಾಸುರ ಮೂರ್ತಿಯು |
ಲ್ಲಾಸವಾಗಿರೆ ಪಂಡಿ |
ತೇಶನೆನಿಪ ನಾಮವಿತ್ತು || ೭೪ ||

ಪೋಗು ಪುರ್ತ್ಯದೊಳೋರ್ವ |
ಶ್ರೀಗಧಿನಾಥ ಶೈ |
ವಾಗಮುಸಿದ್ಧ ವಿರುದ್ಧ ||
ಭೋಗಿ ಸಂತತವನು |
ರಾಗಿಯತ್ಯನುಪಮ |
ಚಾಗಿಯೆನಿಪ ಚರಿಯಾ[1]ತಿ[1] || ೭೫ ||

---

1-ಗಿ (ಇ.)

ನೃಪನ ಕುವರಿ ಚಾರು |
ಚಪಲ ಲೋಚನೆಯಿಂದು |
ಲಪನೆ ಸುಕನ್ನಿಕೆಯುಗ್ರ ||
ತಪಮಿರುತೆನ್ನ ಬ |
ಯುಪಳವಳಿಷ್ಟವಿ |
ತ್ತುಪದೇಶವೀ ಮರ್ತ್ಯರ್ಕ್ಕೆಲ್ಲ || ೭೬ ||

ಎಂದು ಬೀಳ್ಕೊಟ್ಟು ಬಾ |
ಲಿಂದು ಶೇಖರ ಭೂಗೆ |
ಬಂದನು ಪಂಡಿತಾರಾಧ್ಯ ||
ಮುಂದೆ ತಪೋವೇಷ |
ದಿಂದಿರ್ಪ ಕನ್ನಿಕೆ |
ಯಂದಗಂಡತಿ ಬೆರಗಾದ || ೭೭ ||

ಹರನ ಸಾಮರ್ಥ್ಯದ |
ಕರುವಾದ ಪಂಡಿತೇ |
ಶ್ವರ ತಾನೆ ಪ್ರತ್ಯಕ್ಷವಾಗಿ ||
ತರುಣಿ ನೀಂ ಬೇಡಿದ |
ವರವೀವೆನೆನೆ [1]ನೀನೆ[1] |
ಪುರುಷನಾಗೆನಲೆನ್ನಲೊಡನೆ || ೭೮ ||

ಆವಳಿಷ್ಟವಿತ್ತ[2]ನು[2] |
ತ್ಸವ ಮಿಗಿಲೆಂಬುದ |
ಭುವನ ವಲ್ಲ[3]ಭ[3] ಚರಿಯಾತಿ ||

---

1 ಎಂದೆನಲಾಗ (ಕ.)   2 ನು (ಅ)   3 ಭೂ (ಕ, ಚ.)

ನೃವರ ಕೇಳುತ ವೈ |
ಭವದೊಳಾಗಳೆ ತನ್ನ |
ಕುವರಿಯನಿತ್ತ ಭಕ್ತಿಯಲಿ || ೭೯ ||

ಸತಿಪತಿಗಳು ಶಿವ |
ರತಿಯೊಳ್ ಪರಾನಂದ |
ಯುತರಾಗಿ ಜಗದಘ ವನಕೆ ||
ಹುತವಹರೆನಿಸಿ ವಿ |
ಶ್ರುತ ಕೀರ್ತಿವಡೆಯೆ ಪೆ |
ರ್ಚಿತು ಬಳಿಕವರ ಸಂತಾನ || ೮೦ ||

ರಾಮನಾಥನು ಸಿದ್ಧ |
ಸೋಮೇಶನಭಿನವ |
ಭೀಮೇಶ ಗುರು ಶಂಕರೇಶ ||
ವಾಮದೇವಾರ್ಯನು |
ದ್ದಾಮ ಪ್ರಭಾತಯ್ಯ |
ನಾಮಹಾ ಶಿವಶಾಸನಯ್ಯ || ೮೧ ||

ಭಾನು ಪ್ರದ್ಯೋತಯ್ಯ |
ಸಾನಂದ ಗುರು ಶಿವ |
ಜ್ಞಾನದಾಯಕ ಮಂತ್ರ ಮೂರ್ತಿ ||
ಶ್ರೀ ನಂದಿ ಪ್ರಭುಗಳೀ |
ಶಾನದೇವರು ಸಚ್ಚಿ |
ದಾನಂದದೇವ ಸದ್ಭಾ[1]ವ[1] || ೮೨ ||

---

1. ವಿ (ಇ.)

ವೀರಭದ್ರಯ್ಯ ಪು |
ರಾರಿದೇವಯ್ಯನು |
ದಾರಿ ಸೋ[1]ವಣ್ಣೆಮನಾ[1]ರಾಧ್ಯ ||
ಚಾರು ಪಶುಪತಿಗಳಾ |
ಚಾ[2]ರ್ಯ[2]ರೂಪಾಗಿ ವಿ |
ಹಾರಿಪ ನೀಲಕಂಠಯ್ಯ || ೮೩ ||

ಮುಂತಾದವರ ವಂ |
ಶಾಂತರದವರುಗ |
ಳುಂ ತವೆ ಸೌರಾಷ್ಟ್ರಪುರದಿ ||
ಸಂತವಿರುತ ದೀಕ್ಷ |
ಯಂ ತಡೆಯದೆ ಕೊಟ್ಟ |
ರಂತೊಡನಾದಿಮಯ್ಯನಿಗೆ || ೮೪ ||

ಆದಯ್ಯ ಸೌರಾ |
ಷ್ಟ್ರಾಧಿಪತಿಯು ಜಿನ |
ವಾದದಿ 'ಪು[3]ಲಿ[3]ಕರಪುರಿಗೆ ||
ತಾ ದಿಟ ತರಲಲ್ಲಿ |
ಗಾ ದಿನ ಬಂದೆಲ್ಲ |
ಕಾದಿ ಶೈವಾನುಗ್ರಹವನು || ೮೫ ||

ಶ್ರವಣರೆಲ್ಲರಿಗೀಯೆ |
ಶಿವಭಕ್ತರಾದರಂ |
ತವರ ಕೈಯೊಳಗದ ಕಂಡು ||

---

1-ಮುಣ್ಣಮಾ (ಅ, ಇ, ಉ, ಎ, ಕ, ಗ, ಚ, ಟ.) 2-ರ (ಕ.) 3 ವಿ (ಉ.)

ಭುವಿಯ ಜನಂಗಳು |
[1]ತ್ರ[1]ವಿಸುತ್ತಿರಲು ಪೆರ್ಚಿ |
ತವರೂರು ಸಂಪ್ರದಾಯಕರು || ೮೬ ||

[2]ಶ್ರೈ[2]ವಾಗ್ರಗಣ್ಯರು |
ಶ್ರೈವರು ಪುಣ್ಯರು |
ಶ್ರೈವಾಗಮಾದಿ ತತ್ಪರರು ||
ಶ್ರೈವ ಸದ್ಗುಣ್ಯರು |
ಶ್ರೈವವರೇಣ್ಯರು |
ಶ್ರೈವ ಸಾಮ್ರಾಜ್ಯ [3]ವಿಸ್ತ[3]ರರು || ೮೭ ||

ಆರ್ಯರ್ ಶಿವಾನಂದ |
ವಾರ್ಯರ್ ಸುಲಕ್ಷಣ |
ಕಾರ್ಯರ್ ಕಾಮಾದಿ ಷಡ್ವರ್ಗ ||
ದೂರ್ಯರ್ ಸದಾಚಾರಾ |
ಧಾರ್ಯರ್ ಪಾಪೌಘ ಸಂ |
ಹಾರ್ಯರ್ ಉದಾರ್ಯರ್ ಧೈರ್ಯರು || ೮೮ ||

ಆದ್ಯರನಘರನ |
ವದ್ಯರು ವೇದಾಂತ |
ವೇದ್ಯರು ಸಚ್ಚಿದಾನಂದ ||
ಹೃದ್ಯರು ತತ್ವಾರ್ಥ |
ಬೋಧ್ಯರೆಂದೆನಿಸುವಾ |
ರಾಧ್ಯಪುಂಗವರುರು ಕೀರ್ತಿ || ೮೯ ||

---

1. ಚ್ಛ (ಇ.)   2. ಶಿ (ಎ.)   3. ನಿಷ್ಠ (ಗ.)

ಭುವನವೆಲ್ಲವ ನೆರೆ ।
ಧವಳಿಸುತ್ತಿರಲಿತ್ತ ।
ಲವನಿಗಧಿಕ ಸಾಸಲೊಳಗೆ ॥
ಗವರೆಯು ಕೈಗತ್ತಿ ।
ಶಿವನ ಮುಂಡೆಯು ತಾಗೆ ।
ನವಸುಧೆ ಸೂಸಿತೆಂಬುದನು ॥ ೯೦ ॥

ಕೇಳುತ್ತದೆಂತೆಂತು ।
ಪೇಳೆಂದು ಮತ್ತೊಮ್ಮೆ ।
ಕೇಳುತ್ತ ಹರುಷರಸದೊಳು ॥
ಆಳುತ್ತ ಶಿರವನಾಂ ।
ದೋಳಿಸುತಾಶ್ಚರಿ ।
ಏಳಿಗೆಯಿಂದುಸುರಿದ[1]ರು[1] ॥ ೯೧ ॥

ಕೆರಹುಗಾಲೊಳು ವ್ಯಾಧ ।
ನೊರಸೆಯೊಡದುದಿಲ್ಲ ।
ವರ ದಂ[2]ಡಿ[2]ಯೆನಿಪ್ಪೋರ್ವ ಕುಸುಮ ॥
ಕರಡಿಗೆಯೊಳು ಕೋಪ ।
ವೆರಸಿ ಪೊಡೆಯೆ ಶಿರ ।
ಬಿರಿದುದಿ[3]ಲ್ಲ[3]ದು ಕರಚಿತ್ರ ॥ ೯೨ ॥

ಬಿಲ್ಲಲಿ ಹೊಯ್ದು ಕೈ ।
ಬಲ್ಲಿದರ್ಜುನನಿಂದ ।
ವಿಲ್ಲ ಶಿರದೊಳೊಂದು ಗಾಯ ॥

---

1–ಸು (ಗ, ಜ.) 2–ತಿ (ಇ.) 3–ಲ್ಲಿ (ಕ, ಗ, ಜ, ಟ.)

ಕಲ್ಲಲಿ ಸಾಂಖ್ಯನಿ |
ಟ್ಟಲ್ಲಿ ಭಗ್ನತೆಯಾದು |
ದಿಲ್ಲಿಲ್ಲವಿದು ಕರಚೋದ್ಯ || ೯೩ ||

ಕರಿಕಾಲ ಚೋಳ ಭೂ |
ವರನ ಬಲ್ಲಾಳ್ಗಳ |
ಬ್ಬರಿಸಿ ಹೊಯ್ಯ್ವಿಲ್ಲೊಂದು ಗಾಯ ||
ಶಿರವ ತಾಗಿದುದಿಲ್ಲ |
ವಿರತ ಮಾಣಿಕ್ಯವಾ |
[1]ಚ[1]ರು[2]ಹಿ[2]ಟ್ಟಲೊಸದುದಿಲ್ಲಿಲ್ಲ || ೯೪ ||

ಅನ[3]ವದ್ಯ[3]ನನುಗಿದೇ |
ವನ ಹೊರೆಯೊತ್ತಲ್ಲಿ |
ಇನಿಸು ಭಗ್ನತೆಯಾದುದಿಲ್ಲ ||
ಮುನಿದರುಂಧತಿ ಶಿರ |
ವನು ದರ್ವಿಯಿಂ ಪೊಯ್ಯ |
ಲಿನಿಸು ರೇಖೆಯುದಾದುದಿಲ್ಲ || ೯೫ ||

ಸಿರಿಯಾಳಗಡು ಕಬ್ಬ |
ನೆರವಾಗಿ ಹೊತ್ತಲ್ಲಿ |
ಶಿರದೊಳಿನಿಸು ಬುಗುಟಿಲ್ಲ ||
ವರ ಚೋ[4]ರ ಕಲವರ್ತಿ[4] |
ಭರದಿ ಪೊಯ್ಯಲು ಗಾಯ |
ಹರನ ಮಂಡೆಯೊಳಿನಿಸಿಲ್ಲಿ || ೯೬ ||

---

1-ಚ್ಯ (ಅ.) 2 ಪಿ (ಇ, ಉ.); ಮೆ (ಅ.), ಹೆ (ಚ.) 3 ವಿಂದ್ಯ (ಅ.)
4-ಳ ಕರವರ್ತಿ (ಅ, ಇ.)

ಮೋದ[1]ನ[1] ಕೈಗತ್ತಿ |
ಕೇದಗೆ ರಾಜವಾ |
ಣೀಧವರುಗಳಂತಲ್ಲ ||
ಈ ಧರೆಯರಿಯಲೆಂ |
ಬಾ ದನಿ ಪುಟ್ಟಿದು |
ದಾದಯ್ಯಗಳಿ ವಂಶಜರಿಗೆ || ೯೭ ||

ಅವರು ಸಾಸಲ ಸ್ವಯಂ |
ಭುವ ನೋಡಬೇಕೆಂದು |
ಶಿವಭಕ್ತಜನರೊಡಗೂಡಿ ||
ಭುವನ ಪಾವನ ಗೌ |
ರವ [2]ಚಿಕ್ಕಣ್ಣಾರ್ಯ[2] ಬಂ |
ದ[3]ವಸಿ[3]ಗಪ್ರತಿ ಸಾಸ[4]ಲೊಳಗೆ[4] || ೯೮ ||

ರಾಜಿಸುತ್ತಿರಲಿತ್ತ |
ಲಾ ಜಿನಕುಲ ಕೋಟಿ |
ರಾಜೀವ ಷಂಡ ವೇ[5]ತ[5]ಂಡ ||
ಮೂಜಗ ಜನ ಕಲ್ಪ |
ಭೂಜನಾದಯ್ಯ ವಂ |
ಶೋಜ ಚಿಕ್ಕೊಡೆಯರೈತಂದು || ೯೯ ||

ಸಾಸಲ ಶಂಭು[6] ಸೋ |
ಮೇ[6]ಶಾಘ ನಾಶ ಘ |
ಣೇಶ ವಿಭೂಷನಾಕಾಶಾ ||

---

1-ರ (ಉ.) ೨-ನ ಗಾರವ (ಇ.) 3-ನೀ (ಇ) 4-ಲೆನಿಸಿ (ಅ, ಇ, ಉ, ಎ, ಕ, ಟ.
೫-ದ (ಕ, ಟ.) 6-ಸರ್ವೇ (ಅ, ಇ, ಉ, ಎ, ಕ, ಗ, ಜ, ಟ.)

ಕೇಶ ವಾ[1]ಣೀ[1]ಶ ಸಿ ।
ರೀಶ ಶಚೀಶ ಮು ।
ನೀಶ ಗಿರೀಶ ನಮೋ ನಮಸ್ತೆ ॥ ೧೦೦ ॥

ಅಮೃತಾಂಗ ಅಮೃತೇಶ ।
ಅಮೃತ ಭೃತ್ಯಮೃತಾರಿ ।
ಅಮೃತ ತ್ರಯಾತೀತನಮೃತ ॥
ಅಮೃತ ಫಲಪ್ರದ ।
ಅಮೃತ ಶಯಾರ್ದಾಂಕ ।
ಅಮೃತವಿಯೆನಗೆಂಡೆರಗಿದ ॥ ೧೦೧ ॥

ಭವ ಭರ್ಗ ಭಾಳಾಕ್ಷ ।
ಶಿವ ಶಿವಾಧವ ಕೃಪ ।
ಶರ್ವ ನವ ನೋಮ ಕಪರ್ದಿ ॥
ಭುವಿ ಜಲಾನಲಾ[2]ನಿಲ[2] ।
ರವಿ ಸೋಮಾತುಮ ನಭ ।
ದವಿರಳ ಕಾಯ ಸಿರ್ಮಾಯ ॥ ೧೦೨ ॥

ಕಾಲಕಂಧರ ಕಾಲ ।
ಕಾಲ ದಿಕ್ಚೇಲ ಪ್ರೊ ।
ಗೋಲಾರಿ ಸೂರಿ ಸಂಸಾರಿ ॥
ವ್ಯಾಲಕಟಕ ಸೋಮ ।
ಜ್ವಾಲಿಕ ನೇತ್ರ ಶುಂ ।
ಡಾಲಾಜಿನಾಂಬರ ಜಯತು ॥ ೧೦೩ ॥

---

1-ಗೀ (ಇ.) 2-ನಿಂ (ಇ.)

ಜಯ ಜನ್ಮದೂರ ನಿ |
ರ್ಭಯ ನಿರುಪಮ ನಿರಾ |
ಶ್ರಯ ನಿರವದ್ಯ ¹ನಿರ್ಲೇಪ¹ ||
ಭಯ ವಿದಾರಣ ಕಾಲ |
ತ್ರಯ ವಿನಾಶನ ²ತ್ರೈ² |
ತ್ರಯ ನುತ ಮಾಂ ತ್ರಾಹಿ ಎಂದು || ೧೦೪ ||

ಕೀರ್ತಿಸುತ್ತಿರೆ ಸಮ |
ವರ್ತಿ ಮರ್ದನ ಪುಣ್ಯ |
ಮೂರ್ತಿ ಶರಣ ಸಹವರ್ತಿ ||
ಪಾರ್ಥನಿಷ್ಟಾರ್ಥ ಸಂ |
ಪೂರ್ತಿ ನಿರ್ಜರ ಚಕ್ರ |
ವರ್ತಿಯೆಂದಿರದೆ ಪೊಗಳಿದ || ೧೦೫ ||

ಅಂಗಜಹರ ಶಂಭು |
ಲಿಂಗನ ಪದ ಪದ್ಮ |
ಭೃಂಗನೆನಿಪ ಚಿಕ್ಕಣ್ಣಾರ್ಯ ||
ಹಿಂಗದಲ್ಲಿರುತವ |
ನಂಗಾರಿ ಸೋಮೇಶ |
ಲಿಂಗನ ಪದವ ಜಾನಿಸುತ || ೧೦೬ ||

ಶಿವರಾತ್ರಿಯೊಳು ಪೋಗಿ |
ಸೌರಾಷ್ಟ್ರಪತಿಯ ಪಾ |
ದವ ಕಂಡು ವರುಷಕ್ಕೊಮ್ಮೊಮ್ಮೆ ||

---

1-ನವದ್ಯ (ಉ, ಎ, ಗ.) ; ನ ಭೇದ್ಯ (ಕ.)  2-ತ್ರಯ (ಅ. ಕ.)

ಅವರು ಬರಲು ಶಿವಾ |
ಧವ ಸೋಮನಾಥನಂ |
ತವರ ಮೇಲಣ ಕೃಪೆಯಿಂದ || ೧೦೭ ||

ಬಂದು ತಾಪಸ ರೂಪಿ |
ಲೆಂದನಾದಯ್ಯನ |
ಹಿಂದೆ ಸೌರಾಷ್ಟ್ರ ಸೋಮೇಶ ||
ಬಂದಂತೆ ನುಲಿಯ |
ಚಂದಯ್ಯನೊಡನೇ |
ಳ್ತಂದಂತೆ ಬಹೆನಿದು ನಿನ್ನ || ೧೦೮ ||

ಮಗನೆ ಸೊಡ್ಡಳ ಬಾಚ |
ಯ್ಯಗಳ ವಾದ ನಿಮಿತ್ತ |
ಬಗೆವೆಚ್ಚಿ ಸೌರಾಷ್ಟ್ರದಿಂದ ||
ಸೊಗ ಸೊಗೆವಂತೆ ಬಂ |
ದೊಗೆದೆ ಕೊರಾರದೊಳ್ |
ಜಗವೆಲ್ಲವಿದು ಚೋದ್ಯವೆನಲು || ೧೦೯ ||

ಸಿರಿಗಿರಿ ಮಲ್ಲೇಶ |
ಗುರು ಸಿದ್ಧರಾಮನ |
ಪುರಕ್ಕೈದಿ ಬಂದು ನಿಂದಂತೆ ||
ಪರವೆ ಸೌಂದರರು ಕಂ |
ಮರಲ್ಗುಪ್ಪೆಯಲಿ ಶಂ |
ಕರನ ಭಾವಿಸೆ ನೆಲಸಿದೊಲು || ೧೧೦ ||

ಭೋಗಣ್ಣನ ಪಿಂದೆ |
ಬೇಗಲೈತಂದಂತೆ |
ರಾಗದಿಂ ಕೋವೂರ ಬ್ರಂಹ ||
ಕೂಗಿ ಕರೆಯಲಿದಿ |
ರಾಗಿ ಬಂದಂಬುದಾ |
ರಾ ಗುರು ರಾಮೇಶನಂತೆ || ೧೧೧ ||

ಮ[1]ಲ್ಲ[1]ಶೆಟ್ಟಿಯು ಬಳ್ಳ |
ದಲ್ಲೀಶನೊಗೆದಂತೆ |
ಗೊಲ್ಲಾಳ ಕುರಿಯ ಹಿಕ್ಕೆಯೊಳು ||
ಸಲ್ಲೀಲೆಯಿಂದುಮಾ |
ವಲ್ಲಭ ಎನೆ ಕೇಳು |
ತಲ್ಲಿ ಪ್ರತ್ಯಕ್ಷವಾದಂತೆ || ೧೧೨ ||

ಮಳಲೊಳು ಚಂಡೇಶ |
ಗೆಳಸಿ ಪ್ರ[2]ತ್ಯಕ್ಷ[2]ವಾ |
ದೆಳೆವೆರೆಧರನಂತೆ ನಿಮ್ಮ ||
ಛಲ ನಿಮಿತ್ತಂ ಹರ |
ನೊಲಿದು ಬಂದೀ ಕ್ಷೇತ್ರ |
ದಲಿ ನೆಲಸುವನಿದು ನಿಸ್ಸಿ || ೧೧೩ ||

ಬಂದಪನೀಗ ನೀ |
ನೊಂದು ಗೃಹವ ರಚಿ |
ಸೆಂದು ತಾಪಸ ಮಾಯವಾಗೆ ||

---

1–ಲ್ಲಿ (ಕ, ಚ.)    2–ಸನ್ನ (ಅ, ಇ, ಉ, ಕ, ಗ, ಜ, ಟ.)

ಸಂದಣಿಸುವ ಪುಳ |
ಕಂ ದಳವೇರುತಾ |
ಗೊಂದಾಲಯುವ ರಚಿಸಿದರು ‖ ೧೧೪ ‖

ಶಿವಶಕ್ತಿಯೊಂದುಗೂ |
ಡುವಲ್ಲೊಂದು ಪೀರದೊಳ್ |
ಶಿವನ ತಂದಿಂಬಿಟ್ಟು ಬಳಿಕ ‖
ನವ ಪೂಜಾರತಿಯೊಳ |
ಗವಿರತವಿರಲಿತ್ತ |
ಲವರ ಬೆಳ್ಗಸ ಪಸರಿಸಿತು ‖ ೧೧೫ ‖

ಸಿರಿಗಿರಿ ಕಾಶಿಯು |
ಪುರ ಕಂಚ್ಯಿ ರಾಮೇ |
ಶ್ವರ ಹಂಪೆ [1]ಸೌರಾಷ್ಟ್ರಪುರವು[1] ‖
ಅರುಣಾದ್ರಿ ಕೇತಾರ |
ತಿರುಕಾಳ ಹ[2]ಸ್ತಿ[2]ಯೊಳ್ |
ದೊರೆಯಾಗಿ ಸಾಸಲೊಪ್ಪಿಹುದು ‖ ೧೧೬ ‖

ವೀರಶೈವಾಚಾರ |
ಸಾರ ಸನ್ಮುಕ್ತಿ ವಿ |
ಚಾರತೆ ಮನವನಳ್ಳಿರಿದು ‖
ಮಾರ ಮಥನ ಸೋಮ |
ಧಾರಿಯೆನಗೆ ಗುರು |
ವಾರೆಂಬ ಚಿಂತೆ ಶಂಕರನ ‖ ೧೧೭ ‖

---

1–ಹಲ ಹಾಲ ಹಲವು (ಇ, ಉ, ಎ, ಕ.) 2–ತಿ (ಇ, ಉ, ಕ, ಗ, ಚ, ಜ, ಟ.)

ಮುಟ್ಟಿ ಶ್ರೀ ಗುರು ರೂಪ |
ತೊಟ್ಟು ಬರಲು ಪೊಡ |
ಮಟ್ಟು ಚಿಕ್ಕೊಡೆಯರ ಶಿರದೊಳು ||
ಇಟ್ಟು ಕರವ ಮನ |
ದಿಷ್ಟವ ತೆಗೆದುರೆ |
ಕೊಟ್ಟು ಸು ಮಂತ್ರವರುಪಿದ || ೧೧೮ ||

ಬಸವರಾಜನಿಗೆ ಸಂ |
ತಸದಿ ದೀಕ್ಷೆಯನಿತ್ತು |
ಅಸಮ ಕೂಡಲ ಸಂಗನಂತೆ ||
ವಿಸುಪಾನುಗ್ರಹವ ತಾ |
ಪಸ ಸಿದ್ಧರಾಮನಿಗಿ |
ತ್ರಿಸಿವ ಶ್ರೀಗಿರಿನಾಥನಂತೆ || ೧೧೯

ಸುಲಲಿತ ಮಾಚಯ್ಯ |
ಗೊಲಿದು [1]ಪಿ[1]ಪ್ಪಲಿಗೆಯ |
ಕಲಿನಾಥ ದೀಕ್ಷೆಯಿತ್ತಂತೆ ||
ಫಲದ ಶಂಕರದಾಸ |
ಗಲಘು ದೀಕ್ಷೆಯನಿತ್ತ |
ಮಲ ಶಂಕರೇಶ್ವರನಂತೆ || ೧೨೦ ||

ನಿನಗೆ ನಾ ಗುರು ನೀ ಭೂ |
ಜನಕೆಲ್ಲ ಗುರುವೆಂದು |
ಚಿನುಮಯ ನೋೞವೋಜ ಜಿಸನೆ ||

---

1-ಹಿ (ಬ, ಕ.)

ಘನ ಗುರುಭಕ್ತ್ರಯ್ಯ |
ನನಘ ಬಿಲ್ಲಮುಸು ಪಾ |
ವನ ಶೀಲ ಗುರುಭಕ್ತ್ರಾಂಡಾರಿ || ೧೨೧ ||

ಜಾಣ ತ್ರೈವಿಧ ಭಕ್ತಿ |
ಪ್ರಾಣವಾಗಿಪ್ಪ ಸೆ |
[1]ಟ್ಯಾ[1]ಣ ಶೆಟ್ಟಿಯೊಲು ಸುಮಂತ್ರ ||
ಪ್ರಾಣವಾಗೆಸೆವನ |
ಕ್ಷೀಣ ಸದ್ಗುಣಮಣಿ |
ಸಾಣ ಚಿದಂಬರಯ್ಯಗಳ || ೧೨೨ ||

ಗುರುವಿನಾಣತಿಯೊಲೆ |
ಬರೆ ಕಂಡು ಕೈಲಾಸ |
ಪುರಕೆ ಪೋದ ಸ್ಫೂರ್ತಿಯಂತೆ ||
[2]ನಿರು[2]ತ ಶ್ರೀ ಗುರು ಪಾದ |
ಸರಸಿಜದೊಳು ಬೆಚ್ಚು |
ಬೆರಸಿದ ವೇಳ್ಯಾಕ್ತ್ರಯ್ಯಗಳ || ೧೨೩ ||

ವೊಲು ನಿಜ ನಿಷ್ಠೆ ನಿ |
ಶ್ಚಲ ಭಕ್ತಿಯಾಚಾರ |
ಮಲ ದಿವ್ಯ ಜ್ಞಾನವಿರಾಗ ||
ಸಲೆ ಭೂತದಯೆ ಸರ್ವ |
ಕಲೆ ದೊರಕೊಂಡು ಭೂ |
ತಲಕತ್ಯಧಿಕರೆನಿಸಿಪರು || ೧೨೪ ||

---

1 ಟ್ಯಾ (ಇ)     2 ವಿರ (ಅ)

ಶ್ರವಣ ಶಾಕ್ತೇಯ ವೈ |
ಷ್ಣವರೆಯ್ದೆ ಸಮಯವಾ |
ದವ ಮಾಡಿ ಯುಕುತಿ ನಿಲುಕದೆ ||
ತವೆ ಸೋತು ಶಾಸ್ತ್ರ ವಾ |
ದವ ಬಿಟ್ಟು ತೋರಿ ದೃ |
ಷ್ಟವನೆನಲಾವುದೆಂದೆನಲು || ೧೨೫ ||

ಪುರ ಕಾಲ ಕಾಮರ |
ನುರುಪಿತು ಗಡ ನಿಮ್ಮ |
ಹರನಕ್ಷಿಯುದ ತೋರಿಸೆನಲು ||
ಉರಿದು ಪೋಪಿರಿ ಬೇಡ |
ವಿರಹದೊಳೆನೆ ಶಾಂತಿ |
ಕರವಪ್ಪೊಲೆಸಗಿ ನೀವೆನಲು || ೧೨೬ ||

ಅದನೊಡಂಬ[1]ಟ್ಟ[1]ನ |
ಗ್ಗದ ಹರ ಮಹಿಮಾಂ |
ಬುಧಿ ಚಂದ್ರ ಗುರು ಚಿಕ್ಕಣಾರ್ಯ ||
ಮದನ ಮದದ್ವಿಪ |
ವಿದಳನತುಳ ಪಂಚ |
ವದನ ಸೋಮೇಶ ಚಿತ್ತೈಸು || ೧೨೭ ||

ನಿನ್ನುರಿಗಣ್ಣಿನ |
ಪನ್ನತಿಗಿದಿರಾದ |
ವನ್ನರರ್ ವಾದ ನಿಮಿತ್ತ ||

1-ಟ್ಟೆ (ಅ, ಎ, ಗ.)

ಸನ್ನಿಗದಿರನ ವೊ ।
ಲುಂ ನಾಡೆ ಮಾಡಿನೆ ।
ಚೆನ್ನ ಸೋಮೇಶ ಕಣ್ದೆರೆ[1]ದ[1] ॥ ೧೨೮ ॥

ಶಾಂತಾರ್ಕ ಕೋಟಿಯು ।
ಕಾಂತಿಯನುಗುಳುತ ।
ತ್ಯಂತ ಗಂಭೀರ ವೃತ್ತಿಯಲ್ಲಿ ॥
ಸಂತಸಮಿರಲು ಕಾಣು ।
ತಂ ತವೆ ಶ್ರೀ ಪಾದಾ ।
ಕ್ರಾಂತರಾದರು ವಾದಿ ನಿವಹ ॥ ೧೨೯ ॥

ವ್ಮೃಡನ ಭಾಳಾಕ್ಷದ ।
ಕಿಡಿಯಿಂದ ಜಿನ ಬಿಂಬ ।
ವೊಡೆದುದು [2]ವ್ಯಾ[2]ಘ್ರಗೆರೆಯಲಿ ॥
ಕಡು ಮುಳಿಸಿಂ ಕಾಲ ।
ನೊಡಲ ದಳ್ಳಿಸಿ ಹರ ।
ಸುಡೆ ಬೆಂದು ಪೋಪನಂತಲ್ಲ ॥ ೧೩೦ ॥

ಸ್ಮರನ ಸುಟ್ಟುರುಹಿದ ।
ಹರನಕ್ಷಿಯಲ್ಲ [3]ತ್ರಿ[3] ।
ಪುರವನುರುಹಿದ ಕಣ್ಣಲ್ಲ ॥
ಗುರು ಸಿದ್ಧರಾಮೇಶ ।
ನುರಿಗಂಗಳಲ್ಲ ಶ್ರೀ ।
ಚರಣದಿ ಪ್ರಭು ತೋರಿದಂತಲ್ಲ ॥ ೧೩೧ ॥

---

1-ದು (ಅ) 2-ವೆ (ಇ) 3 ತ್ರಿ (ಇ, ಜ.)

ದಾಸಯ್ಯಗಾ ಶಂಕ |
ರೇಶನಿತ್ತ್ರ್ಶಕ್ಷಿಯ |
ಲ್ಲಾ ಸೋ[1]ಯಿ[1]ದೇವರುಹತನಾ ||
ರೋಷದಿಂ ನೋಡಿದ |
ತ್ರ್ಯಾಸುರವನಿಸಿದ |
ಭೀಷಣ ಲೋಚನವಲ್ಲ || ೧೩೨ ||

ಗೋರಕ್ಷಸಿಕ್ಕಿದ |
ಕೂರಿತಪ್ಪಲಗ[2]ಲ್ಲ[2] |
ಮೂರಿ ರೂಪಿನ ತ್ರಿಗುಣ[3]ಗಳ[3] ||
ಘೋರನುರುಪಿದಘ |
ವಾರಣ ಹರಿ ದೇವ |
ಣಾರಾಧ್ಯರಕ್ಷೆಯುಂತಲ್ಲ || ೧೩೩ ||

ಭಕ್ತವತ್ಸಲ ಸದು |
ಭಕ್ತ ಬಾಂಧವ ನಿಜ |
ಭಕ್ತಾನು ಕಂಪಿ ಭಕ್ತ್ಯಾನು ||
ರಕ್ತ ನೋಪೋಶನು |
ವ್ಯಕ್ತವಾಗಿಹ ಕಣ್ಣ |
ಭಕ್ತರಿಚ್ಛೆಗೆ ತೋರಿಸಿವನು || ೧೩೪ ||

ಆರು ದರುಶವದವರ್ |
ನೂರೊಂದು ಕುಲದವರ್ |
ಬೇರಷ್ಟಾದಶ ಜಾತಿಯುವರು ||

1-ಶಿ (ಚ, ಟ.) 2-ಸು (ಕ, ಚ) 3 ಯ್ಯಸು (ಎ)

ಸಾರುವ ಶೃತಿಗೆ ವ್ಯೈ ।
ದೋರದಭವನಕ್ಷಿ ।
ದೋರಿದ ಚಿಕ್ಕಣ್ಣಾರ್ಯನಿಗೆ  ॥ ೧೩೫ ॥

ನತರಾಗಲವರಘ ।
ಲತೆ ಕುಡಿ ಘೇದನೋ ।
ನ್ನತ ಸಂಕುಲವನೆಂದೆನಿಪ ॥
ಕ್ಷಿತಿಜನ ಜನಾರಾಧ್ಯನು ।
ನ್ನತ ಚಿಕ್ಕಣಾರ್ಯನೆ ।
ನ್ನತು[1]ಳಿನಗ್ರ[1]ಜನಾತನಿಂದ  ॥ ೧೩೬ ॥

ಕಿರಿಯನಿನ್ನೊಡನಿನ್ನು ।
ಮರೆಯೇಕೆನ್ನಯ ಪೆಸ ।
ರರಿ ಹಾಲ ಸೋಮೇಶನೆಂದು ॥
ಕರಿಕಂಠ ಸೋಮೇಶ ।
ನರಿ[2]ಪೆ[2] ನಿನ್ನಂತಸ್ತ ।
ವರಿಯ ಬಂದೆನು ಭೈರವಾಂಕ  ॥ ೧೩೭ ॥

ಎನೆ ಬದುಕಿದೆ ಜೀಯ ।
ಘನ ಮಹಿಮಾಂಬುಧಿ ।
ವನಜಾಪ ಹಾಲ ಸೋಮೇಶ ॥
ಎನಗನುಗ್ರಹವ ಮಾ ।
ಡೆನೆ ಭೈರವಾಂಕನ ।
ಮನಕೆ ಸಂತಸವಪ್ಪೊಲಾಗ  ॥ ೧೩೮ ॥

---

1–ತಾಸಂತ (ಕ, ಚ)  2–ಕೆ (ಎ)

ತಳಿರಿಕ್ಷು ತಾಂಬೂಲ |
ಕಲಶ ಕನ್ನಡಿಗೂಡಿ |
ಮಲಯಜಾಕ್ಷತೆ ಧೂಪ ದೀಪ |
ವಿಳಸದುಪಹಾರ ಪೂ |
ಗಳುಸಹಿತ ತೊಳ |
ತೊಳಪ ಲಿಂಗವನಿರಿಸಿದನು || ೧೩೯ ||

ಅಂಬರಮಣಿಯು ಕಂ |
ಡಂಬುಜ[1]ದಂತೆ[1] ಪೂ |
ದೊಂಬೆಯು[2]ಭ್ರಮರ[2]ಕಂಡಂತೆ ||
ಅಂಬುಜರಿಪುವ ನೀ |
ಲಾಂಬುಜ ಕಂಡಂತ |
ಳುಂಬ ಮಾನಸ ಗುರುರಾಯ || ೧೪೦ ||

ಆ ಲಿಂಗವನು[3]ಕಾಣು[3] |
ತಾಲಿಂಗನವ ಮಾಡಿ |
ಹಾಲ ಸೋಮೇಶ ಕೇ[4]ಳ್ಕಗನೆ[4] ||
ಆಲಿಸಿದರಿಮೂಲಾ |
ಮೂಲ[5]ವನೆನುತ[5] ಸ |
ಲ್ಲೀಲೆ ಮಿಗಿಲು ಕೇಳುತಿರ್ದ || ೧೪೧ ||

ಹರನೊಲಿದಿಹ ಮೇರು |
ಗಿರಿಯ ತಪ್ಪಲೊಳಿಪ್ಪ |
ವರ ದೀರ್ಘಶೃಂಗ ಮುನೀಂದ್ರ ||

---

1-ದೊಲು (ಉ, ಎ, ಕ.) 2-ಬಸಳ (ಇ, ಉ, ಎ, ಕ, ಗ, ಟ.) 3-ಕಂಡಾ (
4-ಳಿನಗೆ (ಇ) 5-ಘೇದವನು (ಎ.)

ಪರಮ ತಪೋಭರ |
ಭರಿತನಾಗಿರಲಲ್ಲಿ |
ಗೆರಲೆವೇಂಟೆಯನಾಡಲೆಂದು || ೧೪೨ ||

ಬಂದು ಖೇಟಕನೆಂಬ |
ಗಂಧರ್ವ ತೋಹಿನೊಳ್ |
ನಿಂದೊಂದು ಹುಲ್ಲೆಯನೆಸಲು ||
ನೊಂದು ಹೊಮ್ಮಿರಿದೋ[1]ಡಿ[1] |
ಪಿಂಡೈದಿ ಬರಲವ |
ನಂದು ಬಿದ್ದುದು ಮುನಿಯಿದಿರ || ೧೪೩ ||

ಏಣನ ಮುನಿನಾಥ |
ಕಾಣುತ [2]ಒ[2]ಂದು [3]ಪೆಂ |
ಬೂ[3]ಣಿಸಿ ನಿಂದ ಖೇಟಕನ ||
ಕಾಣುತೆಲವೊ ನೀನು |
ಏಣನಾಗದರಿಂದ |
ಪ್ರಾಣವ ಬಿಡು ನಡೆಯೆಂದ || ೧೪೪ ||

ನಡ ನಡ ನಡುಗಿ ಕಂ |
ಗೆಡುತ ಮುನೀಶ್ವರ |
ನಡಿಗೆ ಮಣಿವುತೆಲೆ ದೇವ ||
ಕಡೆಗೆ ಬಂದೀ ಶಾಪ |
ಗಡೆಯ ನಿರೂಪವ |
ಕೊಡಬೇಹುದೆನಲು ಮಾರ್ನುಡಿದ || ೧೪೫ ||

---

1-ಡೆ (ಉ, ಕ.) 2-ನಿ (ಅ, ಇ, ಎ, ಕ, ಗ, ಚ.), ನೊ (ಉ.) 3 ಪಿಂ । ಬಾ (ಅ, ಇ, ಎ, ಚ )

ಎರಲೆಯಾಗಿಯೆ ಪುರ |
ಹರನ ಧ್ಯಾನವ ಮಾಡು |
ತಿರು ಮರ್ತ್ಯದಲ್ಲಿ ಮತ್ತೋರ್ವ ||
ಶರಣನೈದನೆ ಪುಷ್ಟಿ |
ತ್ವರಿತದೊಳವ ನಿನ್ನ |
ಹರಿಸುವನೆನಲಾತನಾರು || ೧೪೬ ||

ಎಂದು ಕೇಳಲು ಪೇಳ್ದ |
ನಿಂದುಶೇಖರಗೆ ನಾ |
ರಂದನೈತಂದು ವೈಯಿಕ್ಕಿ ||
ಕಂದುಗೊರಲ ಕೃಪಾ |
ಸಿಂಧು ಶರಣ ಜನ |
ಬಂಧು ಸೋಮೇಶ ಚಿತ್ತೈಸು || ೧೪೭ ||

ಬಸವನಲ್ಲಮ ಚೆನ್ನ |
ಬಸವ ಮುಖ್ಯರು ನಿಮ್ಮೊ |
ಳೊ[1]ಸೆ[1]ದೊಂದಿ ಬೆರಸಿದಂದಿಂದ ||
ವಸುಧಾತಳದೊಳು ಭಾ |
ವಿಸೆ ವೀರಶೈವದ |
ಹೆಸರಿಲ್ಲವೆನೆ ನಸುನಗುತ || ೧೪೮ ||

ಹರನತಿ ಕರುಣದಿಂ |
ಕರೆದು ಪ್ರಳಯಕಾಲ |
ಧರೆಯೊಳು ವೀರಶೈವವನು ||

---

1. ಸ (ಅ, ಉ, ಕ, ಗ.)

ಹರ[1]ಹಿ[1] ಪವಾಡವ |
ಪರಮತ ಗೆಲಿದೆಮ್ಮ |
ಪುರಕೈದಿ ಬಾ[2]ರೆ[2]ನ್ನಲೊಡನೆ || ೧೪೯ ||

ದೇವ ನಾ ಜನಿಸುವ |
ಠಾವಾವುದೆನೆ ಕ್ಷತ್ರಿ |
ಯಾವನಿಪತಿ ಸಂಗಮೇಂದ್ರ ||
ಆವಗೆಮ್ಮವ ನೆರೆ |
ಭಾವಿಪವನ ಪೊಡೆ |
ದಾವರೆ ನಿನಗೆ ವಿಶ್ರಾಮ || ೧೫೦ ||

ಸ್ಥಲವೆಂದು ಪೇಳ್ದನ |
ಚಲಕುವರಿಯ ಮೊಗ |
ನಳಿನ ದಿನೇಶನ ಚರಣ ||
ಜಲರುಹಗಳ ತ[3]ನ್ನ[3] |
ತಲೆಯುನಾಂತತುಳ ಸಿ |
ಮಂಗಲ ಚಿತ್ತ ವೃತ್ತಿ ಪಲ್ಲಯಿ[4]ಸಿ[4] || ೧೫೧ ||

ಬಂದು ಭೈರವದೇವ |
ನೆಂದೆಂಬ ಪೆಸರಿಂದ |
ಮುಂದೆ ಮೋಪೂರೊಳಗಹನೆ ||
ಸಂದೇಹವೇಕಾತ |
ನಿಂದ ವಿಶಾಪ ತಾ |
ನೊಂಮು[5]ಗು[5] ನಿನ್ನ ಚಿಲ್ಲಿಂಗ || ೧೫೨ ||

---

1-ಸಿ (ಇ.) 2-ಯೊ (ಉ.) 3-ವ (ಇ) 4-ಸೆ (ಎ, ಗ.) 5-ಮ (ಉ.)

ಎನೆ ಬೀಳುಕೊಳುತಲ |
ವನಿಗೆಯ್ದೆರಲಿಯಾಗಿ |
ನಿನಗಡ್ಡ ಬಂದು ಕೂರಸಿಯು ||
ಮೆಸಗೆ ಕಾಣಿಸಿದುದೀ |
ಘನಲಿಂಗ ಶಾಪವಾ |
ತನಿಗಳಿದುದು ಭೈರವಾಂಕ || ೧೫೩ ||

ಇದು ಲಿಂಗದಾದಿಯಿಂ |
ತಿದು ನಿನ್ನ ಪೂರ್ವವೆಂ |
ಬುದ ಪೇಳೆ ಹಾಲ ಸೋಮೇಶ ||
ಮುದವೆಚ್ಚಿ ಮತ್ತೆರ |
ಗಿದ ಭೈರವಾಂಕಗೆ |
[1]ಸ[1]ದಯಾಂಬು ನಿಧಿ ಗುರು[2]ನಾಥ[2] || ೧೫೪ ||

ಹರಗಣ ನಿಕರಕ್ಕೆ |
ಶರಣೆಂದವರ ಪರಾ |
ಮರಿಸುತ್ತ ವರ ನಿರೂಪವನು ||
ಶಿರದೊಳಾಂತಿರಲಾಗ |
ಭರದಿಂದ ಭೈರವೇ |
ಶ್ವರ ಮಹಾದೇವಿಯನಿರ್ಗಿಂದು || ೧೫೫ ||

ಭಸಿತ ತಾಂಬೂಲದಿಂ |
ದೊಸೆದು ಕಾಣಿಕೆಯಿಕ್ಕಿ |
ವಸುಧೆಯೊಳ್ ಬಿದ್ದಿರೆ ಪಿಡಿದು ||

---

1-ಸು (ಕ, ಗ, ಚ.) 2-ಪಾದ (ಅ.) , ವದಕೆ (ಎ.) ; ರಾಯ (ಗ.)

ಸಸಿಸಿಟ್ಟು ಕಾರುಣ್ಯ |
ರಸದಭಿಷೇಕಗೈ |
ದಸವು ವಿಭೂತಿಯು ಧರಿಸಿ || ೧೫೬ ||

[1]ತ್ರೈ[1]ಸ್ವಂತ್ರ ರುದ್ರಾಕ್ಷಿ |
[2]ಯ್ಯೈ[2]ಪುಣ್ಯಗಳ ಪೇಳಿ |
ಸ್ವೈಪಾಂತ [3]ವರ್ಣ[3] ಪಂಚಕನ ||
ಸ್ವೈಪಿಟ್ಟು ಕಿವಿಯೊಳಾ |
ರೈಕೆಯಿಂ ಕರನಿಟ್ಟು |
ವ್ಯೈ ವೆಚ್ಚುವಂತೆ ಚಿತ್ಕರಿಯು || ೧೫೭ ||

ತೆಗೆದು ಸನ್ಮಂತ್ರದಿಂ |
ಬಿಗಿದು ಕರದೊಳಿಟ್ಟು |
ಸಗುಣ ನಿರ್ಗುಣದ ಭೇದವನು ||
ಬಗೆವೆರ್ಚ ಪೇಳುತಾ |
ವಗ ಕೀರ್ತಿಸರ್ಚಿಸೋ |
ರಗೆಗೆಟ್ಟು ಬಕುತಿ ಮಾಡುವುದು || ೧೫೮ ||

ಜಂಗಮ ಗುರು ಘನ |
ಲಿಂಗವೊಂದೆಂಬಾಗ |
ಮಂಗಳ ಪೇಳಿ ಪಟ್ಸ್ದಲದಾ ||
[4]ರಂ[4]ಗಾರು ಲಿಂಗ ಹ |
ಸ್ತಂಗಳ ಶಕ್ತಿ ಭ |
ಕ್ತಿಂಗಿತಾರ್ಪಿತದವಧಾನ || ೧೫೯ ||

---

1-ತ್ರಿ (ಇ.) 2 ದೈ (ಅ, ಇ, ಉ, ಕ, ಗ, ಚ, ಟ.) 3-ಮಂತ್ರ (ಗ.)
4-ಅ (ಅ, ಇ, ಉ, ಎ, ಕ, ಗ, ಚ, ಜ, ಟ.)

ತ್ರಿವಿಧ ಪ್ರಸಾದ ತೀ |
ರ್ಥವ ಮೂವತ್ತಾರು ತ |
ತ್ವವ ಸ್ಥಲ ನೂರೊಂದ[1]ರರ[1]ವ ||
ತವೆ ಸೂತಕಾದಿ ಭೇ |
ದವನೆಲ್ಲ ಮನುಜರೊಳ್ |
ಶಿವಭಕ್ತರಧಿಕವೆಂಬುದನು || ೧೬೦ ||

ವೇದಾಗಮಾದಿಯಿಂ |
ಬೋಧಿಸಿ ತಿಳು[2]ಪೆ[2]ವೇ |
ಲೀ ಧರೆಗಧಿಕರೆಂದೆನಿಸಿ ||
ಮಾ[3]ಧ[3]ವಾರ್ಚಿತನು ಮಾ |
ಯಾದೇವಿಯಂದದ |
ಭೇದ ದಂಪತಿಗಳೆಂದೆನಿಸ *|| ೧೬೧ ||

ಸತಿಪತಿಗಳಿಗೆ ಪಾ |
ರ್ವತಿಪತಿಯಿತ್ತು ಶಾ |
ಶ್ವತ ಹಾಲ ಸೋಮಶೇಖರನು ||
ನುತ ಪೂರ್ವ ನಾಮವಾ |
ಯತ ದೀಕ್ಷೆ ನಾಮವಿ |
ತ್ತತಿಶಯಾನಂದ ಕೈವಿ[4]ಗ[4]ಲು || ೧೬೨ ||

ಕರದ ಸುರಗಿ ನಿನ್ನ |
ಚರಣದ ಬಿರಿದಿನ್ನು |
ಇರಲಿ ಕಾರಣವುಂಟು ಮುಂದೆ ||

---

1_ರಿರ (ಕ, ಗ, ಚ, ಟ.) 2-ಪಿ (ಅ, ಚ.) 3 ದೇ (ಎ.) *_ಈ ಪದ್ಯ (ಗ.) ಪ್ರತಿ ಲ್ಲಿಲ್ಲ. 4_ಗಿ (ಅ, ಇ, ಉ)

ಶರಣ ಭೈರವ ಎಂದು |
ಧರಸಿ ಭಸಿತವಿಟ್ಟು |
ಇಱು ಹದುಳದೊಳೆ[1]ಮ್ಮ[1] ಪುರಕೆ || ೧೬೩ ||

ಪೋದಪೆವೆನೆ ನಿಮ್ಮ |
ಪಾದದೊಡನೆ ಒಱೆ |
ನೀ ಧರೆಗಧಿಕವೆಂದೆನಿಪ ||
ವೇದ ವೇದಾಂತದ |
ವಾದಕೆ ನಿಲುಕದ |
ನಾದಿಯ ಸಾಸಲಪುರಕೆ || ೧೬೪ ||

ಲೇಸಾ[2]ದುದೆ[2]ಲೆ ಭೈರ |
ವೇಶ ನೀ ನಡೆ [3]ನ[3]ಮ್ಮ |
ಸಾಸಲಿಗೆನೆ ಪಳವೇರಿ ||
ಭಾಸುರ ವೀರ ವಿ |
ಲಾಸದಿ ಹಾಲಸೋ |
ಮೇಶನೊಡೆ ಬರುತಿ[4]ರ್ದ[4] || ೧೬೫ ||

ಭೈರವರಾಜನ |
ಧೈರ್ಯವ ನೋಡಲೆಂ |
[5]ದಾ[5]ರ್ಯಮು ರಾಜಾಗ್ನಿ ನೇತ್ರ ||
ಪೌರಂ[6]ದ[6]ರಗೆ ಪೇಳೆ |
ಶೌರ್ಯದಿಂ [7]ವರುಷವಾ |
ಪಾರವಿ[7]ಳೆಯೊಳು ಕರೆಸಿದ || ೧೬೬ ||

---

1-ಂದು (ಅ.) 2-ದೇವ (ಅ.) 3-ಯ (ಅ, ಇ, ಗ, ಚ, ಜ) ; ನ ಉ, ಎ, ಕ.)
4-ರಲು (ಉ, ಕ, ಗ, ಜ, ಟ.) 5-ಧೈ (ಉ.) 6-ಭದ (ಇ, ಉ, ಎ, ಕ, ಚ.)
7-ದವರಸು | ಪಾರ್ಶ್ಯಯಿ (ಎ, ಗ, ಚ )

ಇಳೆಯಾಂಡಗುಡಿಪಾರ |
ಗಳ ಮನ ನೋಡೆ ಪೇ |
ರ್ಮಳೆಯನೀಶ್ವರ ತಂದ ಪರಿಯೊ ||
ಳೆಳೆವೆರೆದಲೆಯ ಚಂ |
ಗಳಿ ಸಿರಿಯಾ[1]ಳು[1]ವ |
ರಳವರಿವಲ್ಯಾದ ಮಳೆಯೊ ||೧೬೭||

ಹರ ಸಿಂಧುಬಲ್ಲಾಳ |
ನೊರದು ನೋಡಲು ಬಂದು |
ಸುರಿದ ವೃಷ್ಟಿಯೊ ನಮಿನಂದಿ ||
ಬರೆ ಶಿವರಾತ್ರಿಯೊಳ್ |
ಸುರಿದ ವರುಷವೆಂಬ |
ಪರಿಯೆನಿಸಿದುದು ಪ್ರವಾಹ ||೧೬೮||

ಕರಿಕಂಠನಾ ತಿರು |
ಕುರುಪೆತೊಂಡರ ಮನ |
ವರಿವಲ್ಲಿ ಕರೆದ ಪೇರ್ಮಳೆಯೊ ||
ಉರದ ಗಜೇಶನೊ[2]ಳ್ |
ತ[2]ರಿಪಂದು ಮಸಣಯ್ಯ |
ನರಿಯುದಂತಿರ್ದ ಪೇರ್ಮಳೆಯೊ ||೧೬೯||

ಸುರಭಿವಾಟಿಯಲಿ[3]ರ್ದು[3] |
ಬರುತಿರಲಾಗುರ್ವಿ |
ಪರಮಹಂಸಯ್ಯನ ಮೇಲೆ ||

---

1-ಳ (ಗ.) 2-ಳ (ಇ,) 3 ರ್ದ (ಅ, ಚ.)

ಸುರಿದ ವೃಷ್ಟಿಯೋ ಹರಿ |
ಯುರಿ ಬೇಯುಲೆಂದಾಗ |
ಸುರಪ ಕರೆದ ಮಾರಿಮಳೆಯೊ || ೧೭೦ ||

ವರದ ಪೊನ್ನಾಂಬಲೇ |
ಶ್ವರ ಮನನೋಡಲು |
ತಿರುನಾಳ್ಪೋವರ ಮೇಲೆ ಕರೆದ ||
ವರುಷವೊ ಹಂಪೆಯು |
ಹರಿಯುಣ್ಣಗಳ ಮೇಲೆ |
ಭರದಿಂದ ಕರೆದ ಪೇರ್ಮಳೆಯೊ || ೧೭೧ ||

ಮಂದಾರದಡಿಯು ಸಿ |
ದ್ಧೇಂದ್ರ ಲಿಂಗವನು ತ |
[1]ಪ್ಪ[1]ಂದುರೆ ಕರೆದ ಪೇರ್ಮಳೆಯೊ ||
ಇಂದಿರೆವರ ಪಶು |
ವಂ ದಿಟ ಕಾಯ್ದುತ್ತಿ |
ರ್ಪಂದು ಬಂದೆರಗಿದ [2]ಪರಿ[2]ಯೊ || ೧೭೨ ||

ಪ್ರೇತಾಟವಿಯೊಳಾಗ |
ಭೂತೇಶ ಕರ್ನಿಕೆ |
ಗಾತುರ ಕರದಂಬುಧಾರಾ ||
ವ್ರಾತವೊ ಮೇಣ್ಗಿರಿ |
ಜಾತೆ ತಪವೊಳರೆ |
ಓತೀಶ ಕರೆದ ಪೇರ್ಮಳೆಯೊ || ೧೭೩ ||

---

1-ಪ್ಪೆ (ಗ)     2-ಪ್ರಮೂರ್ಣೆ (ಎ.), ಸುರಿಸು² (ಗ)

**ಎಂಬಂತೆ ಸುರಿವತೀ |**
**ಶಾಂಬರದೊಳಗೆ ಏ |**
ಶ್ವಂಭ[1]ರ[1] ತೇಂಕಾಡುತಿರಲು ||
ಇಂಬುವಡೆದ ಸಿಷ್ಠೆ |
ಯೆಂಬ ಛತ್ರ[2]ದಿ[2]ನೇನು |
ವಂ ಬಗೆಯದೆ ಭೈರವಾಂಕ || ೧೭೪ ||

ಇರೆ [3]ಹಿ[3]ಂದೆ ಮುಂದೆ ಬಂ |
ದೆರಗುವ ಸಿಡಿಲವೊ |
ಗ್ಗರ ಘುಮ್ಮ ಘುಡ ಘುಡಲೆಂಬ ||
ಭರದ ಗುಡುಗು ಮಿಂಚು |
ಉರವಣೆ ಇರಲವ ||
ಸರಕುಗೊಳ್ಳದೆ ಭೈರವಾಂಕ || ೧೭೫ ||

ಗುರುಪಾದ ಸ್ಮರಣೆಯಿಂ |
ಬರುತಿರೆ ಮುಂದುಕ್ಕಿ |
ಹರಿವ ಹೇಮಾವತಿಯೆಂಬ ||
ಪಿರಿಯ ನದಿಯ ತಟಾಂ |
ತರದಿ ಗೂಳಯುದೆಗ |
ದಿರುತಿರ್ದುದವಸಿಯು ಜನರು || ೧೭೬ ||

ಉರುಬಿ ಹುಯ್ಯಲು ಬರೆ |
ಮೊರೆಯಿಟ್ಟು ಭೂಜನ |
ಹರುಗೋಲವನ ಕೂಗಿ ಕರಯೆ ||

---

1_ರ (ಕ, ಗ) 2_ಮೋ (ಆ, ಉ.) , ಫ (ಎ, ಕ.) 3_ಪಿ (ಕ, ಗ, ಚ.

ಅರಿಯೆನಂಜುವೆನುಕ್ಕು |
ದೊರೆಯಿದೆ ಇದೆ ಲಗ್ಗೆ |
ವರಿಯಿದೆ ಪರನೃಪಥಾ[1]ಳಿ[1] || ೧೭೭ ||

ಎನೆ ನಡ ನಡುಗಿ ಭೂ |
ಜನರು ಕಂಬನಿಯು ಕಾ |
ಳ್ಪೊನಲೊಳಗಾಳುತೇಳುತಿರೆ ||
ಅನಿತರೊಳನಘನೆಂ |
ದೆನಿಪ ಭೈರವ ಕರ |
ವನಜವ ನೆಗಪಿ ನಂಬುಗೆಯ || ೧೭೮ ||

ಇತ್ತಂಜಬೇಡವೆ |
ನುತ್ತ ಸುರಗಿಯೊರೆ |
ಗಿತ್ತು ಜೀವರ ಭವನದಿಯ ||
ನುತ್ತರಿಸಲು ಸಿಂದ |
ತೆತ್ತಿಗನೋ ಅನಿ |
ಮಿತ್ತ ಬಾಂಧವನೊ ಎಂಬಂತೆ || ೧೭೯ ||

ಸಿಂಧುಮಥನ[2]ದೊಳು[2] |
ನೊಂದಹಿಯುಗುಳ್ದ ವಿ |
ಷಂ ದೇವ ದಾನವರುಗಳ ||
ಧಂ ಧಗಿಲೆನುತಟ್ಟಿ |
ಪಿಂದೆಯ್ದೆ ಬರೆ ಕಾಯ್ದ |
ಕಂದುಗೊರಲನೊ ಎಂಬಂತೆ || ೧೮೦ ||

---

1-ಂಟಿ (ಇ)  2-ದರಿ (ಇ, ಚ.)

ಮುಪ್ಪುರದಸುರರ |
ದರ್ಪಕ್ಕೆ ಮುಗಿದು ಕ |
ಣ್ಣಪ್ಪುಗೆದರುತನಿಮಿಷರು ||
ಧೂಪ್ಪನೆ ಬೀಳೆ ಕಂ |
ದರ್ಪಾರಿಯುಭಯಮಿ |
ತ್ರಿಪ್ಪೊಲಿಸೆದ ಭೈರವಾಂಕ || ೧೮೧ ||

[1]ಕನ[1]ಕಾಸುರನ ಕೊಂದ |
ಮನುಜಸಿ[2]ಂಹ[2]ನ ಭಯ |
ಕನಿಮಿಷರ್ ಮೊರೆಯಿಡೆ ಕೇಳ್ದು ||
ಮಿನುಪ ಮುಗುಳುನಗೆ |
ಯನು ಸೂಸುತಭಯಮಿ |
ತ್ತನಘ ವೀರೇಶ[3]ನೆಂತ[3]ಂತೆ || ೧೮೨ ||

ಹಿಂದೆ ಹುಯ್ಯಲ ಭಯ |
ಮುಂದೆ ನದಿಯ ಭಯ |
ದಿಂದ ಗೋಳಿಡುವ ಮಾನವರ ||
ವೃಂದವ ಕಾಯ್ವೆನೀ |
ಗೆಂದು ಭೈರವದೇವ |
ನಿಂದನಾ ಪೇರ್ನದಿಯಿದಿರ || ೧೮೩ ||

ಕೊಡು ಪಥವನು ಗಂಗೆ |
ಮೃಡನಾಣೆ ನಿನಗೆ ಎ |
ನ್ನೊಡೆಯ ಸೋಮೇಶ್ವರನಾಣೆ ||

---

1 ತಾರ (ಇ)  2 ಪ್ಪ (ಇ.)  3 ನಿಂದ (ಅ, ಉ, ಕ, ಗ, ಟ)

ವಡಬಾಗ್ನಿ ತಿಲಕಯ್ಯ |
ನಡಿಯಾಣೆ ನಿನ್ನನೊ |
ಕ್ಕುಡಿತೆ ಮಾಡಿದ ಮುನಿಯಾಣೆ || ೧೮೪ ||

ತಿರುನೀಲಕಂಠಯ್ಯ |
ಹರನಾಣೆ[1]ಯೆನೆ[1] ತನ್ನ |
ತರುಣಿಯು ತೊಲಗಿ ನಿಂದಂತೆ ||
ಹರಭಕ್ತರಾಣೆ ಎಂ |
ದರೆ ಸಿದ್ಧರಾಮೇಶ |
ತಿರುಗಿದಂದದಿ ನಿಂದುದಾಗ || ೧೮೫ ||

ಮುನಿಯ ಶಾಪದಿ ತನ್ನ |
ತನುವೆಲ್ಲ ಭಗವಾಗಿ |
ಮನನೊಂದು ಸುರನಾಥನಿರಲು ||
ಕನಲ್ದೇಕಪಾದ ರು |
ದ್ರ ನುನಂಬೆಂದಾಣೆಯಿ |
ಟ್ಟನಿತರೊಳ್ತೊಲಗಿ[2]ದಂದದಲಿ[2] || ೧೮೬ ||

ಸಂದನುಳಿದು ಬೆಟ್ಟ |
ದಂದದಿ ನಿಂದುದಾ |
ದೊಂದೆಸೆ [3]ಪ[3]ರಿದುದೊಂದೆಸೆಯು ||
ಬಂದೆರಗಿತು ಜನ |
ರಂದು ಭೈರವದೇವ |
ನಂದವಡೆದ ಪದಯುಗಕೆ || ೧೮೭ ||

---

1-ಇಡೆ (ಉ, ಕ, ಟ)  2 ನಿಂದಂತೆ (ಅ, ಎ.)  3-ಸ (ಅ, ಇ, ಎ, ಗ, ಚ)

ಸೀತೆ [1]ಪೋಗಲು[1] ರಾಮ |
ಸೇತುವ ನೆರೆಕಟ್ಟಿ |
ಘಾತಿಸಿ ಕೊಂದ ರಾವಣನ ||
ಪಾತಕವಡೆದ[2]ಪ[2] |
ಖ್ಯಾತಿಗೆ ಬಂದನಂ |
ದಾ ತೆರನಲ್ಲ ಭೈರವನು || ೧೮೮ ||

ಸಿಷ್ಟೆವೆಟ್ಟವನಡ್ಡ |
ಗಟ್ಟಿ ತನಗೆ ಪೊರೆ |
ಯಿಟ್ಟರ್ತನ್ನಭಿಮಾನವಾಗೆ ||
ನೆಟ್ಟನೆ ತನಗಿಂಬು |
ಗೊಟ್ಟ ನದಿಯ ಪೇ |
[3]ರ್ವ[3]ಟ್ಟೆಯೊಳಗೆ ನಡಸಿದನು || ೧೮೯ ||

ಮಡಿವಾಳನಾಚಯ್ಯ |
ಕಡುಗೋಪದಿಂದ ಪೆ |
ರ್ಚಿಡಿದ ನದಿಯನೊಡೆ[4]ಬಗಿ[4]ದು ||
ನಡೆ[5]ದಂತೆ[5] ಬಸವ ಕ |
ಪ್ಪಡಿಯ ಸಂಗಮಕೆ ಪೋ |
ಪಡೆ ಗಂಗೆ ತೆರಪುಗೊಟ್ಟಂತೆ || ೧೯೦ ||

ಮುದದಿ ದೇವರದಾಸ |
ಮದುವೆಗೆ ಪೋಪಲ್ಲಿ |
ನದಿಯನಿಬ್ಬಗೆ ಮಾಡಿದಂತೆ ||

---

1–ಗೊಲಿಸು (ಇ.) 2–ಪ್ರ (ಎ, ಜ.) 3–ಬ (ಇ, ಎ.) 4–ದುಳಿ (ಉ, ಕ, ಗ, ಟ)
5–ತಂದು (ಇ), ತಂದ (ಗ)

ಕವನಲಂಪಟ ಮು[1]ಟ್ಟಿ[1] ।
ಯುಥಟ ಚಾಡಯ್ಯನು ।
[2]ಹೊ[2]ಡೆದು ಪೊಳೆಯ [3]ದಾಂಟಿದ[3]ಂತೆ ॥ ೧೯೧ ॥

ರೇವಯ್ಯ ದೇವಯ್ಯ ।
ಗಾವನದಿಗೆ ಪೋಗೆ ।
ರಾವಗೊಟ್ಟಂತೆ ಕೂತಾರ್ಂಡಿ ॥
ದೇವರೆಡೆಗೆ ಚೇರ ।
ಮಾವನಿಪತಿ ಪೋಗ ।
ಲಾವೇಳೆ [4]ತೆರಪ[4] ಕೂಪಾರ ॥ ೧೯೨ ॥

ಕೊಟ್ಟಂತೆ ವಾಗೀಶ ।
ಕುಷ್ಠ ಜಂಗಮ ಸಹ ।
ಬಟ್ಟೆಯೊಳ್ ಬರೆ ನದಿಯೆರಡು ॥
ತಿಟ್ಟೊರಸಿರಲಾರು ।
ಮುಟ್ಟದಿರವನ ನಿ ।
ವರ್ಟ್ಟಿಯೊ[5]ಳಗೆ ನಡಸಿದೊಲು[5] ॥ ೧೯೩ ॥

ಮೃಡನ ಗಣಂಗಳು ।
ಗ್ರಡಿಪುತಲಿ ನೇರವ ।
ಗೊಡುತಾಗ ಕೇತಿರಾಜಯ್ಯ ॥
ನೊಡನೆಯ್ದು ದಾರಿಯ ।
ಬಿಡಿಸಿಕೊಂಡುರೆ ಪೋದ ।
ಬೆಡಗಿನೊಳ್ ಪ್ಪೈರವನೊಡನೆ ॥ ೧೯೪ ॥

---

1–ಸುಪಿ (ಉ, ಎ, ಚ) 2–ನ (ಅ, ಇ, ಉ, ಎ, ಕ, ಗ.) 3–ಲಂಬ (ಅ, ಇ, ಉ, ಎ, ಕ, ಗ, ಚ.) 4–ಪಥನ (ಅ, ಇ, ಉ, ಎ, ಕ, ಗ, ಟ) 5–ಳ್ಳಡಸುವಪಪರಿ (ಅ, ಇ, ಉ, ಎ, ಕ, ಗ, ಚ.)

ಪೊ[1]ಂ[1]ಮುಟ್ಟಿ ಜನರೆಲ್ಲ ।
ರೆರಗೆ ಭೈರವರಾಜ ।
ನೆರಗಿದ ಶ್ರೀ ಗುರುಪದಕೆ ॥
ಕರಿಕಂಠನಾಣೆಯು ।
ಲ್ಲಾರೆ ಪೋಗು ಪೋಗೆನೆ ।
ಬಿರುದಸಿವೆರಸಿ ಪರಿದುದು ॥ ೧೯೫ ॥

ಕಂಡತಿ ಭಯವಡೆ ।
ಗೊಂಡು ಪಿಂದೈತಂದ ।
ದಂಡು ಮರಳಿಪೋಗಲಿತ್ತ ॥
ಗಂಡರ ಗಂಡನು ।
ದ್ದಂಡಘಗಿರಿ ವಜ್ರ ।
ದಂಡ ಭೈರವರಾಜ ಎನುತ ॥ ೧೯೬ ॥

ಕೀರ್ತಿಸುತ್ತಿರಲಿತ್ತ ।
ವಾರ್ತೆಯೆಲ್ಲವ ಸಮ ।
ವರ್ತಿಮ[2]ರ್ದ[2]ನ ಸೋಮನಾಥ ॥
ಪಾರ್ಥಿವೋತ್ತಮರೊಳ ।
ತ್ಯಾರ್ಥಿ ಭಕ್ತರೊಳು ಸ ।
ಮರ್ಥರೊಡನೆ ಸ್ವಪ್ನದೊಳಗೆ ॥ ೧೯೭ ॥

ಎನ್ನಸುವೆನ್ನಾಯು ।
ವೆನ್ನ ನಚ್ಚಿನ ಭಕ್ತ ।
ನೆನ್ನ ಸಮಯ ಸಮುದ್ಧರಣ ॥
ಎನ್ನವನೆನ್ನಣು ।
ಗನು ಭೈರವದೇವ ।
ನನ್ನ ನೀವಿದಿರ್ಗೊಳ್ಳಿರೆಂದು ॥ ೧೯೮ ॥

---

1-ಪ (ಗ.)  2-ಷ್ಟ (ಎ).

ಹರ ಕರುಣಿಸಿದನೀ |
[1]ಪುರ[1]ವನೆಲ್ಲವನಷ್ಟ |
ಪರಿಶೋಭನವ ಮಾಡಿಸೆಂದು ||
ಗುರು ಚಿಕ್ಕಣಾರ್ಯ ಭಾ |
ಸುರ ಶಂಭು ನೃಪತಿಯೊಳ್ |
ನಿರವಿಸುತವೆ ಭಕ್ತರೊಡನೆ || ೧೯೯ ||

ವೇಳಲಾಗೊಡನೆಲ್ಲ |
ರಾಳೋಚನೆಯು ಮಾಡಿ |
[2]ಡೋ[2]ಳು ತಂಬಟೆ ಭೇರಿ ಕಹಳೆ ||
ಜೋಳಿ ಶೋಭನಗಳಾಂ |
ಧೋಳ ಚಾಮರ ಛತ್ರ |
ಕೇಳಿ[3]ಗೆ[3] ಕಳಶ ಕನ್ನಡಿಯ || ೨೦೦ ||

ಉಘೇ ಚಾಂಗು ಭಲಾ [4]ಎಂದು[4] |
ಪೊಗಳ್ವ ರಭಸದಿಂದ |
ನೆ[5]ಗೆವ[5] ಧೂಪದ ಮುಂಜಿ[6]ನಿಂದೆ[6] ||
ನೆಗೆಸಿದ ಗುಡಿ ತಳ |
ರುಗಳಿಕ್ಷು ಕುಸುಮಾಂಜು |
ಲಿಗಳಿಂದೆ ಗುರುಚಿಕ್ಕಣಾರ್ಯ || ೨೦೧ ||

ಮುಂತಾದ ಶರಣರ |
ನಂತರು ಭಕ್ತರ |
ತಿಂಥಿಣಿ ಪಾರ್ಥಿವ ಕುಲದ ||

---

1-ರೂಪ (ಇ.) 2-ದೋ (ಕ, ಗ.) 3-ಕೆ (ಅ, ಉ, ಎ, ಗ, ಚ.) 4-ರೆಂಬ (ಇ.)
5-ಗಳ್ವ (ಇ.) 6 ನಂತೆ (ಇ.)

ಸಂತಾನ ವೇದ ವೇ ।
ದಾಂತವನರಿವ ಮ ।
ಹಂತರು ಜಯ ಜೀಯ ಎನುತ ॥ ೨೦೨ ॥

ತೆರಳಿದರತಿ ಸಡ ।
ಗರದಿಂದಲತ್ತ ನಂ ।
ಟ[1]ರು[1] ಬಹು ಪಾದಪದೆಡೆಯ ॥
ಲಿರೆ ಭೈರವಾಂಕ[2]ನ[2] ।
ಗುರು ಹಾಲಸೋಮೇಶ ।
ವರ ಮಹಾದೇವಿ ಮುಂತಾದ ॥ ೨೦೩ ॥

ವೀರಮಾಹೇಶ್ವರರ್ ।
ದೂರದಿಂ ಕಂಡೆದ್ದು ।
ಧಾರುಣಿಗೊಡನೆ ಮೈಯಿಕ್ಕಿ ॥
ಸಾರಿ ತಕ್ಕೈಸಿ ಕೊಂ ।
ಡೋರೋರ್ವರಿ[3]ರ[3] ಭೇ ।
ರೀರವದೊಡನುಘೇ ಎನುತ ॥ ೨೦೪ ॥

ಕ್ಷೇಮ ಕುಶಲಗಳ ।
ಪ್ರೇಮದಿಂ ಕೇಳುತು ।
ದ್ದಾಮ ಶ್ರೀ ಗುರು ಚಿಕ್ಕಣಾರ್ಯ ॥
ಭೂಮಿಗಪ್ರತಿಮ ನಿ ।
ಸ್ಸೀಮ ಭೈರವ ಹಾಲ ।
ಸೋಮೇಶರಿರೆ ಮೂರುಸಂಧಿ ॥ ೨೦೫ ॥

**ಅಂತು ಸಂಧಿ ೩ ವೃತ್ತ ೩ಕ್ಕಂ ಪದ ೮೪೫ಕ್ಕಂ ಮಂಗಳಮಹಾ**

ಶ್ರೀ ಶ್ರೀ ಶ್ರೀ ಶ್ರೀ ಶ್ರೀ

1-ರ (ಅ, ಇ, ಉ, ಎ, ಕ, ಗ, ಚ.) 2- ಶ್ರೀ (ಇ, ಎ.) 3-ಗೆ (ಕ.)

*

# ನಾಲ್ಕನೆಯ ಸಂಧಿ

# ಸಪ್ತ ಭಾಸುರದ ಪವಾಡಗಳು

---

## ಚಂಪಕಮಾಲಾ ವೃತ್ತ

ಸೂಚನೆ —

ಪರಸಮಯಾಂಬು ರಾಶಿ ವಡಬಾನಲ ಭೈರವದೇವ ಚಂದ್ರಶೇ |
ಖರನ ಕೃಪಾವಲೋಕನದಿ ಪೆ[1]ರ್ಚಿ[1] ಬೆರಲ್ಪಣಿಯಂಕ ಚೂತವ ||
[2]ಣ್ಸು[2] ರಚಿಸಿವೆತ್ತು ತೋರ್ಪವರೆ ದೀರ್ಘ ಮುಸಲ್ಯವೆಸಪ್ಪ ಸಪ್ತಭಾ |
ಸುರದ ಪವಾಡವಂ ಮೆರದು ಸಾಸಲೊಳೊಪ್ಪಿರುತಿರ್ದ [3]ನಾರ[3] ತಂ || ೧ ||

### ಪದ

ಹರಿಜಾತ ವರದ ಶ್ರೀ |
ಹರಿಗಂಧ ಭಂಜನ |
ಹರಿಹರ ಹರಿಗಿರಿ ಧನ್ವಾ ||
ಪುರಹರ ಹರಿಹರಿ |
ಹರಿಮಿತ್ರ ಗೋಹರಿ |
ಶಿರ ಸೋಮನಾಥ ಮಾಂ [4]ಪಾ[4]ಹಿ || ೧ ||

ಇಕ್ಷುಚಾಪನ ಪಿತ |
ನಕ್ಷಿ ಪೂಜಿತ ಪಾದ |
ಲಕ್ಷ್ಮ್ಯ ಕಲಾಧರ ಜೂಟ ||

---

ಪಾಠಾಂತರ ·—

1 ಚ್ಚ್ಯ (ಉ, ಎ, ಕ ಗ, ಜ, ಟ) 2-ತ್ಸು (ಗ) 3-ಸಂತ (ಎ.) 4-ತ್ರಾ (ಅ, ಇ, ಉ, ಎ, ಕ, ಗ, ಚ, ಜ, ಟ.)

ಪಕ್ಷಿವಾಹನ ಪಿತ ।
ಉಕ್ಷಗಮನ ಸರ್ವ ।
ರಕ್ಷ ಪಾಲಯ ಸೋಮನಾಥ *|| ೨ ||

ಶರಣ ಸಂದರ್ಶನಾ ।
ಭರಣಸತ್ಯಮಲಿನ ।
ಕ[1]ರಣ[1] ಸಚ್ಚಿತ್ಕಲಾಸ್ಫುರಣಾ ||
ವರಣ ಭವಾಂಬೋಧಿ ।
ತರ[2]ಣ[2] ಜರಾ ಜನ್ಮ ।
ಮರಣವಿದೂರ ಬಾರೆಂದು || ೩ ||

ತೆಗೆದಪ್ಪಿ ಬಿಗಿ[3]ದ[3]ಪ್ಪಿ ।
ಮಗು[4]ಳ[4]ಪ್ಪಿ ಮುಂಡಾಡಿ ।
ಬಗೆವೆಚ್ಚಿ ಭೈರವಾಂಕನನು ||
ಉಘೆಯುಘೆಯುಘೆ ರವ ।
ನೆಗೆಯೆ ಕೈವಿಡಿದು ಕೊಂ ।
ಡಘ ದೂರ ಗುರು ಚಿಕ್ಕಣಾರ್ಯ || ೪ ||

ಬರುತಿರೆ ಮುಂದೆ ಭೋ ।
ರ್ಗರೆವ ಮಂಗಳ ವಾದ್ಯ ।
ಶರಣರಾಶೀರ್ವಾದ ಸಹಿತ ||
ಧರಣಿ ತ[5]ಳಾಗ್ರಕ್ಕ[5] ।
ಚ್ಚರಿಯಾಗಿ ಮೆರೆವ ಸು ।
ಸ್ಥಿರ ಶಂಭುಲಿಂಗನಾಲಯಕೆ || ೫ ||

---

*ಈ ಪದ್ಯ (ಅ, ಇ, ಎ, ಕ, ಗ, ಚ, ಜ, ಟ) ಪ್ರತಿಗಳಲ್ಲಿಲ್ಲ 1_ರು (ಅ, ಇ, ಎ, ಚ.) 2_ಣಿ (ಒ.) 3_ಯ (ಕ, ಗ, ಚ, ಜ, ಟ.) 4_ಳ್ದ (ಅ, ಇ, ಎ, ಒ, ಗ.) 5_ಳಕ್ಕೆ ಅ (ಗ.)

ಬಂದು ದೇವಾಸುರ ।
ವಂದಿತ ಪಾದಾರ ।
ವಿಂದ ಶಂಕರ ಸದಾ ವರದ ॥
ನಂದಿ ವಾಹನ ಜಯ ।
ತೆಂದು ಭೈರವದೇವಾ ।
ನಂದಾಶ್ರುದುಂಬಿ ಕೀರ್ತಿಸಿದ ॥ ೬ ॥

ಶಾಶ್ವತನಲ ಹರಿ ।
[1]ದಶ್ವಾ[1]ಬ್ವ ಲೋಚನ ।
ವಿಶ್ವ ವಲ್ಲಭ ಭವಭರ್ಗ ॥
ಭಾಸ್ವದಮಲ ತೇ [2]ಜೋ[2] ।
ಮೇಶ್ವರ ವರ ಕಂಬ ।
ಳಾಶ್ವತ ಶೃತಿ ಭೂಷ ಜಯತು ॥ ೭ ॥

ಸಿಂಧುಶೇಖರ ಬಾಲ ।
ಚಂದಿರ ಜೂಟನ ।
ಲ್ಕಂದು ಗೊರಲ ನಾಗಕಟಕ ॥
ಇಂದಿ[3]ರಾ[3]ವರನಕ್ಷಿ ।
ಯಿಂದಿರ್ಪ ಪಾದಾರ ।
ವಿಂದ ಮಾಂ[4]ಪಾ[4]ಹಿ ಎಂದೆಸುತ ॥ ೮ ॥

ದುರಿತ ವಿದೂರ [5]ತ್ರೈ[5] ।
ಪುರ ಕಾಲ ಕಾಮ ಪೇ ।
ರ್ಗಿರಿ ವಜ್ರ ದಂಡಾಂಧಕಾರಿ ॥

---

1-ದಾಶ್ವಾ (ಗ, ಚ, ಜ.) 2-ಜು (ಉ.) 3 ರೆ (ಎ.) 4-ತ್ರಾ (ಅ, ಇ, ಎ, ಗ, ಚ, ಜ, ಟ.) 5-ತ್ರಿ (ಇ.)

ಕರಿ ಚರ್ಮಧರ ನರ |
ಹರಿ ಶಿರಶ್ಛೇದನ |
ಕರುಣಿ ಮನ್ಮಾಥ ಮಾಂ ಪಾಹಿ || ೯ ||

[1]ತು[1]ಳಿಲಾಂತು ಬಂದು ನಿ |
ರ್ಮಳನದ್ವಿತೀಯನ |
ಚಳ ಪರಂಜ್ಯೋತಿರಾಕಾರ ||
ನಳಿನಜಾಂಡಗಳ ತ |
ನ್ನೊಳು ಪೆತ್ತ ಮೂರ್ತಿ ಕಂ |
ಗೊಳಿಪ ಸೋಮೇಶನಾಲಂಗಕೆ || ೧೦ ||

ಕಲ್ಯಾಣದಾಯಕಾ |
ಹಲ್ಯಾಪ ನುತಿಪಾತ್ರ |
ಕಲ್ಯಾಣಾಚಲಧನ್ವ ಪ್ರಮಥ ||
[2]ಲೌಲ್ಯತಿ ಪಾಪ[2] ಘ |
ವಲ್ಯಲವಿತ್ರ ಧಾ |
ವಲ್ಯಾಂಗ ಜಯತು ಸೋಮೇಶ || ೧೧ ||

ಎಂದು ನುತಿಸಿ ದೇವ |
ಹಿಂದೆನ್ನ ಸ್ವಪ್ನದೊ |
ಳಿಂದೆ ನಿನ್ನಯ ಶ್ರೀ ಪಾದಾರ ||
ವಿಂದವ ಕಾಣ್ಬಡ್ಡೆ |
ತಂದೆನೆನುತ ಮಿಗೆ |
ವಂದಿಸಿ ಸುಖಮಿರುತಿರಲು || ೧೨ ||

---

1-ತ (ಎ.) 2-ಲಾಲ್ಯನತ್ ಪಾಪಾ (ಎ, ಗ, ಟ.) , ಲಾಲ್ಯನತಾಘ (ಉ, ಕ.

ಆ ಸಮಯ[1]ದೊಳು[1] ಸೋ |
ಮೇಶನಾಜ್ಞೆಯನಾಂತು |
ನಾಸಲೆರೆಯ ಶಂಭು ನೃಪತಿ ||
ದೋಷರಹಿತ ಭೈರ |
ವೇಶ ಚಿತ್ರೈಸೊಂದು |
ವಾಸವ ನಿಮಗೀವೆನೆಂದು ॥ ೧೩ ॥

ಭದ್ರಮಯನತಿ ವೀರ |
ಕ್ಷುದ್ರ ಸಮಯ ದೂರ |
ಅದ್ರಿಜಾರಮಣ ವಿಹಾರ ||
ಸಿದ್ರನಭಿನವ ಭೂ |
ರುದ್ರಗೆ ಶಿವಲಿಂಗ |
ಮುದ್ರೆಯ ಗೃಹವಿತ್ತನಾಗ ॥ ೧೪ ॥

ನಲಿದು ಭಕ್ತಿ[2]ಯಲಿ[2] ಚಾ |
ಮಲದೇವಿ ಶಿವ ಸಿದ್ಧ |
ಕುಲಪತಿಗಿತ್ತ ಚಂದದಲಿ ||
ಸಲೆ ಪಾಲ್ಕುರಿಕೆಯಯ್ಯ |
ಗೊಲಿದು [3]ಭೂಮಿಯನಿ[3]ತ್ತ |
ಮಲ ಜಗದೇಕಮಲ್ಲನೊಲು ॥ ೧೫ ॥

ಪೊಡಮಟ್ಟು ನೃಪತಿ ಪೋ |
ದೊಡನೆ ಭೈರವರಾಜ |
ನಡೆತಂದು ಗೃಹದೊಳಗಿರಲು ||

1-ವಲಿ (ಇ, ಒ, ಚ.) 2-ಯೊಳು (ಕ, ಗ, ಜ, ಟ.) 3-ವಿಭೂತಿಯಿ (ಇ,ಗ.)

ಸಡಗರಿಸುತ ಶಿವ |
ನಡಿಗೆ ಮಣಿದು ಭಕ್ತ |
ರೊಡೆಯರ ಸೇವೆಗಲಸದೆ || ೧೬ ||

ಮಾಡುತ ಮಹದೇವಿ |
ಪಾಡುತ ಪ್ರಮಥರ |
ಬೇಡುತ ಸೋಮಶೇಖರನ ||
ನೋಡಿದರಘವನೀ |
ಡಾಡುತಿರಲು ಜಸ |
ಮೂಡಿತು ಮೂರುಲೋಕದಲಿ || ೧೭ ||

ಹಲಿ ವಾಣಿ ವೃಷಭ ಶಂಖ |
ಗಳ ಸುರ [1]ವಾಬ್ಜ[1] |
ವೆಳಗ ಧಿಕ್ಕರಿಸಿ ಚಿದ್ಭಸಿತ ||
ಬೆಳಗಿನೊಳ್ ಮೂಲೋಕ |
ದೊಳು ಭೈರವಾಂಕನ |
ಮಲಕೀರ್ತಿ ಸುಳುಹುಗೊಂಡೊಡನೆ || ೧೮ ||

ಪಿರಿಯರ್ ನಿರ್ಮಾಯರ್ ಮಾ |
ಧುರಿಯರ್ ಸವರಿಯರು |
ಪರಮರ್ ಸುವೀರ್ಯರ್ ಸುಜ್ಞಾನಾ ||
ಚರಿಯರ್ ಸದಾನಂದ |
ತುರಿಯರ್ ಶರಣರು ಸ |
ಚ್ಚರಿತರ್ ವಿಚಾರ ಮಹಿಮರು || ೧೯ ||

---

1_ಪಕೂಜ (ಉ, ಒ, ಕ, ಗ.)

ದಾನಿಗಳಸದೃಶ |
ಮಾನಿಗಳತ್ಯಭಿ |
ಮಾನಿಗಳ್ [1]ಶೈವ ಶೋಭ[1]ಗರು ||
ಸಾನುರಾಗಿಗಳು ಮ |
ಹಾನುಭಾವಿಗಳು ಲಿಂ |
ಗಾನುಸಂಧಾನ ತತ್ಪರರು || ೨೦ ||

ಕರ ಕ[2]ಕ್ಷೆ[2] ಉರ ಕಂಠ |
ಶಿರದಮಳೋಕ್ಯದ |
ಶರಣರ್ ಮುಂಡನ ಜಟೆ ಕೇಶ ||
[3]ಧುರು ಭಕ್ತಿ ಸುಜ್ಞಾನ |
ವಿರತರೈತಂದು ಕಂ |
ಡರು ಭೈರವಾಂಕಸನ್ನತಿಯ || ೨೧ ||

ಅವರ ಮೂರ್ತಿಯ ಕಾಣು |
ತವೆ ಭೈರವಾಂಕನೆ |
ದ್ದವನಿಯೊಳ್ಳಿರೈಯಿಕ್ಕಿ ನಿಂದು ||
ಶಿವ ಶಿವೆಂತಪ್ಪ ಪು |
ಣ್ಯವೊ ಎನುತವೆ ಪಾ |
ದವ ತೊಳೆದುಪಚರಿಸುತಲಿ || ೨೨ ||

ರಸ ರಸಾಯನ ಸಂ |
ತಸದಿ ನೀಡುತ ಭಕ್ತ |
ರೂನೆದೇನ ಬೇಡಲಿತ್ತಿತ್ತು ||

---

1–ಸೈವ ಸೊಬ (ಅ, ಒ)  2–ಕ್ಷ (ಉ, ಕ, ಚ, ಜ, ಟ.)  3–ಧರರು ಭಕ್ತಿ (ಅ, ಉ, ಎ, ಕ, ಗ, ಜ, ಟ)

[1]ಮುಸುರ್ಪ[1] ಪ್ರಪಂಚನೇ |
ಳಿಸುವಾಹಿಂಸ ಧರ್ಮ |
ದಪು [2]ಒಪ್ಪುದೊ[2]ಂದು ಕಾಯಕವ || ೨೩ ||

ಮಾಡುವೆ ಶಿವರತಿ |
ಗೂಡಿ ಶಂಕರದಾಸ |
ರೂಢಿಗತ್ಯಧಿಕವಿದೆಂದು ||
ಕೂಡೆ ಕಾಯಕವ ತೊ |
ಟ್ಟಾಡಿ ಗೆಲಿ[3]ದ[3] ವ |
ವಾಡವನಂತವಂ ತಾಗಿ || ೨೪ ||

ಸೂಚಿಗಾಯಕದಿ ಯ |
ಥೋಚಿತಾರ್ಥವನನಿ |
[4]ವಾರ್ಚ[4]ನ ಶರಣ ಸಂತತಿಗೆ ||
ತಾ ಚದುರಿಂದ ಸಂ |
ಕೋಚಿಸದಿವನೂ |
ಏರ್ಚಯುಕಿದು ಪೊಸತೆನಿಸಿ || ೨೫ ||

ಹರನಿಷ್ಠೆ ಸೂಚಿ ಮೇ |
ಲುರುಭಾವ ಸೂತ್ರದಿಂ |
ನೆರೆ ಪೊಲ್ವ ತತ್ವದಂಬರವ ||
ಪಿರಿದಂತರಂಗದೊ |
ಳಿರಿದು ಬಹಿಸ್ತದಿ |
ಪರಮಾನುರಾಗದೊಳೊಂದು || ೨೬ ||

---

1–ನುಸುವಾತು (ಇ.) 2–ವೆನಿಪೊ (ಗ, ಜ, ಟ) 3–ದು (ಕ, ಗ) 4–ವರ್ಚಂಚ (ಎ.) ; ವಾರ್ಚ್ಯ (ಗ)

ಪೊಸ ದುಕ್ಪುಟದೊಳು ಚೆ ।
ಲ್ವೆಸೆವಂಗಿಯನು ಪೊಲಿ ।
ದಸವು ಭಕ್ತರ [1]ಪಾರು[1]ತಿರಲು ॥
ಪಶುಪತಿಯುತಿ ಕೃಪಾ ।
ರಸ ಚಿತ್ತ ಸೋಮೇಶ ।
ನೊಸೆದು ಜಂಗಮ ರೂಪುದಳೆದು ॥ ೨೭ ॥

ಬರುತ ಭಸಿತವಿಟ್ಟು ।
ಪರ[2]ಸು[2]ತಿಯುಂಗಿಯ ।
ಧರಿಸಬೇಕೆಮಗೀವುದೆನಲು ॥
ಹರುಷದಿಂದವರ ಶ್ರೀ ।
ಚರಣಕೆರಗಿ ಕೊಡೆ ।
ಕರಮುಚ್ಚಿ ಸೋಮಶೇಖರನು ॥ ೨೮ ॥

ನುಡಿ ನೋಟ ಭಾವ ಮೇಲ್ ।
ನಡೆ ಕರತಳದೊಳ ।
ಗಡಗಿ ಪರುಷಮಿರುತಿರ[3]ಲು[3] ॥
ಕಡು ನಿಷ್ಠೆ ನಿನ್ನ ಬೆಂ ।
ಬಿಡದಿರಲಾವಾಗ ।
ಮೃಡ ಸನ್ನಿಹಿತನಾಗುತಿರಲಿ ॥ ೨೯ ॥

ಮಗನೆ ಸೀ ನೆನೆದ ಕಾ ।
ರ್ಯಗಳು ಸಂಭವಿಸಲಾ ।
ವಗ ತವಸಿಧಿ ಕುಂದದಿರಲಿ ॥

---

1_ಹಾತು (ಇ, ಎ.)  2_ಸೂ (ಕ)  3 ರಿ (ಉ, ಕ, ಜ, ಟ)

ಅಗಜಾವರನ ಕೃಪೆ |
ಮಿಗಿಲಕ್ಕೆನುತ ಪರ |
ಕೆಗಳ [1]ಮಾಡುತ ಪೋಗೆ[1] ಪಿಂದೆ || ೩೦ ||

ಶರಣರ್ ಕೊಂಡಾಡಿ ಭಾ |
ಪುರೆ ಎನುತಿರಲೋರ್ವ |
ವಿರತಾಗ್ರಗಣ್ಯನವರನು ||
ಪರಿಭವಿಸುತಲಿದೇ |
ನರಿದೆ ಪೂರ್ವದೊಳಿತ್ತ |
ವರ ಪೇಳ್ವೆ ಕೇಳಿರೆಂತೆನಲು || ೩೧ ||

ಬಸವನರಸಿಯುಟ್ಟ |
ವಸನವನತಿ ಭರ |
ವಸದಿ ಪಲ್ಲವ ಚರ ಬೇಡೆ ||
ನಸು ನಗುತಿತ್ತು ವಂ |
ದಿಸಿದಸಿವನ ಕೀ |
ರ್ತಿಸಲೇಕೆ ಕೇಳಿ ಮತ್ತೋರ್ವ || ೩೨ ||

ಕಡು ಚೆಲ್ವನತಿ ನೂಬ |
ಗಿಡಿದ ಜಂಗಮನೋರ್ವ |
ನಿಡುಗುಡಿಮಾರದೇವಗಳ ||
ಮಡದಿಯುಟ್ಟುದ ಬೇಡೆ |
ಕೊಡನೆ [2]ಈ[2]ಗಿವನಿತ್ತ |
ಒಡವೆಯೇನದುವಲ್ಲದಿನ್ನು || ೩೩ ||

---

1-ಕೊಟ್ಟು ಪೋಗ (ಇ, ಎ.)    2-ಯಾ (ಅ, ಎ, ಗ, ಚ, ಜ.)

**ಮಾರಾರಿ ಜಂಗಮಾ |**
**ಕಾರದಿಂ ಬೇಡೆ ತ |**
ನ್ನಾರಿಯುಟ್ಟುದ ತಾನುಟ್ಟುದನು ||
ಕೋರೆ ಕೊಟ್ಟುಯ್ದಕ್ಕಿ |
ಮಾರಯ್ಯ ಶಿವನ ಪಾ |
ದಾರವಿಂದವ ಬೆರಸಿದನು || ೩೪ ||

ದೇವಾಂಗವನು ಸಕ |
ಲಾವಧಾನದಿ ನೆಯ್ದು |
ಪಾವನ ಚರಲಿಂಗಕಿತ್ತು ||
ದೇವನೊಲ್ಮೆಯ ಪಡೆ |
ದಾ ವಿಭು ನೈಸರೊಲ್ |
ಭಾವಿಸಲಧಿಕವೇಸಿವನ || ೩೫ ||

ಪನ್ನೆರಡಬ್ದನೆಯಿ |
ದುನ್ನತ ವಸನವ |
ದನ್ನಾಡೆ ತಾಪಸ ಬೇಡೆ ||
ಸನ್ನಿದವಾಗಿತ್ತು |
ಪನ್ನಳಿನಕ್ಕೆ ಬಿದ್ದ |
ನನ್ನಿಯೊಳ್ ಪುದನೂರದಾಸ || ೩೬ ||

ಪ್ರಮುದವೆತ್ತೊಡನುಮಾ |
ರಮಣನ ಭಕ್ತ[1]ರ್ಗೆ |
ವಿಮಲಾಂಬರವನಿತ್ತು ಬಳಿಕ ||

---

1_ಕುತ (ಉ.)

ಕ್ರಮದಿ ತರುಣ ತನ್ನ |
ರಮಣಿಯನೊಲಿದಿತ್ತ |
ಅಮರನೀತಿಯ ಮುಂದಿದೊಂದೆ || ೩೭ ||

ಅಂಗಜಹರನೋರ್ವ |
ಜಂಗಮವಾಗಿ ಬಂ |
ದಂಗ ವಸ್ತ್ರವ ಬೇಡಲೊಡನೆ ||
ಪೊಂಗುತ ತನ್ನ ಸ |
ರ್ವಾಂಗವಿತ್ತಳು ವೀರ |
ಸಂಗವ್ವೆ ಲಿಂಗ ಷಡ್ವಿಧಕೆ || ೩೮ ||

ಹರಭಕ್ತರಿಗೆ ವಸ್ತ್ರಾ |
ಭರಣವೀಯಲು ಪುರ |
ಹರ ಮೆಚ್ಚಿ ಬೇಡೀವೆನೆನಲು ||
ಕ[1]ರಿ[1]ಚರ್ಮಾಸ್ಥಿಗಳ ಭಿ |
ತ್ತರದಿ ತೆಗೆಸಿ ಕಾಳಿ |
ಮರಸಿತ್ತಂಬರ ಭೂಷಣಗಳ || ೩೯ ||

ಅದುವಲ್ಲದಿನ್ನು ವೇ |
ಳಿದಪೆ ಜಂಗಮ ಬೇಡೆ |
ಮುದದೊಳಿಹಃಪಗೆಯಾಂಡಿ ||
ವಧುವಿತ್ತ ಸಿಂಧುದೇ |
ಶದ ರಾಯ ತನ್ನ ಪ |
ಟ್ಟದ ಪೆಣ್ಣನಿತ್ತ ಜಂಗಮಕೆ || ೪೦ ||

---

1. ರ (ಎ.)

ಧರಣೀಶ ಮಾನಕಂ |
ಜರ ಮಂಗ[1]ಲಾ[1]ರ್ಥದೊಳ್ |
ಚರ ಬೇಡೆ ಮಗಳ ಪೇರ್ಮುಡಿಯ ||
ಅರಿದು ತೊಂಡಿಲು ದಂಡೆ |
ವೆರಸಿತ್ತನಿವ ಕೊಟ್ಟ |
ಪಿರಿದು ವಸ್ತುವದಾವುದೆನಲು || ೪೧ ||

ಅಚ್ಚರಿ ಮಿಗೆ ನಚ್ಚಿ |
ಮೆಚ್ಚಿ ಭಕ್ತಾವಳಿ |
ಗೊಚ್ಚತ ತಾನಾಳ್ಪವನಿಯ ||
ನಿಚ್ಚಯ ಮಿಗಿಲಿತ್ತ |
ಸಚ್ಚರಿತಾಂಗ ನಿ |
[2]ತ್ಯೋ[2]ಚ್ಚುತುಡುಗಸ್ ಪೆರುಮಾಳೆ || ೪೨ ||

ಧನ ಧಾನ್ಯ ವಸ್ತ್ರ ವಾ |
ಹನ ರತ್ನಾಭರಣಗ |
ಳಿನಿ[3]ದು[3]ಣಿಸಾದಿ ವಸ್ತುವನು ||
ವನಿತೆಯಬೇ್ಕೆಂದು |
ನೆನೆಯೆ ಭಕ್ತಾಳಿಗೀ |
ವನು ಇಡುಗುಡಿಯ ಪೇ[4]ರ್ಮ[4]ಡಿಯು || ೪೩ ||

ತನು ಮನ ಧನದೊಳ |
ಗಿನಿತು ವಂಚನೆಯಿಲ್ಲ |
ದನಘ ಜಂಗಮಕೆ ಮಾಡುವ[5]ರಾ[5] ||

---

1–ಲ್ಯಾ (ಬ, ಚ.) 2–ತ್ಯಾ (ಉ.) 3–ಮ (ಇ.) 4. ಮಾರ್ಂ (ಅ, ಎ, ಕ, ಗ.)
5–ರು (ಕ.)

ಮನೆಯ ದಾಸಿಯ ಸರಿ |
ಯೆನಬಾರದೀತನ |
ಘನವಾವುದೆನೆ ಮತಿಮಾಸಿ || ೪೪ ||

ನಡ ನಡ ನಡುಗಿ ಬಂ |
ದೊಡೆಯರಡಿಯ ಮೇಲೆ |
ಕೆಡೆದೆಲೆ ದೇವ ನಾ ನಿಮಗೆ ||
ಕೊಡಲು ತಕ್ಕವನೆ ನಿ |
ಮ್ಮ[1]ಡಿಯರಡಿಯ[1]ನೆಂದು |
ನುಡಿದು ಭೈರವ ದೇವನಿರಲು || ೪೫ ||

ಸತಿ ಪತಿಗ[2]ಳ[2] ಮನ |
ವತಿ ಪೆರ್ಚುತಿರಲು ಪೆ |
ರ್ಚಿತು ತವನಿಧಿ ಪಿರಿದಾಗಿ ||
ಶಿ[3]ತಿ[3]ಕಂಠ ಭಕ್ತ ಸಂ |
ತತಿಗೆ ಪಿಂದಿತ್ತುದ |
ಕತಿಶತಿಯವೆಂದು ಕೀರ್ತಿಪರು || ೪೬ ||

ಮೀಟಾದ ಬಕುತಿ ವ |
ಧೂಟಿಯೊಳಿಲ್ಲಾಗ |
ಕೂಟದಿಂ ಬಾ[4]ಳ್ವಗಂ ನಾಲಾ[4] ||
ಕೋ[5]ಟಿ[5]ಯ ಶಿವದೇವ |
ನೂಟಕೊಡನೆ ಶತಿ |
ಜೂಟ ಧಾನ್ಯದ ಮಳೆಗರೆದ || ೪೭ ||

---

1_ವರಡಿಯವನಾ (ಗ, ಜ.) 2_ಳು (ಇ.) 3_ತ (ಅ, ಇ, ಉ, ಎ, ಜ,
4_ಳ್ದುದಂತಲ್ಲಾ (ಅ.) 5 ಟೆ (ಅ, ಎ.)

ಉಕ್ಷಗಮನನಾ ।
ಪೇಕ್ಷಿಸಿ ಪಡೆಯನೆ ।
ಅಕ್ಷಯ ನಿಧನವ ನಂಬಿ ॥
[1]ತ್ರ್ಯ[1]ಕ್ಷನಿಂ ಪಡೆದ ನೆ ।
ಲ್ಲಾಕ್ಷಣ ತಿರುವಾಲೂ ।
ರ ಕ್ಷೇತ್ರ ತುಂಬಲಿಂಬಿಡನೆ ॥ ೪೮ ॥

ಸೋಮ[2]ಧರ[2]ಗೆ ನಿತ್ಯ ।
ನೇಮದರ್ಚನೆಯ ಮ ।
ಹಾ ಮಂತ್ರ ಜಾಪ್ಯ ಸನ್ನುತಿಯ ॥
ಪ್ರೇಮದಿಂ ನಡೆಸುತು ।
ದ್ದಾಮನುರುವಪಲ್ಲಿ ।
ಕಾಮಯ್ಯ ತವಸಿಧಿ ಪಡೆದ ॥ ೪೯ ॥

ಮಾತೆಯಿಂದವೆ ಮಂತ್ರ ।
ಮಾತೆಯರಿದು ಜಗ ।
ನ್ಮಾತೆಯ ಪತಿಯ ಜಾನಿಸಲು ॥
ಪ್ರೀತಿಯಿಂದುಪಮನ್ಯು ।
ಗೋತು ಶಂಕರನಿತ್ತ ।
ನಾ[3]ತು[3]ರ ಪಾಲ್ ತವನಿಧಿಯ ॥ ೫೦ ॥

ಚಿರುಪುಲಿಯರ್ಗೆ ಬಾ ।
ಯೊರತು ಪೆಂಡತಿಯಾಗಿ ।
ಮೆರೆವ ಪಾವನ ನಾಚಿಯರಿಗೆ ॥

---

1-ಯ (ಇ.) 2-ಧಾರಿ (ಅ, ಉ, ಎ, ಕ, ಗ, ಟ.) 3-ತ (ಎ.)

ಒರಲಾಂ[1]ತು[1] ಪುತ್ರನಾ ।
ದುರುವಸುರಂಗ ಬಾ ।
ಯ್ದೆರೆಯುಲೀವನು ತವನಿಧಿಯ ॥ ೫೧ ॥

ಈರಾರು ಪೊನ್ನರ್ಥ ।
ನಾರೀಶನಿಂ ಪ್ರತಿ ।
ವಾರ ಪಡೆದು ತನ್ನ ವೃಷ್ಟಿ ॥
ವಾರೆ ನೋಡಲು ಪೆರ್ಚಿ ।
ದೋರಿದನವ ಭಕ್ತ ।
ಗೋರ್ರಂತಿವನು ಹರಿದೇವ ॥ ೫೨ ॥

ಅತಿಶಯಾನಂದನ ।
ಪ್ರತಿಮ ಭೈರವ[2]ರಾಜ[2] ।
ನತಿ ಪೆರ್ಚಿ ಪಿರಿದು ಭಕ್ತಿಯೊಳು ॥
ವ್ರತ ಶೀಲ ನಿಯಮದು ।
ನ್ನತ ಮಹೇಶ್ವರಗೀ ।
ವುತ ಹರಪೂಜೆ ಮಾಡುತಲಿ ॥ ೫೩ ॥

ಶೀಲ ಸಂಪಾದನೆ ।
ಲೋಲನಾಗುತ ಕಾಲಾ ।
ಕಾಲವೆಂಬುದನು ಬಗೆಯದೆ ।
ಮೇಲಾವುದಿದರೊಳೆಂ ।
ದಾಲೋಚಿಸುತಲಿರೆ ।
ನಾಲಿಗೆ ಲವಣವಂ[3]ಟುವು[3]ದೆ ॥ ೫೪ ॥

---

1-ತ (ಉ, ಚ.)  2-ದೇವ (ಅ, ಇ, ಉ, ಕ, ಗ, ಚ, ಜ, ಟ.)  3-(ಇ, ಎ, ಒ, ಕ.)

ಎಂಬಾಗಮುವ ನೆರೆ |
ನಂಬಿ ತದ್ರುಚಿಯ ವಿ |
ಡಂಬನ ಮಾಡಿ ಮೇಲ್ ವ್ರತವ ||
ತಾಂ ಬಿಡದಾಚರಿ |
ಪಂ ಭೈರವಾಂಕನಾ |
ಡಂಬರ ಮಿಗೆ ನಿಷ್ಠೆ ಬಲಿದು || ೫೫ ||

ಶೀಲಾದಿನಾಯಕ |
ನೆಲೇಶ ಕೇತಯ್ಯ |
ಪಾಲುಕುರಿಕೆಯ ಸೋಮೇಶ ||
ಕಾಲಾಗ್ನಿ ರುದ್ರಯ್ಯ |
ಮೇಲೆನಿಸಿರ್ದಿಳೆ |
ಹಾಳ ಬ್ರಂಹಯ್ಯನ ಪಾಡುತಲಿ || ೫೬ ||

ಹರ ಶರಣರು ಬರೆ |
ಚರಣಕೆರಗುತ ಶ್ರೀ |
ಗುರುವನೊಲ್ದಾರಾಧಿಸುತಲಿ ||
ನಿರುತ ಲಿಂಗಾರ್ಚನಾ |
ತುರನಾಗುತಿಂತಿರು |
ತಿರುತ ಭೈರವದೇವನೊಂದು || ೫೭ ||

ದಿನದುದಯದೊಳು ತ |
ನ್ನಸುವಿನೊಳ್ತಿಲ ಯಂತ್ರ |
ವನು ಮಾಡಿ ತಾ[1]ನೂಕುತಿರಲು[1] ||

---

1-ನೆನೂಕುತಿರೆ (ಉ, ಎ, ಕ, ಜ, ಟ.)

ಅನಘ ಸೋಮೇಶನಾ |
ತನ ಸಾವಧಾನದೊಳ್ |
ಪನು ನೋಡಬೇಕೆನುತೊಡನೆ || ೫೮ ||

ಅಂಬಿಕೆ[1]ಯುರ[1] ತಪ |
ದಿಂಬುಗೆಡಿಸ ಬಂದ |
ಕುಂಭಿನೀಸುರನೊಲು ಕೃತಕ ||
[2]ಶಂಭು[2] ಭೋರನೆ ಬಂದು |
ನಂಬಿಯ ಮದುವೆಯೊ |
ಳಿಂಬುಗೆಡಿಸಿದೊಲಾಗಾ || ೫೯ ||

ಶಿವಭಕ್ತನಂತೆ ಬಂ |
ದವರ ಗಾಣವಸತಿ |
ಜವದಿ [3]ಗಿರ್‍ರನೆ[3] ತಿರುಪುತಿರೆ ||
ಅವಧಾನವಳಿದು ಭೈ |
ರವ[4]ರಾಜ[4] ನೈವೆರಳ್ |
ಸವೆದು ಸಣ್ಣಿಸಿ ಬೀಳಲಾಗ || ೬೦ ||

ಕಲಿಕಾಮದೇವರ |
ಛಲವ ನೋಡಲು ಸೋಮಾ |
ನಲ ರವಿ ನೇತ್ರನೈತಂದು ||
ಭಲ ನಂಬಿ ನಂಬಿದ |
ವೊಲು ನಂಬಿದೆನಲು ಕೂ |
ರಲಗುದೆಗೆಯ[5]ಲೊಡೆ[5]ದಂತೆ || ೬೧ ||

---

1-ಯುನು (ಇ.), ಯುಗ್ರ (ಜ.) 2-ಶಾಂಭ (ಉ.); ಸಾಂಬು (
3-ಗಾಣನ (ಇ.) 4-ದೇವ (ಇ, ಉ, ಕೆ, ಜ, ಟ.) 5-ರೋಡಿ (ಗ, ಚ, ಜ, ಟ.)

ಮೆರೆವಿಂಡದೇವಯ್ಯ ।
ನುರೆ ನಂಬಿಯೊಳಗು ಮೇಲ್ ।
ಪೊರಗೆಂದು ಒಲಿದು ಡಂಗುರಿಸೆ ॥
ಕರಿಕಂಠ[1]ನಾಗೆ[1]ಲ್ಲ ।
ರರಿಯುದಂತೋಡಿದ ।
ತೆರದೊಳೋಡಿದನು ಸೋಮೇಶ ॥ ೬೨ ॥

ರಾಜ ಪಾದಪದೊಳ್ ವಿ ।
ರಾಜಿಪ ನಿಜರೂಪ ।
ರಾಜಶೇಖರ ತೋ[2]ರೆ[2] ನಲಿದು ॥
ರಾಜಿಪ ಸ್ಪೈನಾರ್ಗೆ ।
ಮೂಜಗದೆರೆಯ ಕಣ್ ।
ನಾಜಿ ಪೋದೊಲು ಪೋದನಾಗ ॥ ೬೩ ॥

ಮುಕ್ಕಣ್ಣ ಚರರೂಪ ।
ನಕ್ಕಜ ಮಿಗೆ ತಾಳ್ದ ।
ರಕ್ಕಸ ಬ್ರಂಹಯ್ಯಗಳಿಗೆ ॥
ಸಿಕ್ಕಿ[3]ದ್ದೋಡಿದ[3] ಪೋ ।
ದೆಕ್ಕಟಿಯೊಳು ಮೂಜ ।
ಗಕ್ಕಿದು ಚೋದ್ಯವೆಂ[4]ದೆನಲು[4] ॥ ೬೪ ॥

ಸೂರಾಂಬೆಯರ ಮನೆ ।
ಗೋರಂತೆ ಶ್ವಪಚನಾ ।
ಕಾರವ ತಾಳ್ದೀಶ ಬರಲು ॥

---

1-ತಾನೆ (ಎ.) 2-ರಿ (ಅ, ಚ.) 3 ಡಲು (ಅ, ಇ.) ; ಡ್ಡೊದೊಲು (ಎ, ಗ.)
4-ಬಂತೆ (ಅ, ಇ, ಉ, ಎ, ಕ, ಗ, ಜ, ಟ.)

ಧಾರುಣಿ ಸುರರುಗ |
ಳಾರುಭಟಿಗೆ ಅವ |
ರಾರರಿಯದೊಲೋಡಿದಂತೆ || ೬೫ ||

ಓಡಿದನಾ ದುಷ್ಟ |
ಕೂಡೆ ಶಂಕರ ಶಶಿ |
ಚೂಡ ಗಂಗಾಧರ ಶಿವನ ||
ನಾಡೆ ಪೂಜೆಯನೀಗ |
ಮಾಡಬೇಕೆಂ[1]ದ[1]ಡೆ |
ಮಾಡಹೇಳಿದ ಭೈರವಾಂಕ || ೬೬ ||

ಶರಣಾಳಿ ಸಹಿತ ಮಂ |
ದಿರದಿ ಕುಳ್ಳಿರ್ದು ಶ್ರೀ |
ಗುರುಪಾದ ಸ್ಮರಣೆಯ ಮಾಡಿ ||
ದುರಿತವಿ ಧ್ವಂಶ ದೇ |
ವರ ದೇವನಡಿದಾ |
ವರೆಯ ಹೃನ್ಮಧ್ಯದೊಳಿರಿಸಿ || ೬೭ ||

ಪರಮ ಪಂಚಾಕ್ಷರೋ |
ಚ್ಚರಣೆ ಮಾಡುತ್ತ[2]ಲಾ[2] |
ಕರದಿ ಭಸ್ಮವನಾಂಟಲಾಗ ||
ಕರಶಾಖೆಗಳು ಕಲ್ಪ |
ತರುವಿನಂಕುರಗಳ್ಗೆ |
ಸರಿ ಮಿಗಿಲೆನಿ[3]ಸಿ ಒ[3]ಪ್ಪಿದವು || ೬೮ ||

---

1 ದ (ಇ, ಚ.) 2-ವಾ (ಅ, ಇ, ಉ, ಎ, ಕ, ಗ, ಚ.) 3-ಪೊಲೊ (ಉ, ಕ, ಗ

ಕೋಮಲತರ ಸರ |
ಳಾಮಲನಖವಭಿ |
ರಾಮವಾಗಿರೆ ಭಕ್ತರೆಲ್ಲ ||
ಭೂಮಿ[1]ಗಾಶ್ಚ[1]ರ್ಯ ನಿ |
ಸ್ಸೀಮವೆನುತಲತಿ |
ಪ್ರೇಮದಿಂ ಕೊಂಡಾಡುತಿ[2]ರಲು[2] || ೧೯ ||

ಕುಟಿಲ ಜೈನರು ವಟ |
ವಿಟಪಿಯ ಸುಡಲತ್ಯ |
ಘಟಿತ ಕೋ[3]ವೂ[3]ರ ಬ್ರಂಹಯ್ಯ ||
ದಿಟ ಮಂತ್ರ ಭಸ್ಮದಿಂ |
ಸ್ಫುಟಗೈದನದರಿಂದು |
ತ್ಕಟವಾದುದೀಗೆನುತಿಹರು || ೨೦ ||

ದಿನಚರಿಯಲಿ [4]ಸುರೆ |
ಯ[4]ನು ಮಾರಿ ತತ್ಕರ |
ವನ[5] ರುಹಗ[5]ಡಿದು ಮೇಲ್ಪಡೆದು ||
ಅನಘ ಜಂಗಮಕೆ ಮಾ |
ಳ್ಪನು ಮಾರದೇವನಾ |
ತನ ಪರಿಯೀ ಪರಿಯಲ್ಲ || ೨೧ ||

[6]ಕು[6]ರುಳ ಬೆರಳನು ಪೇ |
ರುರವನೀವನನುದಿನ |
ಚ್ಚರಿ ಶಿವಲೆಂಕಮಂಚಣ್ಣ ||

---

1–ಗಚ್ಚರಿ(ಎ, ಒ, ಕ, ಚ.) 2–ಹರು(ಇ, ಉ, ಕ, ಜ, ಟ.) 3–ಹೂ(ಅ, ಉ, ಎ, ಕ, ಟ.)
4–ಮಾಂಸವ (ಅ, ಇ, ಉ, ಕ, ಚ.) 5–ಜವಕ (ಅ, ಇ, ಎ, ಕ, ಚ, ಜ, ಟ.) 6–ಕ(ಅ, ಗ.)

ಮರಳಿ ಪಡೆದ ಬಾಣ |
ಕರವನರಿದು ಕೊಟ್ಟು |
ಗಿರಿಜಾಧಿಪತಿಗೆ ಹೀಗಲ್ಲ || ೭೨ ||

ಹರನುಪಕರಣವ |
ಚರಣ ತಾಗಿದವ[1]ನು |
ತ[1]ರಿದುಕೊಂಡನು ವೆಲ್ಲಗೊಂಡ ||
ವರ ಮಹಾದೇವಯ್ಯ |
ಮರಳಿ ಪಡೆದನೀ |
ಪರಿಯಲ್ಲವಿದು ಕರಚೋದ್ಯ || ೭೩ ||

ಗುರುಪಾದುಕೆಯ ತನ್ನ |
ಚರಣ ಸೋಂಕಿದವನು |
ತರಿದುಕೊಂಡನು ಗುರುಭಕ್ತ ||
ಹರಪುರಕ್ಕೈದಿದ |
ಪರಿಯಲ್ಲವಿದು ಚಿತ್ರ |
[2]ತ[2]ರ ಭೈರವಾಂಕನದೆನುತ || ೭೪ ||

ಕಣ್ಣಿತ್ತು ನುತಿಗೈ[3]ದಾ[3] |
ಕಣ್ಣ ಪಡೆದು ಮತ್ತಾ |
ಕಣ್ಣಿತ್ತು ಬಳಿಕದ ಪಡೆದು ||
ಕಣ್ಣ ಮೂಗಳವ ಮು |
ಕ್ಕಣ್ಣನಿಂ ಪಡೆದ[4]ನು[4] |
ತಿಣ್ಣ[5]ನೀ[5]ತನಿಗೆ ತೋಡಹುದೆ || ೭೫ ||

---

1-ಂದ (ಇ.) 2-ವ (ಇ.) 3-ದು (ಎ, ಕ.) 4-ನ (ಉ, ಎ, ಕ, ಗ.)
5-ವಿ (ಅ, ಉ, ಎ, ಚ.)

ನೀಲಕಂಧರಗೆ ತ್ರಿ ।
ಕಾಲ ಕಣ್ಣಿ[1]ತ್ತು[1] ಸ ।
ಲ್ಲೀಲೆಯೊಳ್ಪಡೆವ ಸದ್ಭ[2]ಕ್ತಿ[2] ॥
ಲೋಲ ಸಮ್ಯಜ್ಞಾನ ।
ಶೀಲ ಸದಾಚಾರ ।
ಪಾಲಕಂಗಳ ವಿರೂಪಾಕ್ಷ ॥ ೭೬ ॥

ಹರಗೆ ಕಂಗಳ ಬಸ ।
ವರಸ ಕಣ್ಗೊಡಲು ಮೇ[3]ಲ್[3] ।
ಕರುಣದಿಂ ಕೊಡಲೊಲ್ಲೆನೆಂದು ॥
ಪರಮ ನೀ ವಿಶ್ವತೋ ।
ವರ ಚಕ್ಷುವಾಗೆಂದು ।
ಪರಸಿದ ಬಗೆ ಸಾಟಿಯಲ್ಲ ॥ ೭೭ ॥

ಶಶಿಶೇಖರಗೆ ತನ್ನ ।
ರಸನೆಯು ತ್ರೈಕಾಲ ।
ಒಸೆದಿತ್ತು ಬಳಿಕದ ಪಡೆದು ॥
ಪೊಸತಪ್ಪ [4]ಸ್ತು[4]ತಿಗಳ ।
ನುಸುರ್ವ ಶಂಕರ ಕೃಪಾ ।
ರಸಚಿತ್ತ ಶಿವಯೋಗಿ ದೇವ ॥ ೭೮ ॥

ಶಿರವೊಂದ ಕರವೊಂದ ।
ನರಿದು ತನ್ನಯ ಕೈಯ ।
ನರವ ತೆಗೆದು ತಂತಿಗಟ್ಟಿ ॥

---

1-ತ್ರ (ಇ.)  2-ಕ್ತ (ಚ.)  3-ಣ್ (ಅ, ಟ)  4-ನು (ಗ.)

ಹರಗೆ ಕೇಳಿಸುತಪ್ಪ |
ಸಿರಿಯನಾ ರಾವಣಾ |
ಸುರ ಪೊ[1]ಡೆದ ಹಾಂಗಲ್ಲವೆಂದು[1] || ೭೯ ||

ಕೊಂಡಾಡುತಿರೆ ಕರ |
ದಂಡ ಭವನ ಶಿರ |
ಗೊಂಡ ಸೋಮೇಶನ ಚರಣ ||
ಪುಂಡರೀಕಾ[2]ರ್ಕ[2]ನ |
ದಂ[3]ಡಿ[3]ವಡೆಯಲು ಕೈ |
ಕೊಂಡು ಭೈರವದೇವನಾಗ || ೮೦ ||

ಶಿವರಾತ್ರಿಯನು ನಿಚ್ಚ |
ಭವನೊಳೆಸಗಿ ಮತ್ತೆ |
ಶಿವನಾದ ಭದ್ರಯ್ಯಗಳನು ||
ತವೆ ಘಟಿಕವಸರ |
ದವಿರಳ ತ್ರಿಪುರಾರಿಯ |
ವರ ಪಾದವ ನೆನಹುತಲಿ || ೮೧ ||

ಗಿರಿಜಾಧಿಪತಿಗೆ ಕ |
ಸ್ತೂರಿಯ ಸಾರಣೆಯ ಭಿ |
ತ್ತರಿಸುತಿಪ್ಪುದ್ಭಟಯ್ಯಗಳ ||
ಚರಣ ಸ್ಮರಣೆಯಿಂದ |
ಕರದೊಳೆ ಭೈರವೇ |
ಶ್ವರ ವಿಗೆ ಸಮ್ಮಾರ್ಜಿಸಿದನು || ೮೨ ||

---

1_ಡದುಸು ಹೀಗಲ್ಲ (ಗ, ಚ.) 2_ಕ್ಷ (ಎ, ಗ) 3_ಡೆ (ಕ.)

ತೊಳಿದೆಳಿಯಾಣೆಯ |
ಮಳತರ ಮೌಕ್ತಿಕ |
ದೊಳು ರಂಗವಲ್ಲಿಯ ರಚಿಸಿ ||
ಎಳಿವೆರೆಧರ[1]ಗೀ[1]ವ |
ಮಳಚಿತ್ರ ಮಾಯಣ್ಣ |
ಗಳವೊಲ್ ಭೈರವ ರಚಿಸಿದನು || ೮೩ ||

ರಂಗವಲ್ಲಿಯ ನೇಮ |
ದಿಂ ಗಾಡಿವಡೆದು ಶ |
ರ್ವಂಗೆ ನೇಮವ ನಡೆಸಿದನು ||
ಮಂಗಳಾತ್ಮಕ ಸೋವ |
ಣ್ಣಂಗಳ ಪಾಡುತ |
ತ್ತುಂಗ ಭೈರವ ರಚಿಸಿದನು ||:೮೪ ||

ಕರಮುಟ್ಟೆ ಕುಮುದ ಪಂ |
ಕರುಹ ಚಂಪಕ ಯೂಥಿ |
ಕಿರವಂತಿ ಬಿಲ್ವ ಮಂದಾರ ||
ಕರವೀರ ಬಕುಳ ಪಾ |
ದರಿ ಪಾರಿಜಾತ ಬಂ |
ಧುರ ಕುಸುಮಗಳಸಿಕ್ಕಿದನು || ೮೫ ||

ಸುಂದರತರದು[2]ರು[2] |
ಬಂಧ ಮಹಾ ನಾಗ |
ಬಂಧ ಜಟಾಲಿಂಗ ಪೂಜ ||

---

1-ನೀ (ಉ, ಎ, ಟ.) 2-ಡು (ಅ, ಇ, ಉ, ಎ, ಕ, ಚ, ಜ, ಟ.)

ಬಂಧಕರೀಂದ್ರೋರು ।
ಬಂಧ ಸನ್ಮರುಜಾಧಿ ।
ಬಂಧವಿಕ್ಕಿದ ಭೈರವಾಂಕ ॥ ೮೬ ॥

ಅಜಗಣ್ಣನಂತೆ ಬಲ್ ।
ಬಜೆಯುಳಿದಾ ಮಂತ್ರ ।
ನಿಜವರಿದಾಹ್ವಾನಗೈದು ॥
ಭುಜಗ ಭೂಷಣ [1]ಪಾ[1]ದ ।
ಭಜಕ ಪಂಡಿತಗುರು ।
ಯಜಿಪೋಲರ್ಚನೆಗುಜ್ಜುಗಿಸಿದ ॥ ೮೭ ॥

ಗೊಲ್ಲಾಳ ಚಂಡೇಶ ।
ಪಿಳ್ಳೆ ದುರಿತ ಗಜ ।
ಮಲ್ಲ ಶ್ರೀ ಗುರುಸಿದ್ಧರಾಮ ॥
ಬಲ್ಲಾಳ ತಿರುಮೂಲ ।
ರೆಲ್ಲರೋಲ್ ಪೀಯೂಷ ।
ದಲ್ಲೀಶಗಭಿಷೇಕ[2]ವೆರೆದ[2] ॥ ೮೮ ॥

ದಾರಯ್ಯ ಸೋಮಾಸಿ ।
ಮಾರಯ್ಯ ಹಂ[3]ಪಯ್ಯ[3] ।
ಧೀರನಗ್ಗಣಿಯ ಹೊನ್ನಯ್ಯ ॥
ಚಾರು ಸದ್ಯೋಜಾತ ।
ರೋರಂತೆ ವಾಡುತ್ತ ।
ಮಾರಾರಿಗಭಿಷೇಕವೆರದ ॥ ೮೯ ॥

---

1-ಶ (ಉ, ಎ, ಕ, ಗ, ಚ, ಜ, ಟ) 2-ಗೈದು (ಅ.) 3-ಪೆಯ (ಅ, ಎ, ಗ)

ವಲಘೊಂಡಮೂರ್ತಿ ನಿ |
ರ್ಮಲ ಚಿತ್ತನಣುಮೂರ್ತಿ |
ಸಲೆ ಸೋಮವರ್ನರ ಚರಣ ||
ಜಲರುಹಗಳ ಮನ |
ವಲ[1]ರಿ[1] ಸನ್ನುತಿಗೆಯ್ದು |
ಮಲಯಜವಿತ್ತ ಶಂಕರಗೆ || ೯೦ ||

ಸುಲಲಿತಾಕ್ಷತೆಯ ಚಾ |
ಮಲದೇವಿಯತ್ಯಂತ |
[2]ಭ[2]ಲವಂತನರಿವಾಳ್ತಾಂಡಾರಿ ||
ಅಲಘು ಭೋಗಯ್ಯ ಕಾ |
ಮಲ[3]ದೇವಿಯರ[3] ಪಾಡು |
ತೊಲಿದೀಶಗಿತ್ತನಕ್ಷತೆಯ || ೯೧ ||

ಕರವೀರ ರೇಕವ್ವೆ |
ತಿರುಚಿಟ್ಟನಿ[4]ರಿ[4]ಭಕ್ತ |
ಚಿರುವುಲಿನಾರ್ತಿಲವಲ್ಲಿ ||
[5]ಯು[5]ರು ವಾಯು[6]ಲಾರ[6] ಶ್ರೀ |
ಚರಣವ ನೆನೆದು ಕಂ |
ಮರಲ ಭೈರವ [7]ಶಿವಗಿತ್ತ[7] || ೯೨ ||

ಕಲಿಯನಾರ್ ಶರಣನೋ |
ಹಿಲ ಗುಪ್ತ ಮಂಚಣ್ಣ |
ನಲಘು ಮಾಚಯ್ಯ ಗೊಗ್ಗವ್ವೆ ||

---

1. ರ (ಎ.) 2. ಬ (ಇ.) 3. ತೆಯುರನು (ಅ, ಇ, ಉ, ಎ, ಕ, ಚ, ಜ, ಟ.) 4. ರಿ (ಇ.) 5. ಯಿ. 6. ಲೂ (ಇ.) 7. ಸತ್ತಶಿವಗೆ (ಗ)

ಗಳ ಪಾಡುತಾಗ ನಿ |
ರ್ಮಲ ಸೋಮನಾಥಂಗೆ |
ಲಲಿತ ಧೂಪವನ[1]ರ್ಪಿ[1]ಸಿದನು || ೯೩ ||

ಕಲಿಯರ್ ಕೊಲ್ಲಾಂಬೆ ಸೋ |
ಮಲದೇವಿ ನಮಿನಂದಿ |
ಛಲವಂತ ಕಡವಲನಂಬಿ ||
ಸುಲಲಿತ ಬೊಪ್ಪಯ್ಯ |
ಗಳ ಪಾಡುತೀಶಗು |
ಜ್ವಲ ನೀರಾಜನವನೆತ್ತುವನು || ೯೪ ||

ಚೋಳ ಚನ್ನಯ್ಯ ಸಿರಿ |
ಯಾಳ ಬಸವರಾಜ |
ಚೋ[2]ಳಿಯಕ್ಕನು[2] ಚೌಡಯ್ಯ ||
ಕೋಳೂರು ಬಾಲೆಯೊಲ್ |
ಭಾಳಾಕ್ಷಗುಪ[3]ಹಾ[3]ರ |
ಜಾಳವನಲಿದರ್ಪಿಸಿದನು || ೯೫ ||

ಅಪ್ಪಣ್ಣ ರೇಚಯ್ಯ |
ಸಪ್ಪೆಯಲ್ಲಮ ಶಿವ |
ಗರ್ಪಿಸಿದಂತೆ ವೀಳೆಯವ ||
ತಪ್ಪದಾಹ್ವಾನದಿಂ |
ದರ್ಪಿಸಿದನು ಮಿಗೆ |
ಸರ್ಪಧರಗೆ ಭೈರವಾಂಕ || ೯೬ ||

---

1-ರ್ಚಿ (ಇ) 2-ಳ ಸುರಗಿಯ (ಅ, ಇ, ಉ, ಎ, ಕ, ಗ, ಚ, ಜ, ಟ) 3-ಚಾ (ಚ.

ಮಿಸುಪ ವಸ್ತ್ರ[1]ವ ಬಾಲ[1] ।
ಶಶಿ[2]ಕಲಾಧರಗಿ[2]ತ್ತ ।
ನಪವು[3]ಗೆನೆ[3] ಕಾಳಿದೇವಗಳ ॥
ಎಸೆವ ನಿರ್ಲಜ್ಜಯ್ಯ ।
ನೊಸೆದು ಪಾಡುತ ಸಂ ।
ತಸದಿ ವಸ್ತ್ರವನರ್ಪಿಸಿದನು ॥ ೯೭ ॥

ಶುದ್ಧರಾಗದಿ ಸಿದ್ಧ ।
ಬುದ್ಧಯ್ಯನಲ್ಲಯ್ಯ ।
ನುದ್ಗತ [4]ಸುಮತಿವ್ರತಾ[4]ಳಿ ॥
ಭದ್ರಗಾಯಕದೇವ ।
ರಾದ್ಯರೊಲ್ ಮಿಗೆ ಹಿಮ ।
ಕೃದ್ಧರನನು ಕೇಳಿಸಿದನು ॥ ೯೮ ॥

ನಾರದ ಸಕಳೇಶ ।
ಚೇರಮ ನಿಜಲಿಂಗ ।
[5]ಚೋರ[5] ಚಿಕ್ಕಯ್ಯ ಕಿನ್ನರನ ॥
ಓರಂತೆ ಪಾಡುತು ।
ಮಾರಮಣಗೆ ವಲ್ಲ ।
ಕೀ ರವಗಳ ಕೇಳಿಸಿದನು ॥ ೯೯ ॥

ಮಲುಹಣ ಮಯ್ಯೂರ ।
[6]ನ[6]ಲಘು ಕೇಶವ ಭೋಜ ।
ಮಳೆಯ ರಾಜೇಂದ್ರನುದ್ಘಟನು ॥

---

1-ವಚಲ (ಕ ) 2-ಧರಗಂತಿ (ಅ, ಎ ) 3-ಶೇ (ಇ.) , ನೇ (ಅ, ಉ, ಎ, ಕ, ಗ, ಜ.)
-ಮತಿ ವಾತ ವ್ರಾಳಿ (ಉ, ಕ ) 5-ಚಾರು (ಅ, ಇ, ಉ, ಎ, ಕ, ಜ, ಟ )
-ವ (ಅ, ಇ, ಉ, ಎ, ಕ, ಚ.)

ಹಲಗೈದುಗಾರನು ।
ಜ್ವಲ ಹರಿಹರನಂತೆ ।
ಸಲೆ ಪೊಗಳ್ದನು ಸೋಮಧರನ ॥ ೧೦೦ ॥

ಸಕಲೋಪಚಾರಂಗ ।
ಳಕುಟಿಲಾತ್ಮಗೆ ಮಾಡಿ ।
ಆಕಳಂಕಚರಿತ ಜಂಗಮದ ॥
ಪ್ರಕಟ ಪ್ರಸಾದ ಭುಂ ।
ಜಕನಾಗಿ ಶರಣರೊಳ್ ।
ಸುಖಮಿರುತಿರಲೊಂದು ದಿವಸ ॥ ೧೦೧ ॥

ಗುರು ಸೋಮನಾಥನ ।
ವರ ಮನ ನೋಡಲಾ ।
ಭರಣದೊಳೊಂದು ಸರ್ಪನನು ॥
ತ್ವರಿತದಿ ಕಳುಪೆ ಭೋ ।
ರ್ಗರೆವುತ ದಾರಿಯೊ ।
ಳಿರುತಿರ್ದುದೊಂದೆಸೆಯಲ್ಲಿ ॥ ೧೦೨ ॥

ಕುಸುಮವಾಟಿಗೆ ಭರ ।
ವಶದಿ ಬರಲು ಮುಂದೆ ।
ವಿಷಭುಜುಂಗಮನಡ್ಡಬಿದ್ದು ॥
ವಸಿದು ಬಲ್ ಮೊರೆವುತಿ ।
ದ್ದೆಸೆಯ ಸಿಟ್ಟಿಸುತಲಿ ।
ಕುಸಿದರೆವೆಡೆಯಗೊಂಡಿರಲು ॥ ೧೦೩ ॥

ಬರುತ ಭೈರವದೇವ |
ಚರಣವ ನೀಡೆ ಪೇ |
ರ್ಬೆರಲನವುಡಿ ಮರ[1]ಳ[1]ವುಡಿ ||
ಪೊರಳ್ದು ಚಪ್ಪಿರಿದುರು |
ದಿರವ ನೀಂಟಲು ತೃಪ್ತಿ |
[2]ಯುರೆಗೊಳ್ವ[2]ದೆಂದು [3]ಸುಮ್ಮ[3]ನಿರೆ || ೧೦೪ ||

ದಣಿದು ದಣ್ಣನೆ ಬಿಟ್ಟು |
ಫಣಿ ತೊಲಗಲು ವೀರಾ |
ಗ್ರಣಿ ಭೈರವಾಂಕ ಪೂಗೊಯ್ದು ||
ತ್ರಿಣಯನಾರ್ಚನೆಗುರ |
ವಣಿಸಿ ಮನೆಗೆ ಬಂದು |
ಗಣಮೇಳಾಪದಿ ಸುಖಮಿರಲು || ೧೦೫ ||

ಬಂದು ಭೈರವದೇವ |
ಗೆಂದರೊಡನೆ ನಿಮ್ಮ |
ನಿಂದು ಮುಟ್ಟಿದ ಫಣಿ ಈಗ ||
ಹೊಂದಿತೆ[4]ನಲು ಕಡು[4] |
ನೊಂದು ಮಹೇಶ್ವರ |
ವೃಂದ ಸಹಿತ ನಡೆತಂದು || ೧೦೬ ||

ಉರಗನ ಶ[5]ವ[5]ಗಂಡು |
ತ್ವರಿತದಿಂ ಹರಹರ |
ಗುರುವೆ ನಮಃಶಿವಾಯೆಂದು ||

---

1-ಳ್ದ (ಅ, ಇ, ಉ, ಎ, ಕ, ಗ, ಜ) 2-ಹೊರಗೊಳ್ಳ (ಇ) 3 ಬೈಸಿಕ (ಉ.)
4-ನುತ ಕರ (ಕ.) 5-ಬ (ಉ, ಎ, ಕ.)

ಕರವಿಟ್ಟು ತಡಹೆ ನೈ |
ಮುರಿದೆದ್ದು ಪೆಡೆಯೆತ್ತು |
ತ್ತಿರೆ ಭೈರವಾಂಕ ಪೋಗೆನಲು || ೧೦೭ ||

ಇದು ಕರಚೋದ್ಯವಿ |
ದದುಭುತ ಹಿಂದೆ ಕೇ |
ಳಿದೆವು ಹಾವಿನ ಹಾಳಿನೊಳಗೆ ||
ಸದುಭಕ್ತ ಕಲ್ಲಯ್ಯ |
ಮುದದಿಂದ ಪಡೆದನೆಂ |
ಬುದ ಪೇಳುತೊಡನೆ ಮತ್ತೋರ್ವ || ೧೦೮ ||

ಉರಿಯನುಗುಳುತತಿ |
ಭರದಿಂದ ಸಿಂಗಿ ಮು |
ತ್ತುರುಗ ಬಂ[1]ದವ್ರು[1]ಡಿ ತಾನಳಿಯೆ ||
ಕರುಣದಿಂದಪೆ ನೋಡಿ |
ಹರಣವನದಕಿತ್ತ |
ತ್ವರಿತದೊಳ್ ಸಿಂಗಿ ಬೊಪ್ಪಯ್ಯ || ೧೦೯ ||

ಗುರು ವೇಮನಾರಾಧ್ಯ |
ಉರಗನಿಂ ಮಡಿದ ಕು |
ವರನ ಪಡೆದನೇಳು ದಿವಸ ||
ಧರೆಯೊಳು ಪೂಳಿರ್ದ |
ತರುಣನ ಪಡೆದ ಕ |
ದಿರೆ [2]ರೇ[2]ಮತಂದೆಯಂತಲ್ಲ || ೧೧೦ ||

---

1. ದಾ (ಕ, ಗ, ಚ, ಜ.) 2. ವೇ (ಗ.)

ಅಡವಿಯೊಳ್ ಕ್ರೂರಾಹಿ |
ಕಡಿಯೆ ಗಂಡನ ಬಾಯ್ |
ಬಿಡುತ ಶ್ರೀ ಗುರುವೆ ಹಾ ಎಂಬ ||
ನಿಡುರವಗೇಳ್ದು ಬಂ |
ದೊಡನೆ ಪ್ರಾಣವನಿತ್ತ |
ಮೃಡಮೂರ್ತಿ ಜ್ಞಾನಸಂಬಂಧಿ || ೧೧೧ ||

ವಿನತೇಯ ಮಗನಿಂದ |
ತನುವಳಿದಜಗರ |
ವನು ಕಾಣುತವೆ ಕಡುನೊಂದು ||
ನೆನೆದಭವನ ಮೂರ್ತಿ |
ಯನು ಪ್ರಾಣವದಕಿತ್ತ |
ಅನಘ ನಿರ್ವಿಷದ ಸಂಗಯ್ಯ || ೧೧೨ ||

ಹರಣಗಳ್ಳರು ನಿಮ್ಮ |
ಹರನಾಭರಣವನೊಯ್ |
ದರು ನೋಡಿ ನೋಡಿರೆಂದೆಲ್ಲ ||
ಪರಿಹಾಸಗೈವ ಜೈ |
ನರು ನೋಡುತಿರಲಿತ್ತ |
ಹರಣವನದಕೆ ಧರ್ಮಯ್ಯ || ೧೧೩ ||

ಹುತ್ತಿನಿಂ ತೆಗೆದು ಚೆಲ್ |
ವೆತ್ತಾಭರಣವ ಮಾ |
ಡಿತ್ತು ಪೇರ್ಬೆಲೆಗೊಂಡು ಹರನ ||

ಭಕ್ತಗೆ ಕೊಟ್ಟು ಮೇ |
[1]ಣಿ[1]ತ್ತುದಿಲ್ಲವೆ ಪ್ರಾಣ |
ಉತ್ತಮ ಬಾಲಸಂಗಯ್ಯ || ೧೮೪ ||

ಉರಗ ಕುಲದ ಬಾರಿ |
ಬರೆ ಪರಹಿತಕಾಗಿ |
ಶರೀರವ ಖಗಪತಿಗಿತ್ತು ||
ಧರಣೀಶ ಜೀಮೂತ |
ಹರಕೃಪೆವಡೆದಿತ್ತ |
ಹರಣವ ನಾಗಸಂತತಿಗೆ || ೧೮೫ ||

ಹಾವೆನೆ ಹೆದರಿ ಹಾ |
ಹಾವೆನುತವೆ ಬಿಟ್ಟ |
ಜೀವವ ನಾಗ ಪರೋ[2]ಕ್ಷಿ[2] ||
ಹಾವು ಬಂದವುಡಿ ತಾ |
ಜೀವವ [3]ಬಿಡಲಿ[3]ತ್ತ |
ನೀ ವಿಭು ಭೈರವದೇವ || ೧೮೬ ||

ಇಂತೆಂದು ಶರಣರ |
ನಂತರ್ ಪೊಗಳುತಿರೆ |
ಸಂತಸ ಮಿಗೆ ಭೈರವಾಂಕ ||
ಸ್ವಾಂತವಲರಿ ಗಣ |
ತಿಂಥಿಣಿಯೊಳು ನುಡಿ |
ದಂ ತನ್ನ ಮಹಿಮೆಯುನ್ನತಿಯ || ೧೮೭ ||

---

1-ಲಿ (ಅ. ಎ.) 2-ಕ್ಷ (ಇ.) 3-ನದಕಿ (ಗ.)

ಇಂದು ವೊದಲು ಫಣಿ |
ತಿಂದೊಡೆ ಮರ್ದು ಮ |
ತ್ತೊಂದಿಲ್ಲ ಸೋಮಶೇಖರನ ||
ಗಂಧ ಪ್ರಸಾದವ |
ತಂದು ತೊಡೆಯೆ ಪೋಪು |
ದೆಂದು ಶಿವೈಕ್ಯಗೋಷ್ಠಿಯಲಿ || ೧೧೮ ||

ಇರೆ ಭೈರವಾಂಕನ |
ನೊರೆದು ನೋಡಲು ಕೃಪಾ |
ಶರಧಿ ಸೋಮೇಶ ನುತ್ತೋರ್ವ ||
ಅರಿಬಿರಿದೆಸೆವ ಸಂ |
ಗರ ವೀರನಥಟನ |
ಚ್ಚರಿಯ ಜಂಗಮವ ಕಲ್ಪಿಸಿದ || ೧೧೯ ||

ಅತುಳ ಪರಾಕ್ರಮೋ |
ನ್ನತ ವೀರನೈತಂದಾ |
ಯತವಾಗಿ ಭೈರವಾಂಕನಿಗೆ ||
ಖತಿ ಪುಟ್ಟುವೊಲು ಲಂಗಿ |
ಸುತ ಜಂಗೆಯಿಡುತ ಬಾ |
ಮಥನಿಸೆನ್ನೊಡನೆಂದು ನುಡಿದ || ೧೨೦ ||

ನಮಗೆ ಜಂಗಮದೊಳ್ ಕಾ |
ದುವುದೇತಕೆನೆ ಮರಳ್ |
ದವಗಡಿಸಿದ[1]ನಾತ[1] ಬಳಿಕ ||

1. ನವ (ಅ, ಇ, ಉ, ಎ, ಕ, ಗ, ಜ, ಟ.)

ಶಿವ ಶಿವ ಒಲ್ಲೆನೆಂ ।
ಬವನೊಳು ಯುದ್ಧ ಭಿ ।
ಕ್ಷವನೀಡು ನಿನಗಾಣೆಯೆನಲು ॥ ೧೨೧ ॥

ಭಿಕ್ಷವಿಲ್ಲೆಂದು ನಿರ್ ।
ದಾಕ್ಷಣ್ಯ ಗೆಯ್ದನ ।
ನೀಕ್ಷಿಸಿ ಮುನಿಯೋರ್ವ ಶಪಿಸೆ ॥
ಆಕ್ಷಣದೊಳು ಬ್ರಂಹ ।
ರಾಕ್ಷಸನಾಗುಂಬ ।
ಭಿಕ್ಷವಿತ್ತವ ಶುದ್ಧನಾದ ॥ ೧೨೨ ॥

ಪುನರಪಿ ದಾರಿದ್ರ ।
ಪುನರೇವ ಪಾಪಿಯೆಂ ।
ದೆನೆ ಭದ್ರದತ್ತಗೆ ಮುನಿದು ॥
ಮುನಿ ಶಾಪವೀಯಲಾ ।
ತನು ಘನ ಪಾಪಿಯಾ ।
ತನಯನಾದನು ಶ್ರೀಗಿರಿಯಲಿ ॥ ೧೨೩ ॥

ಆಣೆ ಎನಲು ಮಾರಿ ।
ಕ್ಷೋಣಿಯರಿಯೆ ದಂಡ ।
ಪಾಣಿಯ ಪುರದಿ ವೈತರಣಿ ॥
ತಾಣದೊಳಿರೆ ಶಿವ ।
ನಾಣತಿಯಿಂ ಸಿದ್ಧ ।
ಕೇಣದಿಂ ತೆಗೆದ ಬೊಮ್ಮಯ್ಯನ ॥ ೧೨೪ ॥

ಗರುಡನಾಣೆಯನಿಟ್ಟು |
[1]ಗೆ[1]ರೆಯ ಬರೆಯೆ ವಿಾರ |
ಲೆರಡು ತುಂಡಹವು ಕ್ರೂರಾಹಿ ||
ಹರನಾಜ್ಞೆಯನು [2]ವಿಾರಿ[2] |
ದುರಿಯ ನಾಲಗೆಯ ಕೊ |
ಯ್ದಿರಿಸನೆ ವೀರನಂತಾಗಿ || ೧೨೫ ||

ಜಂಗಮದಿಷ್ಟವ |
ಸಾಂಗವಾಗೀವುದು |
ಲ್ಲಂಗಿಸದಿರ್ಪುದಾಣೆಯನು ||
ಹಿಂಗದೀ ಎರಡು ವ್ರ |
ತಂಗಳಾಗಿಹುದರಿಂ |
ಪೊಂಗುತೊಡನೆ ಭೈರವಾಂಕ || ೧೨೬ ||

ಸುರಗಿದೆಗೆವುತ ಮುಂ |
ಮುರಿದು ದಂಡೆಯ ನೋ[3]ಡಿ[3] |
ಭರದಿ [4]ಬಲ್ ಜಂಘೆಯನೂರಿ[4] ||
ಸರಸದಿ ನಡೆದು ಚೆ |
ಚ್ಚರದಿ ಲಾಗಿಸಿ ವೈರಿ |
ಯುರವ ಗರ್ಜಿಸಿ ಭೈರವಾಂಕ || ೧೨೭ ||

ತಿವಿಯೆ [5]ಕ[5]ಟ್ಟುಗಿದು ಬಿ |
ದ್ದವನಿರುತಿರಲಿತ್ತ |
ಶಿವಗಣ ನಿವಹ ಖೋ ಎಂದು ||

---

1-ಗ (ಅ, ಉ, ಎ, ಕ, ಜ.) 2-ಮರ (ಅ, ಇ, ಉ.) 3-ಡ್ದಿ (ಅ, ಇ, ಉ.)
4-ಬಲ್ಜಂಗಳಂ ಬಾರಿ (ಉ, ಚ.) , ಬಲ್ಜಂಘು ಜಾರಿಸುತೆ (ಕ.) ; ಬುಜಂಗಳ ಹಾರಿ (ಗ, ಜ.) 5-ತ (ಅ, ಇ, ಉ, ಎ, ಕ, ಗ, ಚ, ಜ, ಟ.)

ಇವನು ಭಕ್ತನೆ ಜಂಗ |
ಮವ ಕೊಂದನೆಂಬವ |
ರವರಿಷ್ಟವಿತ್ತನೆಂಬವರು || ೧೨೮ ||

ಹರ ಪಾರ್ಥರುಭಯು ಸಂ |
ಗರದೊಳ್ ಕಿರೀಟಿ ಶಂ |
ಕರನ ಕೊಂದನೆ ಆದಂತಿರಲಿ ||
ಚರ ರೂಪ ತಳೆದು ಸ |
ಮರದಿ ಪಗೆವ ಬರೆ |
ಹರಿಸಿತ್ತಿಲ್ಲೇಣಾದಿನಾಥ || ೧೨೯ ||

ಕರಿಕಂಠನವನಂತೆ |
ಮರಹಿಂದೆ ದಾಯಾದ್ಯ |
ನಿರಿಯೆ ತಾ[1]ಳ್ದನು[1] ಸೇದಿರಾಜ ||
ಬರಿ ವೇಷದಿಂ ಮೋಟ |
ತರಿಸಂದೊರೆಯೆ ತಾಳ್ದ |
ನುರುವಿಯೊಳ್ ದಸರಿದೇವಯ್ಯ || ೧೩೦ ||

ಇವನೆಮ್ಮ ಸಿರಿಗಿಯು |
ಕುವರನೆಂಬವಳ ಕ |
ರವ ಕೊಯ್ದನು ಕಲಿಕಂಬರಾಯ ||
ಶಿವಭಕ್ತ ನಿಂದೆಗೆಯ್ |
ವವನನಿರಿದು ಹಂ |
ತವ ತಂದ ಜಗದೇವಯ್ಯಗಳು || ೧೩೧ ||

---

1. ಳಿದ (ಅ.)

ಶಿರವ[1]ನಿ[1]ಕ್ಕನೆ ಸೀಳಿ ।
ಕುರವಿಂದ[2]ವನೆ ಬೇಡೆ[2] ।
ಚರಗಿತ್ತ ಮೊನೆಯಿಡುನಾರು ॥
ಧುರದಿ ಜಟಾಂಕಿತ ।
ಶಿರವ ಕಾಣುತ ತನ್ನ ।
ಶಿರವಿತ್ತ ಪಗಲ್ಕೋಳರಾಯ ॥ ೧೩೨ ॥

ಕದ್ದು ಜಂಗಮ ಬರ ।
ನಿರ್ಧರ ಶೂಲದೊಳ್ ।
ಬಿದ್ದರು ಗುಂಡಬೊಮ್ಮಗಳು ॥
ಸದ್ಯ ನೃಪನ ರಾಣಿ ।
ಗಿದ್ದ ಜಂಗಮ ಸತ್ತ ।
ಡೆದ್ದಿರಿಸಿದ ಬಸವೇಶ ॥ ೧೩೩ ॥

ಗರುಡ ನೃಪತಿಯೆಂಬ ।
ನರಮನೆಯೊಳು ರತ್ನಾ ।
ಭರಣವ ಕದ್ದೋಡಿ ಬಂದು ॥
ಮರೆಹೊಕ್ಕ ಜಂಗಮ ।
ಕಿರದೆ ತನುವನಿತ್ತ ।
ವರದ ಶೂಲದ ಬ್ರಂಹದೇವ ॥ ೧೩೪ ॥

ಭಿತ್ತಿಯೊಳ್ ಬರೆದಿರ್ದ ।
ಚಿತ್ರದ ಜಂಗಮ ।
ದುತ್ತಮಾಂಗವನಿರಿಯೆಂಬ ॥

---

1-ಸಿ (ಉ, ಎ, ಕ, ಗ, ಚ, ಜ, ಟ)  2-ಲಿರಲೋರ್ವ (ಅ, ಎ, ಜ.)

ಮತ್ತೆ ನರರನಿರಿ |
ದೊತ್ತಿ ಕೆಡಪಿದನ |
ತ್ಯುತ್ತಮ ಕೋಲಶಾಂತಯ್ಯ || ೧೩೫ ||

ಹರ ಹರಿ ಭಜಕನೆಂ |
ದಿರದೆ ಗಳಹಿದನ |
ನಿರಿದು ಕೆಡಹಿದ ಕಕ್ಕಯ್ಯ ||
ಹರನಿಂದ್ಯೆ ಗೈದನ |
ಶಿರವ ಕೊಯ್ದು[1]ಟ್ಟಜ[1] |
ಶಿರವಿತ್ತ ವೀರಭದ್ರಯ್ಯ || ೧೩೬ ||

ಶಿವನ ಲಾಂಛನ ಪೊತ್ತು |
ಬವರದೊಳ್ ಬಂದು ಪ |
ಗೆವನಿರಿಯಲು ಶಿವನೆಂದು ||
ತವೆ ನಂಬಿ ಪಾರ್ವತೀ |
ಧವನ ರೂಪಾದ ಸಂದೇ |
ಹವೇನು ಸಿಂಘುಮುರಾ[2]ಯ[2] || ೧೩೭ ||

ಮುಗ[3]ನ[3] ಮುಂಡೆಯು ಹೇನ |
ತೆಗೆವುತ್ತ ಗೂಳಿಯೊ |
ರಗೈದೆನುತ್ತ ಕೊಂದವಳ ||
ಜಗದೊಳತ್ಯಾಶ್ಚರಿ |
ಮಿಗೆ ಭೋಂಕನಿರಿದ ಸಿ |
ಷ್ಠಿಗೆ ನಿಜವಹ ರಾಮನಾಥ || ೧೩೮ ||

---

1–ಟ್ಟುವೀರ (ಇ.) 2–ಜ (ಅ, ಇ, ಉ, ಎ, ಗ, ಜ, ಟ.) 3–ಳ (ಋ.)

ಕುಡಿಯೊಕ್ಕಲಿಗ ನೊಕ್ಕಿ ।
ಬಡಿದ ನಂದಿಯನೆಂದು ।
ಮಡದಿಯೊಡನೆ ಪೇಳ್ವ ವೆಂಗಿ ।
ಪೊಡವಿ ಪಾಲನ ಶಿರ ।
ಗಡಿದು ಬಿಸುಟ ವೀರ ।
ಹಡಪದ ರೇಚಿದೇವಯ್ಯ ॥ ೧೩೯ ॥

ಪರಮ ಪಾವನ ಚಾರು ।
ಚರಿತ ಜಂಗಮವನೀ ।
ಪರಿಜಾತಿಯೆಂದು ಗಳಹಿದ ॥
ಧರಣಿ ಸುರರ ಕೊಂದು ।
ಕರುಳ ತೋರಣಗಟ್ಟಿ ।
ದುರುತರ ವೀರ ಗುಡ್ಡಯ್ಯ ॥ ೧೪೦ ॥

ಹರ ಭಕ್ತನೋರ್ವನ ।
ಹರಿಸಿದ ಶ್ವೇತಮ್ಮ ।
ದ್ಧರನ ಶಿರವ ಹೊಡದಿಡುಕಿ ॥
ಪರಿಕಿಸಿ ನೋಳ್ಪೆನೆಂ ।
ಬರಿಗೆಲ್ಲ ಹುಳುವನಾ ।
ಶರೀರದಿ ತೋರ್ದಿರಿಭಕ್ತ ॥ ೧೪೧ ॥

ಶಿವ ನಿಂದ್ಯೆಗೆಯ್ಯಲಂ ।
ತವರ ಬೆಂಬಳಿಯಟ್ಟಿ ।
ಶಿವನಾದ ಕಲಿ ಚಟ್ಟಾಂಡರು ॥

ಇವನಿಂತಿರಿದು ಕೊಲ್ವು ।
ದವಿಚಾರವೆಂದೆಲ್ಲ ।
[1]ಭೌವನ ಗಣಂಗಳೆನುತಿರೆ ॥ ೧೪೨ ॥

ಎಡೆಯಾದುದಿದೆ ಭಕ್ತ ।
ರೊಡೆಯರುಗಳ ಬೇಗ ।
ಲೊಡಗೊಂಡು ಬನ್ನಿರೆಂದೆಂಬಾ ॥
ಮಡದಿಯ ನುಡಿಗೇಳು ।
ತ್ತೊಡನೆ ಮಹೇಶ್ವರ ।
ರಡಿಗೆ ಮಣಿಯಲತಿ ಕನಲಿ ॥ ೧೪೩ ॥

ಕೊಂದೆ ಜಂಗಮವನೇ ।
ನೆಂದೆಮ್ಮ ಕರದಪೆ ।
ಎಂದೆನೆ ದೇವ ಕೇಳವರು ॥
ಬಂದಪರ್ ನಿಮಗಿಂದ ।
ಮುಂದೆ ನಾನಿವರಿಷ್ಟ ।
ವಂ ದಿಟ ಸಲಿಸಿತುಂಟುಂಟು ॥ ೧೪೪ ॥

ಎನಲು ಬೇಗೆದ್ದು ಭ ।
ಕ್ತ ನಿಕಾಯ ವಿಸ್ಮಿತಾ ।
ನನರಾಗುತಿರೆ ಭೈರವಾಂಕ ॥
ಅನಘ ಶರಣರೊಕ್ಕು ।
ದನು ಕೊಂಬರೇಳೇಳೆಂ ।
ದೆನುತಿರಲೊಡನೆ ವ್ಯೆ ಮುರಿದು ॥ ೧೪೫ ॥

---

1. ಶಿ (ಅ, ಎ.)

ಉಘೆಯುಘೆಯುಘೆಯೆಂದು ।
ಪೊಗಳುತ ಕೈಗಳ ।
ಮುಗಿವುತ ಶರಣರ ಪದಕೆ ॥
ಮುಗುಳ್ದಿರಗಲು ಕಂಡು ।
ಜಗಕಿದಾಶ್ಚರಿಯೆಂಬ ।
ರುಗಳ ದಟ್ಟಿಸುತೋರ್ವ ನುಡಿದ ॥ ೧೪೬ ॥

ಬಸವ ಜಂಗಮಕೋರ್ವ ।
ಶಶಿಮುಖಿಗೋಣಿಯಿಂ ।
ದೆಸೆವ ತಾಪಸಗಸುವಿತ್ತ ॥
ಮುಸುಟಿಯ ಚೌಡಯ್ಯ ।
ಅಸುವಿತ್ತ ಸಕಳೇಶ ।
ಶಿಶುವಿಂದ ಚಿಕ್ಕವಾದಣ್ಣಗೆ ॥ ೧೪೭ ॥

ಅರುಹತ[1]ರಿಂ[1] ಸತ್ತ ।
ತರುಣ ಭೂಮಿಯೊಳು ಪ್ರ ।
ಳ್ದಿರಲಾರು ತಿಂಗಳಂದಿಂಗೆ ॥
ಭರದಿ ತೆಗೆಸಿ ಕೊಟ್ಟ ।
ಹರಣವ ಕೋವೂರ ।
ಶರಣಾಗ್ರಗಣ್ಯ ಬೊಮ್ಮಯ್ಯ ॥ ೧೪೮ ॥

ಮೊಸಳೆ ನುಂಗಿದುದೊಂದು ।
ಶಿಶುವನೇಳ್ವರುಷಕಾ ।
ಯುಸವಿಲ್ಲದಿತ್ತ ನಂಬಣ್ಣ ॥

---

1_ದಿ (ಅ.)

ಪ್ರಸವ ಕಾಲದಿಷ್ಟಸತ್ತ |
ಶಿಶುಗೀರೇಳ್ವರುಪಕ್ಕೆ |
ಆಸುವಿತ್ತ ಜ್ಞಾನಸಂಬಂಧಿ || ೧೪೯ ||

ಮಾರ ಮಥನಗೆ ಜಂ |
ಬೂರ ಮಹಾಕಾಳಯ್ಯ |
ಆರತಿಯೆತ್ತಿ [1]ತಚ್ಛಿರವ[1] ||
ಸೇರಿಸಿಕೊಳುವನ |
ಹೋರಾತ್ರಿಯುದರಿಂಪ |
ಪಾರ ಮಹಿಮೆಯೇಸಿವನ || ೧೫೦ ||

ಶಿರವ ತ್ರಿಕಾಲದೊ |
ಳರಿದು ಗೋವಿಂದಭ |
ಟ್ಟರು ಶಿವಗಿತ್ತದ ಬಿಸುಟು ||
ಮರಳಿ ಪಡೆವ ಚೆಲ್ವ |
ಶಿರವನೀಪರಿ ದಿನ |
ಚರಿಯೊಳಾಶ್ಚರ್ಯವೇಸಿವನ || ೧೫೧ ||

ಶಿರವನಪರಿಮಿತ |
ವರಿದಿತ್ತ ಚಿರಕೆಲ್ಲ |
ಚಿರಿರವ ಪಡೆದು ಶಂಕರನ ||
ಬೆರಸಿ ಜೇಂಕ್ಲಿಪ |
ವೊರಟವದ ಬಂಕಿದೇ |
ವರ ಮಹಿಮೆಯ ಮುಂದಿನೊಂದೆ || ೧೫೨ ||

1–ತತ್ಶಿವನ (ಇ, ಜ), ಪುತ್ರಿರವ (ಎ.)

ಗುರುವಿನಂಗದೊಳು ವ್ಯತ್ |
ಶಿರವ ಸಂಧಿಸುತಲಾ |
ಶಿರಕೆ ವೃಣ್ಮಯದ ಕಾಯವನು ||
ಮರಳಿ ಸಂಬಂಧಿಸೀ |
ರ್ವರು ಗುರುವಡೆದ ಸ |
ದ್ಗುರು ಭಕ್ತಿರೂಪ ನನ್ನಯ್ಯ || ೧೫೩ ||

ಕಾರುಕರ್ ನೆರದೊಂದು |
ದಾರುವಿನೊಳು ನ[1]ವ್ಯ |
ಚಾರು[1] ಮೂ[2]ರ್ತಿಯ[2]ನಳವಡಿಸಿ ||
ಕಾರಪರ್ವದಿ ತೋರ |
ಲೋರಂತಸುವನಿತ್ತ |
ಪಾರ ಮಹಿಮ ದಂಡನಾಥ || ೧೫೪ ||

ಆನೆಗೆಮುಂ [3]ಸತ್ತ |
ಮಾನ[1]ವ[1]ಗಸುವಿತ್ತ |
ನೇಸೆಂಬೆ ಮಡಿವಾಳಯ್ಯಗಳು ||
ಸೂನುವಳಿಯೆ ಸತ್ತ |
ಮಾನಿಸಿಗಸುವಿತ್ತ |
[5]ಭೂನುತ[5] ಪ್ರಭಾತಯ್ಯಗಳು || ೧೫೫ ||

ಜಲವೆಣ್ಣೋರ್ವಳ ಗೃಹಾ |
ನಲ ನುಂಗೆ ಕಾವಾಗ್ನಿ |
ಯೊಳು ಜೀವುತಿರ್ಪ ಜಂಗಮದ ||

1_ಂರ್ಯಾಕಾರ (ಎ) 2 ತ್ರನ (ಅ, ಎ) 3_ಸ್ವ (ಇ.) 4 ಸ (ಅ, ಇ, ಉ, ಕ, ಜ, ಟ) 5 ನೇಸೆಂಬೆ (ಉ, ಕ, ಜ, ಟ.)

ಒಲುವೆಂಗಾಣುತ ಶಿಖಿ ।
ದಲೆವಿಡಿದುಗುಳಿಸಾ ।
ಲಲನೆಯಿತ್ತುರುಗರಾಯಣ್ಣ ॥ ೧೫೬ ॥

ಸನ್ನಿದರತ್ಯಂತ ।
ಚಿನ್ನಿಲೆಯುರು ಸುಕ್ರ ।
ಸನ್ನರು ಮಹಿಮರಗಣಿತ ॥
ಇನ್ನು ಉಂಟವರೊಳಿ ।
ವನ್ನಧಿಕತೆಯಾವು ।
ದೆನ್ನುತಿರಲು ಭೈರವಾಂಕ ॥ ೧೫೭ ॥

ಶರಣೆನುತೊಡನೆ ಮಂ ।
ದಿರಕ್ಕೈ[1]ದಿ[1] ಬರುತಪೆ ।
ಹರಗಣಾರಾಧನೆ [2]ಮಾಡಿ[2] ॥
ಚರಲಿಂಗವೊಕ್ಕುದ ।
ಚರಣ ಜಲ ಸವಿ ।
ದಿರುತಿರೆ ಶರಣ ಗೋಷ್ಠಿಯಲಿ ॥ ೧೫೮ ॥

ಬಳಿಕೊಂದು ದಿವಸ ಪೊಂ ।
ಪುಳಿ ಪೋಗಿ ಶರಣ ಸಂ ।
ಕುಳದೊಡನಾನಂದವೆರಸಿ ॥
ನಳನಳಿಸುತ ಕೊರ್ವಿ ।
ಬೆಳೆದ ರಸಾಲದ ।
ನೆಳಲ ಸಾರ್ದಿರಲಲ್ಲಿಗೋರ್ವ ॥ ೧೫೯ ॥

---

1-ತ (ಗ.)    2 ಗೈದು (ಇ.)

ಜಂಗಮ ರೂಪಿಂದ ।
ಲಂಗಜಹರ ಬಂದು ।
ಪೊಂಗುತ ಭೈರವದೇವ ॥
ಸಾಂಗ[1]ವಾ[1]ಗೀಗೆಮ್ಮ ।
ಲಿಂಗಕ್ಕೆ ನೀಡಿನಿ ।
ವಣ್ಗಳನೆಂದೆನುತಾಗ ॥ ೧೬೦ ॥

ಇದರ ಪಣ್ಣತ್ಯಂತ ।
ಮಧುರ ಸಂಜೀವನ ।
ಸುಧೆಯಿಂದ ನೂರ್ಮಡಿಯೆಂದು ॥
ಮದನಾರಿಯಾಗ ಬೇ ।
ಡಿದ ಭೈರವಾಂಕನ ।
ಮುದದಿ ತಾಪಸರೂ[2]ಪ ತಾಳ್ದು[2] ॥ ೧೬೧ ॥

ಜೀಯ ಹಸಾದವ ।
ಯ್ಯಯ್ಯ ಬದುಕಿದೆನೆಂ ।
ದೊಯ್ಯನಾತರು ಶಾಖೆಗಡರಿ ॥
ರಯ್ಯವಾಗಿಹ ಪಣ್ಣ ।
ಕಯ್ಯಾರೆ ತಿರುತಿರು ।
ಗೀಯಲನಂತ ಭಕ್ತರಿಗೆ ॥ ೧೬೨ ॥

ಅವರೆಲ್ಲ ಶಿವಗಿತ್ತು ।
ಸವಿದು ಸವಿದು ನಿಜ ।
ಸವಿಯ ಮಹಾಲಿಂಗಕ್ಕಿತ್ತು ॥

---

1. ಮಾ (ಕ.) 2. ಪುದಳಿದು (ಇ.)

ಸವಿ ತಲೆಗೇರಿ ಪ್ರೊ ।
ಣ್ಮಾವರ್ ಪುಟವೇಳ್ವರು ।
ನಮಗಿನ್ನೂ ಸಾಲದೆನ್ನುವರು ॥ ೧೬೩ ॥

ಕಣ್ಣಾರೆ ಮುಗಿವುತ ।
ಹಣ್ಣ ಸವಿವರು ಮು ।
ಕ್ಕಣ್ಣ[1]ಗೀ ಸವಿ[1]ಯೆಂಬರ್ ಕೆಲರು ॥
ದಣ್ಣನೆ ದಣಿ[2]ದಾಡು[2] ।
ವಣ್ಣ ಕ[3]ಲ್ಲವರು[3]ರೆ ।
ಹಣ್ಣಕೊಂಡಿಟ್ಟಾಡುವವರು ॥ ೧೬೪ ॥

ಹರನ ಗಣಂಗಳಾ ।
ಚ್ಚರಿವಟ್ಟು ಭೈರವೇ ।
ಶ್ವರನೀತ ಪರಮ ಕಾರಣಿಕ ॥
ಗುರುಭಕ್ತಿ ಲಿಂಗ ಸ ।
ಚ್ಚರಿತನಾಗಿಯು ಪಂಚ ।
ಪರುಷವುಂಟಲ್ಲದೊಡೀಗ ॥ ೧೬೫ ॥

ಶ್ರಾವಣ ಮಾಸದೊಳ್ ।
ಭಾವಿಸಿ ಚೂತ ಫ ।
ಲಾವಳಿ ಕೋಟಿ ಸಂಖ್ಯೆಯನು ॥
ಈವರೆ ಜಂಗಮ ।
ದೇವರುಗಳಿಗೆ [4]ಮು[4] ।
ನ್ನಾವ ಪುರಾತರೊಳಿಲ್ಲ ॥ ೧೬೬ ॥

---

1. ನಿರಲಿ (ಇ.) 2. ವುತ (ಉ.) 3. ಲ್ಲಾಡುವರೆ (ಇ, ಉ, ಎ, ಗ.) 4. ಇ (ಗ.)

ಪತಿಯಿತ್ತ ವಸಾವಣ್ಣ ।
ಯತಿಯೋರ್ವಗಿತ್ತಳು ।
ದ್ಧತಚಿತ್ತೆ ಕಾರಿಕಾಲಮ್ಮೆ ॥
ಕ್ಷಿತಿಯೊಳ್ ಜಂಗಮಕೆ ಗೋ ।
ಪತಿಯಿತ್ತ ನಲಿದು ಚಿ ।
ತ್ರಿತ ರಮ್ಯ ಘನಸು ಘಲವನು ॥ ೧೬೭ ॥

ಇಟ್ಟಿಯ ಹಣ್ಣಿವು ।
ಗಿಷ್ಟವೆಂಬರ ಮನ ।
ದಿಷ್ಟವ ಸಲಿಸಬೇಕೆಂಬ ॥
ನಿಷ್ಠೆಯಿಂದಮೃತದ ।
ಗಟ್ಟಿ ಇವೆನಿಸಿತ್ತ ।
ಮುಷ್ಟಿಯ ಚೌಡರಾಜಯ್ಯ ॥ ೧೬೮ ॥

ಭರದಿಂದ ಕಗ್ಗಲ್ಲ ।
ಸುರಭಿಗರೆದು ತನ್ನ ।
ಶಿರದ ಪಾತ್ರೆಯೊಳಿಟ್ಟು ಮುಕುತಿ ॥
ಪುರಕ್ಕೈದು ಪೋಗಿ ಶಂ ।
ಕರನನುಣಿಸಿದಳಾ ।
ಚ್ಚರಿ ಮಿಗಿಲಾಗ ಕಾಳಮ್ಮ ॥ ೧೬೯ ॥

ಸೋಜಿಗವಿದು ಭಕ್ತ ।
ರೋಜೆಗೆಂಬಾ ಕೇಶಿ ।
ರಾಜನ ಮನದ ಸಂಶಯಕೆ ॥

ನೈಜವಪ್ಪಂತೆ ರಾ ।
ರಾಜಿಸುತಿಹ ಭಕ್ತ್ಯ ।
ರಾಜಿಮಾಡಿತ್ತು ಜೊಮ್ಮಯ್ಯ ॥ ೧೭೦ ॥

ರಾಜನ ಮೋಹದ ।
ಪೂಜಾ ಗಜವನೋರ್ವ ।
[1]ಮಾ[1]ಜಾರಿಬಕುತ ಬೇಡಿದಡೆ ॥
ಓಜೆಯಿಂದವೆ ಕೊಟ್ಟು ।
ರಾಜನಾನೆಯುಸಿತ್ತು ।
ನಾಜೋದರಮಾಯಣ್ಣಗಳು ॥ ೧೭೧ ॥

ಹರಭಕ್ತರೇನೇನ ।
[2]ನೆ[2]ರೆಯಲೀವುದ ಕೇಳ್ದು ।
ಚರನೋರ್ವ ಬಂದು ನಾಲ್ಕೆರಡು ॥
ಸಿರಿಯ ಬೇಡ[3]ಲಿಕಾಗ[3] ।
ಸುರಮಣಿಯನು ಕೊಟ್ಟ ।
ಶರಣ[4]ನಾಣತಿ[4]ಯ ಚಂದಯ್ಯ ॥ ೧೭೨ ॥

ತನು ಮನ ಧನವೆಲ್ಲ ।
ಮನಸಿಜಾರಿಯ[5]ವೆ[5]ಂಬ ।
ಧ್ವನಿಗೆ ತಾಪಸ ಬೇಡಲೊಡನೆ ॥
ಅನುರಾಗದಿಂದಂಗ ।
ವನು ತರಿತರಿದು ಕೊ ।
ಟ್ಟನಘ ಹೇರೂರನಾಗಯ್ಯ ॥ ೧೭೩ ॥

---

1–ಪೂ (ಅ, ಉ, ಎ, ಗ, ಚ.) 2–ನೊ (ಅ, ಉ, ಎ, ಚ, ಟ.) 3–ಲುಕೊಟ್ಟ (ಇ.)
4–ನಣತಿ (ಅ.) 5–ದೆ (ಎ, ಕ.)

ಕೃತ್ತಿವಾಸನಿಗುರೆ |
[1]ಭಕ್ತಿ[1]ಮಾಡುವೆನೆಂದು |
ಬತ್ತಿಸಾಯುಧಗಳ ಪಿಡಿದು ||
ತತ್ತನುವನು ತರಿ |
ದಿತ್ತರೆ ಹರಕೃಪೆ |
ವೆತ್ತ[2]ನು[2] ವೀರಸಂಗಯ್ಯ || ೧೭೪ ||

ಈತನ ಮಹಿಮೆಯ |
ತೀತವವರಿಗಿಂದ |
ಭೂತಳಕಭಿನವ ರುದ್ರ ||
ನೂತನ ಕಲ್ಯಾಣ |
ನಾಥನೆನುತ ಭಕ್ತ |
ವ್ರಾತ ಸಂಕೀರ್ತನೆಗಳಲಿ || ೧೭೫ ||

ಪೊಗಳುವ ರಭಸ ಭೇ |
ರಿಗಳ ಪೇರ್ರವ ನಿಸ್ಸಾ |
ಳಗಳ ವೇರ್ದನಿ ಕುಲ ಬಿರಿದ ||
ನುಗುಳುವ ಕಹಳೆ ಶಂ |
ಖಗಳ ಸುನಾದದೊ |
ಳಗೆ ಬರುತಿರ್ದನರ್ಥಿಯಲಿ || ೧೭೬ ||

ಬರಲಿತ್ತ ಪುರದೊಳ |
ಪರಿಮಿತ ಗುಡಿಗಟ್ಟಿ |
ತರ ತರವಿಡಿದುರೆ ನೊಳ್ಪ ||

---

1-ತೃಪ್ತಿ (ಇ, ಉ, ಕ, ಗ, ಚ.)  2-ತ್ರೀ (ಅ, ಎ.)

ಪರಮ ಭಕ್ತಾಂಗನೆ ।
ಯರ ನೋಡುತೆಯ್ದಿ ಮಂ ।
ದಿರ ಪೊಕ್ಕ ಭೈರವರಾಜ ॥ ೧೭೭ ॥

ಲಿಂಗತ್ರಯ[1]ವ[1] ಪೂಜಿ ।
ಪಂ ಗಣ ನಿಕರ[2]ಕ[2] ।
ಷ್ಟಾಂಗವೆರಗಿ ಪೊಡಮಡುವ ॥
ಪೊಂಗಿ ಶಿವಾನುಭಾ ।
ವಂಗಳ ಕೇಳುತು ।
ತ್ತುಂಗ ಭೈರವ ಸುಖವಿರಲು ॥ ೧೭೮ ॥

ಕಾಯಕ ಮಾಡಿ ನಿ ।
ರಾಯಾಸದಿಂ ದೇವ ।
ರಾಯನ ಶರಣಸಂತತಿಗೆ ॥
ಈವುದರಿಯಲು ನಿರ್ ।
ಮಾಯ ಸೋಮೇಶನಂ ।
ದಾಯತವಾದನರ್ಥಿಯಲಿ ॥ ೧೭೯ ॥

ಪರಭಾಷೆ ಸುಲಿಪಲ್ಲು ।
ನರೆ ಗಡ್ಡ ಕಾಷಾಂ ।
ಬರದ ಮುಸುಕು ಜಟಾಬಂಧ ॥
ಕರಿದಾದ ಕಂಥೆಗೋಲ್ ।
ವೆರಸಿ ಬರಲು ಕಂಡು ।
ಶರಣೆಂದು ಭೈರವ[3]ರಾಜ[3] ॥ ೧೮೦ ॥

---

1-ದಿ (ಅ, ಎ.) 2-ಸಾ (ಅ, ಎ, ಕ.) 3-ದೇವ (ಅ, ಉ, ಎ, ಕ, ಗ, ಚ, ಜ, ಟ.)

ಆರೋಗಣೆಯನಿತ್ತು ।
ಪಾರ ಸತ್ಕರಿಸುತತ್ತಾ ।
ವೂರಾವ ದೇಶದಿಂ ಬಂದಾ ॥
ಕಾರಣವೇನೆಂದ ।
ಭೈರವ ದೇವನೊಳ್ ।
ಚಾರ ಸನ್ನಿಭದೇವ ನುಡಿದ ॥ ೧೮೧ ॥

ಸಿಂಧುದೇಶದೊಳಿಹು ।
ದೊಂದು ಸುವಸ್ತುವಿ ।
ದಂ ದಿಟ ನಿನಗೀವ ಭರದಿ ॥
ತಂದೆನೀಯುವರೆಯ ।
ನೆಂದಿತ್ತು ಪೋಗಲಾ ।
ನಂದದಿ ಭೈರವದೇವ ॥ ೧೮೨ ॥

ಹಿತ್ತಿಲೋಳ್ ಖನದದಂ ।
ಬಿತ್ತಿ ನೀರೆರವುತ್ತೆ ।
ಪೊತ್ತು ಸಲಹುತಿರಲಾ[1]ಗ[1] ॥
ಹತ್ತಿ ಚಿಗುರ್ತು ತ ।
ಳಿರ್ತು ಪೂ ಫಲಗಳ ।
ಪೊ[2]ತ್ತಿಂಪು[2] ಸೊಂಪುದೋರುತಿರೆ ॥ ೧೮೩ ॥

ಪತಿ ಭಕ್ತಿಯುಕ್ತೆ ಸೂ ।
ನೃತವಾಣಿ ಮಹಾದೇವಿ ।
ಅತಿ ಪೆಚ್ಚಿ ತಿರಿತಿರಿ ತಂದು ॥

---

1-ಗಿ (ಉ, ಕ, ಗ, ಜ, ಟ.) 2 ತೊತ್ತು (ಎ.)

ಶಿತಿಕಂಠನಣುಗಗರ್ಾ |
ಯುತಮಾಡಿ ನೀಡುವಳ್ |
ಸತತವಪ್ರತಿಯಾದವರೆಯ || ೧೮೪ ||

ಫಲವ ಸುಧಾಪಿಂಡ |
ದೊಲು ಸವಿಮಾಡಿ ನಿ |
ಶ್ಚಲ ಚಿತ್ತೆ ಮಹಾದೇವಿ ಶರಣ ||
ಕುಲಕೆ ನೀಡು[1]ತ್ತಿರೆ[1] |
ಕೆಲವು ದಿನದ ಮೇಲೆ |
ಸಲೆ ಬಿತ್ತೊಣಗಿ ಪೋಗಲಿತ್ತ || ೧೮೫ ||

ಬಂದು ಸೋಮೇಶನಾ |
ನಂದದಿ ಚರರೂಪ |
ನಂದಗೊಳಿಸಿ ಬಾಗಿಲೊಳಗೆ ||
ನಿಂದಿರೆ ಮಹಾದೇವಿ |
ಇಂದುಜೂಟನ ಪಾಡು |
ತೊಂದಿ ತಂಡುಲವ ಚ್ಛಳ[2]ಪಳು[2] || ೧೮೬ ||

ಸುವ್ವಿ ಸುವ್ರತ ಪೂರ |
ಸುವ್ವಿ ಚಿದ್ಘನ ಸಾರ |
ಸುವ್ವಿ ಶರಣ್ಯಾ ಸಂಸಾರ ||
ಸುವ್ವಿ ನಿರ್ಜಿತ ಮಾರ |
ಸುವ್ವಿ ತತ್ವವಿಹಾರ |
ಸುವ್ವಿ ಸರ್ವಾಧಾರ ಸುವ್ವಿ || ೧೮೭ ||

---

1–ತ್ತ ತೀರಲದ (ಇ, ಎ, ಚ.)    2–ಸುತ (ಅ, ಎ.)

ಎಂದು ಪಾಡಿದಳು ಬಾ |
ಲಿಂದುಶೇಖರಗೆ ಸೂ |
[1]ರ್‍ಯ[1]ಂದು ಸಂಗಮ ಸೋಮವಾರ ||
ನಂದ ದೀವಿಗೆ ಕೋಟಿ |
ಯಂದವಡಿಸಿದರ |
ವಿಂದ ಪಾದ[2]ಗ[2] ಶರಣಾರ್ಥಿ || ೧೮೮ ||

ದೇವರ ದೇವನ |
ಭಾವಿಸಿ ತನ್ನೆರ್ದೆ |
ದಾವರೆ ಮನೆಯೊಳಿಂಬಿಟ್ಟು ||
ಸಾವಧಾನದೊಳೊಪ್ಪು |
ವಾವಾಗ ಬೊಂತಲು |
ದೇವಿ[3]ಯರಿ[3]ಗೆ ಶರಣಾರ್ಥಿ || ೧೮೯ ||

ಕಾಮ ವಿದೂರ ನಿ |
ಸ್ಸೀಮ ಯತೀಂದ್ರನಾ |
ದಾ ಮುಗ್ಧಸಂಗಯ್ಯ[4]ಗಳಿ[4]ಗೆ ||
ಶ್ರೀ ಮಹಾದೇವನ |
ಪ್ರೇಮದ ಮೈದುನ |
ರಾಮಯ್ಯನಿಗೆ ಶರಣಾರ್ಥಿ || ೧೯೦ ||

ಶರಣರ ಕರದೊಳು
ಶರಿರವನಿಂಬಿಟ್ಟ |
ಸುರುಚಿರ ಘಟ್ಟಿವಾಳನಿಗೆ ||

---

1_ರೆ (ಅ, ಉ, ಎ, ಕ, ಗ, ಚ, ಟ.) 2_ಕೆ (ಗ, ಚ, ಜ) 3_ಡಿ (ಇ, ಜ, ಟ)
4_ನಿ (ಅ, ಉ, ಕ, ಚ, ಜ, ಟ.)

ಹರಪೂಜೆಯಿಂ ಜನ್ಮ |
ಜರೆ ಮರಣವ ಗೆಲಿ |
ದುರು ಶಿವ ಕೌಮಾರ ಶರಣು || ೧೯೧ ||

ಏಣಾಂಕಧರನ ಬಿ |
ನ್ನಾಣದಿಂ ಪೊಗಳ್ದ ಸೀಂ |
ಬಾಣದ ವರ ಗಣಪತಿಗೆ ||
ಜಾಣ ಜಂಗಮ ಭಕ್ತಿ |
ಪ್ರಾಣವಾಗಿರುತಿರ್ಪ |
ಗೋಣಿಮಾರಯ್ಯಗೆ ಶರಣು | || ೧೯೨ ||

ವ್ಯಾಳಕಂಕಣನ ಸಂ |
ಮೇಳದೊಳ[1]ಹರೆಲ್ಲ |
ಕಾಳಕಂದ[1]ರರ ಶ್ರೀ ಪದಕೆ ||
ತೋಳು ಮಾಲೆಯ ಸೀವ |
ಭಾಳಾಕ್ಷಗುರುತರ |
ಪಾಳಿ ಯಸ್ಯಜ್ಞಾಸಿ ಶರಣು || ೧೯೩ ||

ಅಮಳ ಲಿಂಗಪ್ರಾಣಿ |
ಕಮಳವ್ವೆ ಲಿಂಗ ಜಂಗ |
ಮ ಪ್ರಾಣಿ ವೀರ ರೇಕವ್ವೆ ||
ಅಮಿತ ಶ್ರೀ ಗುರು ಜಂ |
ಗಮ ಲಿಂಗಪ್ರಾಣಿಯು |
ತ್ತಮ ಬಸವನ ರಾಣಿ ಶರಣು || ೧೯೪ ||

---

1-ಹುತಲ್ಲ ವೇಣಾಂಕಧ (ಇ.), ಹ ತಿಲಕವ್ವೆ ತಾಂಡ (ಜ.)
, ಹತಿಲ್ಲ ವೇಳಾಂಫಧನೆ (ಅ, ಉ, ಎ.)

ನಿತ್ಯ ಪ್ರಸನ್ನದ |
ಸತ್ಯ ಶರಣ ಸಂ |
ಸ್ತುತ್ಯ ಪ್ರಸಾದಿ ಬಂಕಯ್ಯಗೆ ||
ಮೃತ್ಯು ವಿರೋಧಿಗೆ |
ಭೃತ್ಯನಾಗಿದ್ದನಾ |
ಮಾತ್ಯಮಲ್ಲಯ್ಯಗೆ ಶರಣು || ೧೯೫ ||

ಬಲದೇವಯ್ಯಗಳಗ್ಗ |
ವಲೆಯದೇವರಸ ಬೈ |
ತಲೆಯ ಮಾಯ್ದೇವಯ್ಯ ಚಾಂಗು ||
ಬಲದೇವ ವೀರಚಿ |
ಕ್ಕಲಿಗೆ ನಾಗಯ್ಯ ಮಹ |
ಬಲದೇವಯ್ಯಗೆ ಶರ[1]ಣಾರ್ಥಿ[1] || ೧೯೬ ||

ಜವ್ವನದೊಳು ಗೆಲ್ದ |
ಪೂವಿಲ್ಲನಘಟನಾ |
ಗವ್ವೆಯರ ಪಾದಕ್ಕೆ ಶರಣು ||
ಸುವ್ವಿ ಶ್ರೀ ಗುರುನಾಥ |
ಸುವ್ವಿ ಶರಣಯೂಥ |
ಸುವ್ವಿಯೆಂದೊನಕೆಯ ನೆಗಹೆ || ೧೯೭ ||

ಅಸಿತರೊಳ್ ಮಹಾದೇವಿ |
ಎನೆ ಬಿಟ್ಟ ಕೈಯ್ಯಲ್ಲಿ |
ದ್ದೊನಕೆಯು[2]ಸ್ಸೈದಿ[2] ಶ್ರೀ ಪಾದ ||

---

1-ಣು (ಅ, ಎ.) 2-ಸೆಯ್ದು (ಕ, ಗ.)

ವನಜದೊ[1]ಳ್ ಬಿದ್ದು[1] ಶರ ।
ಣೆನುತ ಗದ್ದುಗೆಯಿತ್ತು ।
ಅನಘ ಮೂರುತಿಗೊಳ್ಳುದೆಂ[2]ದು[2] ॥ ೧೯೮ ॥

ತಿರುಗಿ ನೋಳ್ಪಾಗಳಂ ।
ಬರದೊಳು ಮುಸಲವ ।
ಚ್ಚರಿಯೆನಲಿರ್ದುದೆಂತೆನಲು ॥
ಹರಿ ಘನವೆಂದನ ।
ಕರವ ನಂದೀಶ ಸಂ ।
ಹರಿಸಿ ಜಗಕೆ ತೋರಿದಂತೆ ॥ ೧೯೯ ॥

ಶರಣಸಂತಾನ ಭಾ ।
ಪುರೆಯೆನೆ ಬಸವ ಬಾ ।
ಚರಸರ ಲೆಕ್ಕ ನಿಮಿತ್ತ ॥
ತರಣಿಯ ನಿಲಿಸಿದಂ ।
ಭರದಿ ಹನ್ನೊಂದಿನೆಂ ।
ಬರು ಪುರಾಣೀಕರಂತಿರಲಿ ॥ ೨೦೦ ॥

ಹರಿಯು ಗೋವರ್ಧನ ।
ಗಿರಿಯ ನೆಗಪಿದನೆಂ ।
ಬ[3]ರು[3] ಮಾತದೇಂ ಬಸವೇಶ ॥
ಅರುಹೆ ವಾದದಲಿಟ್ಟ ।
ಚರಣರಕ್ಷೆಯನಂ ।
ಬರಕೆಂಬ ಮಾತದಂತಿರಲಿ ॥ ೨೦೧ ॥

---

1_ಳದು (ಅ, ಉ, ಗ.) 2 ದ (ಇ.) 3_ರ (ಕ, ಚ, ಜ, ಟ )

ಗೊಲ್ಲತಿ ಜಾರಿ ಬೀ ।
ಳ್ವಲ್ಲಿ ನೆನೆಯೆ ಕರ ।
ಪಲ್ಲವಗಳನೆತ್ತಿ ಭೂಮಿ ॥
ವಲ್ಲಭ [1]ನೋಡಲಂ[1] ।
ತಲ್ಲಿ ಬಸವ ಪಿಡಿ ।
ದೆಲ್ಲರಿವಂತೆ [2]ಹೀ[2]ಗಲ್ಲ ॥ ೨೦೨ ॥

ತಿರುಚಿಟ್ಟಾಂಬಲೇ ।
ಶ್ವರ ಜಾರಿ ಬೀಳುತ್ತ ।
ಹರ ಹರಯೆನೆ [3]ಬಂದು[3] ಕೈಯ ॥
ಕರಡಿಗೆಯನು ಶಿವ ।
ಭರದಿಂದ ಪಿಡಿದನೀ ।
ಪರಿಯುಲ್ಲವಿದು ಕರಚಿತ್ರ ॥ ೨೦೩ ॥

ಹರನ ಭಕ್ತರುಗಳಂ ।
ಬರವನಂತರದೊಳ ।
ಗಿರಿಸಿ ಕುಂಜರನ ಸೀಳ್ಬಿಟ್ಟ ॥
ನರ ವೀರ ಮಡಿವಾಳ ।
ನುರವಣೆ ಮಹಾದೇವಿ ।
ಯುರ ನಿ[4]ಷ್ಟೆ[4]ಗೆಣೆಯೆನ್ನಬಹುದೆ ॥ ೨೦೪ ॥

ಇಂದಿರೆ ವರನ ಜ ।
ಲಂಧರ ತಿರುಪಿಟ್ಟ ।
[5]ಡ[5]ಂದುರೆ ಬಹಿರಾವರಣದಿ ॥

1 ನೊಡನಂ (ಅ, ಇ, ಉ, ಎ) 2 ತ್ರಿಹಿಂ (ಎ) 3 ತಾ (ಅ.) 4 ಟ್ಟೆ (ಚ)
.ದ (ಎ, ಗ.)

ನೊಂದು ಸಿಕ್ಕಿದೀಶ |
ನಂ ಧ್ಯಾನಿಸುತ್ತಿ |
ಪಂದವಲ್ಲಿ[1]ಂತಿವು[1] ಚೋದ್ಯ || ೨೦೫ ||

ಬೆರಳೊಳಜಾಂಡವ |
ಸಿರದೆ ತಳೆದರೆನ್ನು |
ಶರಣರು ಪಿಂದೆ ಮತ್ತಿಂದೆ ||
ಕರಮುಟ್ಟದೊನಕೆಯು |
ಸಿರದೆ ತಳೆದ[2]ಳೆನ್ನು[2] |
ಗುರುಭಕ್ತಿ ಮಹಾದೇವಿ ಬಳಿಕ || ೨೦೬ ||

ಗುರು ಹಾಲ ಸೋಮಶೇ |
ಖರನ ಪಾಡುತ್ತಲಾ |
ಕರಮುಟ್ಟದೊನಕಯು ತೆಗೆದು ||
ಇರಿಸಿ ಬೋನವ ಸಡ |
ಗರದಿ ಪೂಜಿಸ್ಪಾಗಳಾ |
ವರೆ ಫಲವಾಯ್ತು ಎಂದಯ್ಯ || ೨೦೭ ||

ಕೇ[4]ಳೆ ಸತ್ಪು[4]ಲಗಳ |
ತಾಳಿ ಜೋತೂರಗುತ್ತ |
ದೇಳಿ ತೋರಿದಪೆನೆಂದಾಗ |
ಬಾಳ ಜಡಿನ್ರತ ಕ |
ಟ್ಟಳು ಷ್ಟ್ರವಪೀವ |
ನಾಳೋಕಿಸಿದ ನುನ್ನ ಪರ್ಬ || ೨೦೮ ||

---

1-ದು ಕರ (ಗ) 2-ಿ (ಅ, ಇ, ಉ, ಎ, ಕ, ಚ, ಜ, ಟ) 3-ರಿಸಿನೊ (ಇ, ಉ.) 4-ಳಿದ (ಗ)

ಉತ್ತಮ ರತ್ನವಾ |
ಗಿತ್ತನು ಬಸವ ಗು |
ರೋತ್ತಮನೀ ಪರಿಯ[1]ಲ್ಲ[1] || ೨೧೨ ||

[2]ಜ[2]ನ್ನದಿಂ ಪುಲಿ ಗಜ |
ಪನ್ನಗಾನಲ ಡವು |
ರುನ್ನತ ನಿಶಿತ ಶೂಲವನು ||
ಸನ್ನಿದಮೆನೆ ಪಡ |
ದುನ್ನತ ಮುನಿಗಳೋ |
ರನ್ನವುಲ್ಲಿದು ಕರಚೋದ್ಯ || ೨೧೩ ||

ಕಲ್ಲ ನಂದಿಯು ಜಗ |
ವೆಲ್ಲರಿವೊಲು ಕಬ್ಬ |
ಮೆಲ್ಲಿಸಿ ಸಿರಿಯ ತಟಾಕ ||
ದಲ್ಲಿ ನೀರುಣಿಸಿದ |
ಬಲ್ಲಿದ ಛಲದಂಕ |
ಮಲ್ಲ ಬಾಹೂರ ಬ್ರಂಹಯ್ಯ *|| ೨೧೪ ||

ಬರಡುಗವಿಲೆಯು ಸಿ |
ದ್ಧರ ದೇವನೋಡಲ |
ಚ್ಚರಿ ಮಿಗೆ ವೃಷಭ ನುಡಿಸಿದಾ ||
ಪರಿಯಲ್ಲ ಭೈರವೇ |
ಶ್ವರನ ಮಹಿಮೆ ಕೀರ್ತಿ |
ಪ[3]ರ ಉರಗೇಂ[3]ದ್ರಗಸಾಧ್ಯ || ೨೧೫ ||

ಎನುತೆಲ್ಲ ಶರಣಾಳಿ |
ವಿನುತಿ[4]ಸೆ ಭೈ[4]ರವಾಂ |
ಕನು ತಿರಿಪವರೆಯ ಫಲವ ||

1_ಂತೆ (ಚ) 2_ಜ (ಉ) *ಈ ಪದ್ಯ (ಇ, ಟ) ಪ್ರತಿಯಲ್ಲಿಲ್ಲ. 3_ರಮರೆ (ಜ
4_ಸುತಿರೆ (ಗ.)

ಘನ ಹರುಷದಿ ಶಾಖ |
ವನುವಿನೊಳ್ ಮಾಡಿ ಭ |
ಕ್ತನಿಕಾಯಕೆಡೆ ಮಾಡಲಾಗ || ೨೧೬ ||

ಅವರೆಯಿದಮೃತದ |
ತವರೆಂಬರಂತಲ್ಲ |
ಇವರೀಗ[1]ವೆ[1]ನುತ ಸಂತಸದಿ ||
ಸವಿ ಸವಿದಾ ಸವಿ |
ಶಿವಗೆಂಬ ಶಿವಗಣ |
ನಿವಹಕ್ಕೆ ದಣಿವಾಗುವಂತೆ || ೨೧೭ ||

ನೀಡುವರ್ ಸವಿದುದ |
ನೋಡಿ ಮತ್ತವರ್ಗೆಡೆ |
ಮಾಡುವರ್ ಶಿವನ ಶ್ರೀ ಪದವ ||
ಸೂಡುವರ್ ನಲಿದು ಕೊಂ |
ಡಾಡುವರ್ [2]ಪಾ[2]ಡುವರ್ |
ಬೇಡುವರ್ ನಿಜ ನಿತ್ಯ ಪದವ || ೨೧೮ ||

ಗುರು ಪಾದತೀರ್ಥವ |
ವರ ಸುಪ್ರಸಾದವ |
ಹರಗಿತ್ತು ಸವಿ ಸವಿದಾಡು ||
ತಿರೆ ಮಹಾದೇವಿಯರ್ |
ವರ ಭೈರವಾಂಕನ |
ಚ್ಚರಿಗೆ ಸಂದುದು ಚತುಸ್ಸಂಧಿ || ೨೧೯ ||

**ಅಂತು ಸಂಧಿ ೪ ವೃತ್ತ ೪ ಕ್ಕಂ ಪದ ೧೦೬೫ ಕ್ಕಂ ಮಂಗಳ ಮಹಾ**

ಶ್ರೀ ಶ್ರೀ ಶ್ರೀ ಶ್ರೀ ಶ್ರೀ

---

1. ಲೆ (ಇ.) 2-ಕಾ (ಅ, ಉ, ಎ, ಗ, ಟ.)

# ಐದನೆಯ ಸಂಧಿ

## ಭೈರವರಾಜನು ವಾದಿಗಳನ್ನು ಸೋಲಿಸಿ ಕೈಲಾಸಕ್ಕೆ ಪೋದುದು.

**ಚಂಪಕಮಾಲಾ ವೃತ್ತ**

ಸೂಚನೆ —

ಚರ ಗುರು ಲಿಂಗ ಭಕ್ತಿಯುತ ಭೈರವದೇವನಿರ[1]ಲ್ಕೆ ಶರ್ವ[1]ಶಂ |
ಕರ ಗುರು ಸೋಮನಾಥ ಚತುರಂಗ ಬಲವೆರಸೆಯ್ದೆ ಬಂದುದಾ ||
ಶ್ಚರಿಯೆನಿಸಿರ್ದ ವಾದಿಗಳಿಲ್ಲಕೆ[2] ವಾರದಿ ಮಾತನಾಡಿನು |
ತ್ತಿರದೆ ಸಮಂತು ಪೋದ ರಜತಾಚಲ[3]ಕದ್ಭುತಾವಹವ[3]ದ್ಭುತಂ || ೧ ||

**ಪದ**

ಗ್ರಾವಜನಾಥ[4]ನಾ[4] |
ಶಾ ವಸನಕ್ಷೀಣ |
ಭಾವ ಭಾವಜ ದಾವ ದಾ[5]ವ[5] |
ಮಾವರ ವರದೇವ |
ದೇವ ಸಕಲ ಲೋಕ |
ಪಾವನ ಜಯತು ಸೋಮೇಶ || ೧ ||

ಗುರು ಚರ ಚರಣ ಪಂ |
ಕರುಹ ಪೂಜಿತ ಸದಾ |
ಶರಣ ಸಲ್ಲಾಪ ಕಲಾಪಾ ||
ಪರಮ ಪ್ರಸಾದಾನು |
ಭರಿತ ಪಾವನ ಚಾರು |
ಚರಿತ ಸದಾಚಾರ [6]ನಿರುತ[6] || ೨ ||

---

1–ಲೆಸೆವ (ಅ.) 2–ಳಿಗೆಲ್ಲ (ಅ, ಉ, ಎ, ಕ, ಗ, ಚ, ಜ, ಟ ) 3–ಕಾಗಳದ್ಭುತಾವಾಹದ (ಗ.) 4–ನಂ (ಕ.) 5–ಮ (ಗ.) 6–ಚರಿತಾ (ಇ. ಜ.)

ಶಿವ ಸಮಯೋದ್ಧಾರ |
ಶಿವಭಕ್ತಿ ಸಂಸಾರ |
ಶಿವತತ್ವ ಸಾರ ವಿಹಾರ ||
ಶಿವಕೀರ್ತಿ ವಿಸ್ತಾರ |
ಶಿವ ಮಹಿಮಾಧಾರ |
ಶಿವಸಂಗಿ ಭೈರವದೇವ || ೩ ||

ನಿಷ್ಠಾ ಪರಾನಂದ |
ತುಷ್ಟಾನು ಮಹಿಮೋ |
ತ್ಕೃಷ್ಟ ವಿನಮಿತಘರಟ್ಟ ||
ಕಷ್ಟ ಸಂಸಾರ ವಿ |
ನಷ್ಟ ಪುರಾರಿಯ |
ಕಟ್ಟಾಳು ಭೈರವದೇವ || ೪ ||

ಪಾವನ ಚರಿತನು |
ಭಾವ ಶರಣ ಸಂ |
ಭಾವನ ಪ್ರೀತ ಪ್ರಸೀತ ||
ಆವಾಗ ತ್ರೈಲಿಂಗ |
ಜೀವ ಸ[1]ಚ್ಛೈ[1]ರವ |
ದೇವಸೀಪರಿ ಸುಖಿಸಿರಲು || ೫ ||

ನೂತನ ವ್ರತ ವಿ |
ಭೂತಿ ರುದ್ರಾಕ್ಷ ಸ |
ಮೇತ ಲಿಂಗಾಂಗ ಸಂಪನ್ನ ||

1–ಛೈ (ಎ, ಕ, ಚ, ಜ, ಟ.)

ಭೂತಳ ವಂದ್ಯ ವಿ |
ಖ್ಯಾತ ಕಿ[1]ಕ್ಕೇರಿ[1]ಯಿಂ |
ದೋತು ಬಂದನು ಮಲ್ಲ[2]ಣಾರ್ಯ[2] || ೬ ||

ಬರೆ ಕಾಣುತಿದಿರೆದ್ದು |
ಚರಣಕ್ಕೆ ಮಣಿವುತೀ |
ವರ್ಗರು ಶರಣಾರ್ಥಿ ಎಂದೆನುತ ||
ಲಿರೆ ಮಹಾದೇವಿ ಕು |
ಳ್ಳಿರಲಿತ್ತು ಲಿಂಗಾವ |
ಸರಕೆಡೆ ಮಾಡಲಂತಾಗ || ೭ ||

ಬೇಡ ಬೇಡೆನ[3]ಲೇ[3]ಕೆ |
ಬೇಡವಿಂದಾಗ ದೆಂ |
ದಾಡಲಿಂದಾಗದ ಪರಿಯು ||
ಕೂಡೆ ಕೇಳಲಿಕೆ ಗ |
ಣಾಡಂಬರದ ಪರ್ವ |
ನಾಡೆ ನಮ್ಮನೆಯೊಳಗಿಂದು || ೮ ||

ನಿಮ್ಮಾಯತಕೆ ಬೇರೆ |
ನಿಮ್ಮ ನಾದನಿ ಸಂಗ್ರ |
ಹಮ್ಮಾಡುತೆನ್ನೊಡನೀಗ ||
ನಿಮ್ಮುಮಂ ಕರೆಯೆನೆ |
ಗಮ್ಮನೇಳ್ತಂದೆನೇ |
ಳೆಮ್ಮಯ್ಯ ಎನೆ ಬೈರವಾಂಕ || ೯ ||

---

1_ಕೆರೆ (ಉ, ಎ, ಕ.) 2_ಣಯ್ಯ (ಅ, ಇ.) 3_ಲಿ (ಇ.)

ಪೊರವು[1]ಟ್ಟು[1] ಚರಣದಿ ।
ಮೆರೆವ ತೊಡರು ಕೈಯು ।
ಮಿರುಪ ಕೂರಸಿ ಸಹವಾಗಿ ॥
ತುರುಗಿ ಬಕುತ ಜನ ।
ರುರದೆ ಜಂಗಮದೇವ ।
[2]ರ್ತರಿಸಂದು ನಡೆತರ[2]ಲಿತ್ತ ॥ ೧೦ ॥

[3]ಕಾಳ್[3]ಲಾಪುರದಿಂದ ।
ಭಾಳಲೋಚನನ ಭ ।
ಕ್ತಾಳಿ ಭೈರವದೇವನಿದಿರ ॥
ಕೇಳಿಕೆ ಸಹಿತ ಬಂ ।
ದಾಳೋಕಿಸುತ್ತಡ್ಡ ।
ಬೀಳೆ ಚಾಗುರೆ ಉಘೇಯೆಂದು ॥ ೧೧ ॥

ನಡೆಮಡಿ ತೋರಣ ।
ಗುಡಿ ಪಲವಾದ್ಯದು ।
ಗ್ಘಡಣೆ ಸುಜಯ ಜೀಯಯೆಂಬ ॥
[4]ರೊ[4]ಡನೆಯ್ದಿ ಬರುತಾಗ ।
ಮೃಡನ ಗಣಂಗಳಿ ।
ಗೆಡೆಯಾಗಲೆಂದು [5]ನೇ[5]ಮಿಸಲು ॥ ೧೨ ॥

ಮೃಡನ ಜಿಹ್ವೆಯ ತಡೆ ।
ಬಿಡೆ ಬಂದ ಜಂಗಮ ।
ಒಡನೆಯಾರೋಗಣೆಮಾಡಿ ॥

---

1–ಟ್ಟ (ಅ, ಎ, ಟ.) 2–ರಿರದೆ, ಸಂದಣಿಮಾಡ (ಇ.) 3–ಕಾಳ (ಎ, ಕ.) ; ಕಾಣ (ಇ.) 4–ತೊ (ಅ, ಎ, ಚ.) 5–ನ (ಗ.)

ತಡೆಯದಾನಂದವಿ |
ಮ್ಮಡಿಯೊಪ್ಪಲಾ[1]ಗೆ[1] ಕಂ |
ಪಿಡಿವ ತಾಂಬೂಲವ ತಳೆದು || ೧೩ ||

ಇರೆ ಗಣನಿಕರಕ್ಕೆ |
ಕರವ ಮುಗಿದು ಭಯ |
ಭರಿತ ಭಕ್ತಿಯುಲಿ ಮಲ್ಲಣ್ಣ ||
ವರ ಭೈರವಾಂಕನ |
ಚರಣಕೆರಗುತ ಬ |
ನ್ನಿರೆ ದೇವ ನಿಮ್ಮನುವಿನೊಳು || ೧೪ ||

ಆದ ಪದಾರ್ಥವಾ |
ಸ್ವಾದಿಪುದೆನುತವ |
ತ್ಯಾದರದೊಡನೆ ಭಿನ್ನವಿಸೆ ||
ಪಾದಜಲವ ಸುಪ್ರ |
ಸಾದವ ಸವಿ[2]ದು[2] ಮು |
ತ್ತಾಟನ ಮಲ್ಲಣ್ಣಗೂಡಿ || ೧೫ ||

ಶರಣ ಸದ್ಗೋಷ್ಠಿಯೊಳ್ |
ಪರಮಾನುರಾಗದೊಳ್ |
ಪರಿಣತೆಯೊಳು ಮೂಡಿ ಮುಳು[3]ಗಿ ||
ಇ[3]ರೆ ಭೈರವಾಂಕ ತಾ |
ವರೆಗೆಳೆಯುಸ್ತಾದ್ರಿ |
ಶಿರದೊಳು ಬಂದು ಮುಂಡಿಸಿದ || ೧೬ ||

---

1_ಗ (ಅ, ಇ, ಉ, ಎ, ಕ, ಗ, ಚ, ಜ, ಟ.) 2_ದ (ಇ.)
3_ಗುತಿ (ಅ, ಇ, ಉ, ಎ, ಕ, ಗ, ಜ, ಟ.)

ಇಂದು ಸಾಸಲಪುರ |
ಮಂದಿರ ಸೋಮೇಶ |
ಬಂದು ಭೈರವಗೆ ಕಾಣಿಸನು ||
ಎಂದಹಿ ಲೋಕದ |
ವಂದಿರಿಗರುಹಜೇ |
ಕೆಂದು ಪೋದಂತಿನನಿಳಿ[1]ದ[1] || ೧೭ ||

ಮಾರ ಸಂಹಾರಿಯು |
ಘೋರ ರೂಪಿನ ಛಾಯೆ |
ಧಾರುಣಿ ನಭದೆಸೆಗಳನು ||
ಪೂರಿಸಿದಂತಂಥ |
ಕಾರ ದ[2]ಟ್ಟೈ[2]ಸಿರೆ |
ವೀರ ಭೈರವದೇವನಾಗ || ೧೮ ||

ಕಲಿ ಛಲಿಯುಚಲನು |
ಜ್ವಲಕೀರ್ತಿಯುತನತಿ |
ಬಲವಂತ ಧೀರನುದಾರ ||
ಅಲಘು ಪ್ರತಾಪ ಕ |
ತ್ತಲೆಯೊಳು ಬರೆ ಬಂದ |
ನೊಲವು ಮಿಗಿಲು ಮಲ್ಲ[3]ಣಾರ್ಯ[3] || ೧೯ ||

ಬರೆವರೆ ಮಾತ್ರವೆ |
ಸರ ಕೆರೆಯೊತ್ತಿ[4]ಲ[4] |
ಶರೀರವಾಕ್ಕಾಗಿ ಭೋರ್ಗರೆಯೆ ||

---

1-ದು (ಇ.) 2 ಟ್ಟೈ (ಇ, ಕ.) 3-ಣಯ್ಯ (ಅ, ಉ, ಗ.) 4-ಲಿ (ಎ, ಚ.)

ಪರಿಕಿಸದಲ್ಲಿಂದ |
ಬರೆ ಮುಂದೆ ದಳ್ಪರಿ |
ಪರಿದು ನಾಲ್ದೆಸೆಯ ಮುಸುಕಲು || ೨೦ ||

ಬಗೆಯದೆ ಬರುತಿರೆ |
ಗಗನದಿಂ ಬೀಳ್ವ[1]ರಿ[1] |
ಪೊಗೆಯೊಡವೆರಸಿ ತಾರೆಗಳು ||
ಮಿಗೆ ಜಂಝಾಮರುತ ಬೆ |
ಟ್ಟಗಳ ಕಿತ್ತಿಡುತಿರೆ |
ಬಗೆಯದದನು ಭೈರವಾಂಕ || ೨೧ ||

ನಡೆತರಲಿತ್ತ ಮುಂ |
ಗಡೆ ಮದದಂತಿಯೊ |
ಗ್ಗಡಿದ ತುರಂಗ ವಿತಾನ ||
ಪೊಡೆವ ತಂಬಟ ಭೇರಿ |
ಗಿಡಿಬಿಡಿ ಕಹಳೆ ಢಿಂ |
ಕಿಡುವ ನಿಸ್ಸಾಳ[2]ದೆಕ್ಕಾ[2]ಳ || ೨೨ ||

ಪೊಳೆವಾಯುಧಂಗಳ |
ಬೆಳಗು ಪಂಜಿನ ಬಳ್ಳಿ |
ವೆಳಗು ಗಗನವನಳ್ಳಿರಿವ ||
ಹಳವಿಗೆ ಛತ್ರದಂ |
ದಳವೆಂಬ ಭೇರಿಯೊಳ್ |
ದಳವಾಡಿ ನಿಂದು ಬೊಬ್ಬಿಡು[3]ತ[3] || ೨೩ ||

---

೧-ದಿ (ಕ.) ೨-ದಿಂಬಾ (ಗ.) ೩-ವಾ (ಗ, ಟ.)

ದೆಸೆ ಬೆಸಲಾದುದೊ |
ವಸುಧೆ ಪೆತ್ತುದೊ ನಭ |
ವೊಸೆದುಗುಳ್ದುದೊ ವೀರಭಟರ ||
ಮುಸಕವನೆಂ[1]ಬೊ[1]ಲ |
ತ್ಯಸಮ ಸನ್ನಾಹದೊಳ್ |
ಮುಸುಕುತದ್ಭುತಮಯವಾಗೆ || ೩೪ ||

ಹರಿಗೆಯ ಭಟರ ಮೊ |
ಗ್ಗರ ಬಿ[2]ಲ್ಲ[2]ಗಾರರ |
ಹೊರಳ ಸಬಳಿಗರೊತ್ತೊತ್ತೆ ||
ದೊರೆ ದೊರೆಗಳು ಲಗ್ಗೆ |
ಗುರವಣಿಸುತ ಬರ |
ಬರೆ ಕಂಡು ಭೈರವದೇವ || ೩೫ ||

ಉಲಿವ ತೊಡರು ಘಲ |
ಘಲಕೆನೆ ಕೈಯ ಕೂ |
ರಲಗನಾಯತಮಾಡಿ ನೋಡಿ ||
ಬಲುಹ ನೋಡೆನ್ನಸೀ |
ಬಲವನೆಲ್ಲವನು ಬ |
ಯ[3]ಲು[3]ಮಾಳ್ಪೆನೀಗ ಮಲ್ಲಣ್ಣ || ೩೬ ||

ಎಂದು ನುಡಿಯೆ ಮುಂದೆ |
ನಿಂದಿರೆ ದಾನವ |
ವೃಂದ ಪೇಭೂರ್ತ ಪೈಶಾಚ ||

---

1_ಬವೊ (ಗ.)  2_ಲು (ಉ, ಕ.)  3_ಲ (ಕ, ಟ.)

ಸಂದೋಹ ವೇ[1]ತಾ[1]ಳ |
ಮಂದಿ ಶಾಕಿನಿಯರ್ ಝೋ |
ಎಂದು ಕವಿದರಿದಿರಾಗಿ ॥ ೨೭ ॥

ಒಂದೆಸೆಯಿಂದ್ರನ |
ದೊಂದೆಸೆಯನಲನ |
ದೊಂದೆಸೆ ಕಾಲ ನೃವಾಹ ॥
ಒಂದೆಸೆ [2]ಪಾ[2]ಶಿಯ |
ದೊಂದೆಸೆಯನಿಲನ |
ದೊಂದೆಸೆ ತ್ರ್ಯಂಬಕಸಖನು ॥ ೨೮ ॥

ಗರುಡವಾಹನರೊಂದ |
ಪರಿಮಿತವಧಿಕ ಸಂ |
ಕರುಹಸಂಭವರಗಣಿತವು ॥
ಸುರರಸಂಖ್ಯಾತ ರು |
ದ್ರರು ಲೆಕ್ಕವಿಲ್ಲವಿ |
ದುರುಗಲಿ ಭೈರವನಿದಿರ ॥ ೨೯ ॥

ವೀರಭದ್ರಾದಿ ಸಂ |
ಹಾರ ಮೂರುತಿಗಳ |
ಪಾರ ಸಹಸ್ರ ವದನರು ॥
ಮೇರುಪಾತನ ಸೋಮ |
ಸೂರ್ಯಪಾತನರುಗ |
ಳಾರುಭಟೆಗೆ ನಿಲಲಂಜಿ ॥ ೩೦ ॥

---

1-ತ್ಯಾ (ಅ, ಎ.)   2-ರ (ಉ.)

ನಡ ನಡ ನಡುಗಿ ಬಾ |
ಯ್ದಿಡುತೊರಲುತ ಕಾ |
ಲೊಡೆಯೆ ಬೀಳುತ ತನ್ನ ತಲೆಯು ||
ತಡಹುತೆಡಹಿ ದಡ |
ದಡಿಪ ಮಲ್ಲಣ್ಣನ |
ಪಿಡಿದಂಜಬೇಡ [1]ಬೇಡೆ[1]ನಲು *|| ೩೧ ||

ಚರಣಕೆರಗುತ ನಿ |
ಬ್ಬರದೊಳೋಡಲು ಕಂಡು |
ಪರಿಹಾಸ ಮೊಗದೊಳು ಮೊಳೆಯೆ ||
ತಿರುಗಿದನಿತ್ತ ಸಂ |
ಗರ[2]ಧೀರ[2] ಭೈರವೇ |
ಶ್ವರನೊಡ್ಡಿದಾಹವದೆಡೆಗೆ || ೩೨ ||

ಕಡೆಗಾಲಕಿದಿರಾದ |
ಕಿಡಿಗಣ್ಣನಂತೆ ಧೀಂ |
ಕಿಡುವಂಬುಧಿಗೆ ಕೈಯ ನೀಡಿ ||
ಕುಡಿಯಲೆಳಸಿ ಸಿಂದ |
ಕಡು[3]ಗಲಿಯ[3]ಗಸ್ತ್ಯಗೆ |
ಪಡಿಯೆನಿಸಿ[4]ದ[4] ಭೈರವಾಂಕ || ೩೩ ||

ಕದುಬಿತು ಚೂಣಿ ಮೇ |
ಲೊದ[5]ಗಿ[5]ತು ತೇಜಿ ಹೊ |
ಕ್ಕುದು ಹಿಂದೆ ಗಜ[6]ಘಟ[6]ಪಟಲ ||

---

1_ನೀನೆ(ಎ) * ಇಲ್ಲಿಂದ ಮುಂದಕ್ಕೆ (ಗ) ಪ್ರತಿಯಲ್ಲಿ ಓಲೆಗಳಿರಲಿಲ್ಲ. 2_ವೀ(ಜ, ಟ.)
3_ಗುವ (ಅ ಉ, ಎ, ಕ.) 4_ದ (ಅ, ಇ, ಎ, ಜ.) 5_ರಿ (ಇ.) 6_ಗ್ಘಟೆಧ್ವಜ (ಅ.)

ಕದನಗಲಿಗಳು [1]ನಿಂ[1] |
[2]ದಿದಿರಾಗಿ[2] ಬೊಬ್ಬೆಗೊ |
ಟ್ಟೆದು[3]ಭು[3]ತಕವನಿ ಕಂಪಿ[4]ಸಿತು[4] || ೩೪ ||

ಕರಿವಿಂಡಿನೊಳು ಹೊಕ್ಕ |
ಹರಿಯಂತೆ ಹರಿಯವೊ |
ಗ್ಗರದೊಳು ಶರಭ ಹೊಕ್ಕಂತೆ ||
ಶರಭನೆರವಿಗೆ |
ಪರಿವ ಭೇರುಂಡನಂ |
ತುರವಣಿಸಿದ ಭೈರವಾಂಕ || ೩೫ ||

ಲಾಗಿಸಿ ನೆಗೆದು ಸ |
ರಾಗದೊಳೊದಗಿದಿ |
ರಾಗದೊಲವರ ಪೊಡದಿಡುಕಿ ||
ಮೇಗತಿಬಳರುರೆ |
ತಾಗಿತಳ್ತಿರಿದಿ |
[5]ಭಾರ್ಗವಪ್ಪಂತೆ ಕೆಡಪಿದ[5] || ೩೬ ||

ಸೇಲುವ ಕರುಳು ಬಿ |
ದ್ದಾಲುವ ರುಂಡ ಮುಂ |
ಗಾಲೂರಿ ಕೆಡೆವ ಮುಂಡಗಳು ||
ತೇಲುವ ರ[6]ಕ್ತ[6] ಕೈ |
ಕಾಲು ಕಾಳಿಜ ಖಂಡ |
ದೋಳಿ ಸಮರ ಭೂಮಿಯೊಳಗೆ || ೩೭ ||

---

1-ಬಂ (ಅ.) 2-ದೊದಗಿಂತು (ಇ.) 3-ಗು (ಇ, ಉ, ಕ) 4-ಸಲು (ಅ, ಎ.)
5-ಬ್ಬಾಗವ ಮಾಡಿದ ನಿಮುಷದಲಿ (ಅ, ಇ, ಉ, ಎ, ಕ, ಜ, ಟ.) 6-ಕುತ (ಅ, ಎ.)

ಇರಿದಿರಿದುರೆ ಧರೆ |
ಗೊರಗಿಸಿ ನೆರೆ ತರಿ |
ತರಿದೊಟ್ಟೆ ಮೆದೆಗೆಡಪುತಿರೆ ||
ಮುರಿದೋಡುವರ ಕಂಡು |
ಕರಿಕಂಠ ಕೈವೀಸ |
ಲುರುಬಿದರೊಂದು ಲಗ್ಗೆಯಲಿ || ೩೮ ||

ಸುರರಸುರರ ದಿಗು |
ವರರಜ ಹರಿಗಳ |
ಧುರದೊಳೋಡಿಸಿದನಂಜಿಸಿದ ||
ಧುರಗಲಿ ಭೈರವೇ |
ಶ್ವರನಿದಿರಿಲಿ ನಿಂದ |
ಸುರಸಿಂಧುಧರ ಸೋಮನಾಥ || ೩೯ ||

ಬಿಸಿಗಣ್ಣು ಶಶಿ ಫಣ |
ದಶ ಭುಜನ್ಯೈನೊಗ |
ತ್ರಿಸುಳ ಡಮರುಗ ಕರೋಟಿ ||
ಭಸಿತಾಜಿನಭಯಾರ್ಥ್ಯ |
ಪಶುಪವಾಹನ ಶಕ್ತಿ |
ವಿಷ ಪುಲಿದೊವಲು[1]ಡೆ[1] ಸಹಿತ || ೪೦ ||

ಇರೆ ಸೋಮನಾಥನ |
ಚರಣಕಮಲಕತಿ |
ಹರುಷದಿಂ ಭೈರವದೇವ ||

1_ಡಿ (ಅ, ಇ ಐ )

ಸರಿಸದೊಳದ್ದುಬಿ |
ದ್ದಿರೆ ಪಿಡಿದೆತ್ತಿ ಸ |
ತ್ಕರಿಸಿದ ಸುರರುಘೇಯೆನಲು || ೪೧ ||

ಭಲರೆ ಭಾಪುರೆ ನಿಜ |
ಗಲಿ ನಿನ್ನ ಮನಸಿನ |
ಬಲುಹ ನೋಡಿದೆನು ನಿನ್ನಿಂದ |
ಕಲಿಗಳಾರ್ ಛಲಿಗಳಾರ್ |
ಬಲವಂತರಾರ್ [1]ಬಾ[1]ರೆಂ |
ದೊಲಿದು ಸೋಮೇಶ ವೈದಡಹಿ || ೪೨ ||

ಮಗನೆ ಬಾ ಕೈಲಾಸ |
ನಗರಕೆನಲು ದೇವ |
ರುಗಳ ಬಲ್ಲಹನೆ ಹೀಗಲ್ಲ ||
ಜಗಕೆಲ್ಲಕತಿ ಚೋದ್ಯ |
ವೊಗೆವಂತೆ ಬಪ್ಪೆನಿಂ |
ದಿಗೆ ತಿಂಗಳಂದಿನ ದಿನಕೆ || ೪೩ ||

ನೀನೊಲಿದುದ ಮರ |
ದೇನಾದನೊ ಎಂದು |
ಮಾನವರೆಲ್ಲಾತ್ಯಂತ ||
ಹೀನದಿಂ ನುಡಿವರ |
ದೇನುವಿಲ್ಲದೊಲೆನ್ನ |
ಮಾನಿನಿ ಸಹಿತ ಬಂದಪೆನು || ೪೪ ||

---

1. ಬಲ (ಅ, ಎ)

ಎನಲೊಡಂಬಟ್ಟು ಭೋಂ |
ಕನೆ ಸೋಮನಾಥ ಪೋ |
ದನು ಭೈರವೇಶ್ವರ ತನ್ನ ||
ಮನೆಗೆ ಬಂದೀಶ್ವರಾ |
ರ್ಚನೆಮಾಡಿ ಸುಖಮಿರ್ದು |
ಇನನುದಯಮೊಳೆದ್ದು ಬಂದು || ೪೫ ||

ಗುರುಪಾದ ಪದ್ಮಕ್ಕೆ |
ಶರಣೆಂದು ಭೈರವೇ |
ಶ್ವರ ಸೋಮನಾಥನ ಕೃಪೆಯು |
ಸಿರದೆ ಬಿನ್ನಹಮಾಡು |
ತಿರೆ ಬಂದುದಾ[1]ಗಲ |
ಚ್ಚ[1]ರಿ ಮಿಗೆ ಶರಣಸಂದೋಹ || ೪೬ ||

ಅರಿದಾವುದೀ ಮಹಾ |
ಪುರುಷಗೆಂಬರು ಕೆಲ |
ರರಿದರಿದಿದು ಸೋಮನಾಥನ ||
ಕರೆಯಲಾನೊಲ್ಲೆನೆಂ |
ಬರ ಮಾತುವರಿದಿನೊ |
ಳರಿದೆನಲವರೊಳಗೋರ್ವ || ೪೭ ||

ಉಪಮನ್ಯುಗಿಂದ್ರ ರೂ |
ಪಕದಿ ವೈದೋರಿದ |
ತ್ರಿಪುರಸಂಹಾರಿಯಂತಲ್ಲ ||

---

1-ಲಾಶ್ಚ (ಅ, ಇ, ಉ, ಎ, ಚ, ಜ, ಟ.)

ತಪದೊಳರ್ಜುನನಿ[1]ರೆ[1] |
ಕುಪಿತ ಕಿರಾತನಾ |
ದಪರಾವತಾರವಿದಲ್ಲ || ೪೮ ||

ತಿರುಮುರು[2]ಘಾಂ[2]ಡಿ ದೇ |
ವರು ಜೇಡವಡೆಗೂಡಿ |
ಭರದಿ ನಂಬಿಯ ಬೆದರಿಸಿದ ||
ಪರಿಯಲ್ಲ ಕಲಿಕಾಮ |
ಗಿರದೆ ಬೆಂಬಲವಾಗಿ |
ಹರಬಂದ ಬಗೆಯಿದಲ್ಲಲ್ಲ || ೪೯ ||

ತಾರಕಸು[3]ತ[3]ರ ಮೂ |
ರೂರನುರುಪುವಲ್ಲಿ |
ಮಾರಾರಿ ಚತುರಂಗ ಸೇನೆ ||
ದೋರಿದ ಬಗೆಯಲ್ಲಿ |
ವೀರೇಶ ದಕ್ಷ ಸಂ |
ಹಾರಕೆ ವೋದಿರವಲ್ಲ | || ೫೦ ||

ಎನುತಿರಲಾಗ ಭೋ |
[4]ರ[4]ನೆ ಬಂದು ತುರುಗಿರ್ದ |
ಜಿನರು ಬಾಡಬರು ವೈಷ್ಣವರು ||
ತನ ತನಗಿದು ಚೋದ್ಯ |
ವೆನುತ ವೆಂಗಿಸೆ ಕೋಪ |
ಕೊನರಿತು ಭೈರವಾಂಕನಿಗೆ || ೫೧ ||

---

1_ಗೆ (ಕ) 2_ಗಾ (ಅ, ಎ.) 3-ರ (ಚ) 4_ಂಕ (ಇ.)

ಎಲವೊ ಶ್ರವಣ ಹೊ ಹೊ |
ನಿಲು ನಿನ್ನ ದೈವದ |
ನೆಲೆಯ ಪೇಳುವೆ ನಾಭಿರಾಜ ||
ಲಲನೆ ಮರು[1]ತ್ನಿ[1]ಯು |
ಗರ್ಭದಿಂದ ಜನಿಸಿದ |
ಬಲವಂತ ಕಾಳೋದರನು || ೫೨ ||

ಬೇಟೆಯಾಡುತ ಬರ |
ಲಾಟವಿಯೊಳು ಶಶಿ |
ಜೂಟನ ವಾಹನ ಕಂಡು ||
ದೂಟಿಸುತೆಸೆ[2]ಕಣೆ[2] |
ಕೋಟಿ ನೇಮುವ ಮಿಗೆ |
ನಾಟಿ ಬಿದ್ದುದು ನೃಪನಿದಿರ || ೫೩ ||

ನೋಡಿ ಭಯಾಬ್ಧಿಯೊಳ್ |
ಮೂಡಿಯಘಾಳಿಗಾ |
ನೀಡಾದೆನಿನ್ನೇವೆನೆನುತ ||
ಕೂಡೆಯಾ ಪೆಸರಿಂದ |
ಮಾಡಿ ಬಸತಿಯಲ್ಲಿ |
ನಾಡೆ ಧರ್ಮವನೆ ಜಾನಿಸುತ || ೫೪ ||

ಬಸವನ ಪಾದವ |
ನೊಸಲೊಳಂಕಿತ ಮಾಡಿ |
ಒಸೆದಂಡ ಗುಂಡಿಗೆವಿಡಿದು ||

---

1 ತ್ರಿ (ಕ.) ; ತ್ತ್ರಿ (ಅ.) ; ಕ್ಕಿ (ಎ.)  2 ಯೆ (ಅ.) ; ಕಣ್ಗೆ (ಎ.)

ಪೊಸತಾದ ಜಿನ[1]ಪೊಡ್ಡು[1] |
ಪೆಸರಾಂತು ವಾಳವಾ |
ಮಿಸುಪಕುಂಚವದಾಗಿ ಪಿಡಿದು || ೫೫ ||

ಧರೆಯೊಳಹಿಂಸಾ |
ಪರವೆ ಸದ್ಧರ್ಮವೆಂ |
ದರುಹ ದಿಗಂಬರನಾಗಿ ||
ಇರಲಾತ ದೈವವೆಂ |
ಬರ ಮಾತಪೇನದಂ |
ತಿರಲಿ ಕೇಳ್ ನಿಮ್ಮ ಭಂಗವನು || ೫೬ ||

ಮಾರುಡಿಗೆಯು ನಾಚ |
ಯ್ಯಾರುಹತರನೆಲ್ಲ |
ತೇರಸಗೂಡಿ ಕೊಂದುದನು ||
ಭೂರಿ ಜೈನರ ಕೊಂದ |
ಧೀರನೇಕಾಂತದು |
ದಾರ ರಾಮೇ[2]ಶನ[2]ನರಿಯ || ೫೭ ||

ಮರದು ವಾದಿಸಿ ಸೋತು |
ಮುರಿದೋಡುವರ ಕುಲ |
ಚ್ಚರಿಯರು ಶೂಲಕಿಟ್ಟುದನು ||
ಮುರಿದು ಪ್ರತಿಮೆಗಳ |
ತರಿದು ಜೈನರನೆರೆ |
ಮೆರೆದ ವೈಜವ್ವೆಯನರಿಯ || ೫೮ ||

---

1-ವದ್ದ (ಅ.); ಪೊಂವ (ಇ.); ನೆಂದು (ಎ), ಬಾದ್ಧ (ಉ.)
೨-ಶರ(ಅ, ಉ, ಎ, ಕ, ಚ, ಜ, ಟ.)

ಸುರಹೊನ್ನೆ ಬಸತಿಯು ।
ಪಿರಿಯ ಜಿ[1]ನ್ನ[1]ನನೊಡ ।
ನಿರಿಸಿದ ಸೌರಾಷ್ಟ್ರಪತಿಯು ॥
ಅರುಹುತಸಮಯ ಕು ।
ಧರ ವಜ್ರನಾದುರು ।
ತರ ವೀರ ನಾದಯ್ಯನರಿಯ ॥ ೫೯ ॥

ಕುರುಪಿನ [2]ಪಾಶ[2]ವ ।
ಪರಿದೆಲ್ಲ ಜೈನರು ।
ಜರಿಯುಲದನು ಕೇಳ್ದು ಶಿವಗೆ ॥
ಮೊರೆಯಿಟ್ಟು ಕಣ್ಬೆತ್ತು ।
ಕುರಿದರಿ ಮಾಡಿದ ।
[3]ನೆರೆ[3] ವೀರ ವರ ದಂಡಿಯರಿಯ ॥ ೬೦ ॥

ನೃಡನ ಮೋಹದ ಭಕ್ತ ।
ನಿಡುಮಾರದೇವಯ್ಯ ।
ನೊಡನೆ ವಾದಿಸಿ ಸೋಲ್ತ ಶ್ರವಣ ॥
ಪಡೆಯನೆಲ್ಲವ ತಡೆ ।
ಗಡಿದನೆಂಬುದ ಕೇಳಿ ।
ನಿಡಿಯ ಮಾತೇನೆಲೊ ನಿನಗೆ ॥ ೬೧ ॥

ಗೆಲ್ಲ ಸೋಲದಿ ಶಿವ ।
ನಿಲ್ಲ [4]ನ[4]ಮ್ಮಯ ಜಿನ ।
ನಲ್ಲದೆ ಎಂದು ವಾದಿಸಿದಾ ॥

---

೧-ನ (ಅ, ಉ, ಕ, ಚ, ಟ.) ೨-ಪಾಸ (ಇ, ಎ.) ೩-ವರ (ಇ.)
-ವೆ (ಉ, ಎ, ಕ, ಚ, ಜ, ಟ.)

ಖುಲ್ಲ ಜೈನರ ಕೊಂದು |
ಹಲ್ಲ ಕಿತ್ತನು ವೀರ |
ಕಲ್ಲಯ್ಯನದ ನೀ ಮರೆದೆಯ || ೬೨ ||

ಹರ ಬಹು ಸಂಸಾರಿ |
ಅರುಹ ನಿಸ್ಸಂಸಾರಿ |
ಪಿರಿದೆಮ್ಮ ಸಮಯವೆಂಬವರ ||
ನಿರದೆ ತಿಳುಹಲೊಲ್ಲ |
ದಿರೆ ಕೋಪದಿಂ ಶಿರ |
ವರಿದಿಟ್ಟ ಕಲಿಸೋಮನರಿಯ || ೬೩ ||

ಕೋವೂರ ಬ್ರಂಹಯ್ಯ |
ಶ್ರಾವಕರನು ಗೆಲಿ |
ದಾ ವಿಧಿವೇಳುವಾಚಾರ ||
ಜೀವನ ಭೈರವ |
ದೇವನೊಡನೆ ವೈಷ್ಣ |
ವ ವಾದಿಯೋರ್ವನಿಂತೆಂದ || ೬೪ ||

ತನ್ನ ಕೈಯದು ಕಳ್ಳ |
ಹೊನ್ನಾಗೆ ಬೈವರೆ |
ಚೆನ್ನವರದನನೇನಯ್ಯ ||
ನಿನ್ನ ದೈವದ ನೆಲೆ |
ಯನ್ನರ[1]ದವ[1] ಪುಸಿ |
ಯೆನ್ನಲವನ ಕೋಪಿಸುವರೆ || ೬೫ ||

---

1 ಛುದು (ಅ, ಚ.)

ಎನೆ ಕೇಳು ಕೇಳಿಲೊ |
ನಿನಗೆ ವಿಷ್ಣುವೆ ದೈವ |
ವೆನುತಿಹೆಯುವನ ಭಂಗವನು ||
ಮುನಿ ಮುನಿದಿತ್ತ ಶಾ |
ಪ ನಿಮಿತ್ತ ಹತ್ತಂಗ |
ವನು ತಾಳ್ದನದ ನೀ ಮರೆದೆಯ || ೬೬ ||

ದೇವಕಿಗಾ ಕೃಷ್ಣ |
ದೇವ ಪುಟ್ಟಿದನರಿ |
ದಾ ವೇಳೆ ಖರ[1]ಸ್ವ[1]ರದೋರೆ ||
ಜೀವ ಭೀತಿಗೆ [2]ವ[2]ಸು |
ದೇವ ಕಾಲ್ವಿಡಿದನೆಂ |
ಬಾ ವಿಧಿಯನು ಮರೆದೆಯ || ೬೭ ||

ಉಡು ಮೂಲದಲಿ ಪುಟ್ಟಿ |
ದಡೆ ಹೊಲ್ಲವೆಂದು ಬಿ |
ಸುಡೆ ಸಲಹಿದಳು ಭೂದೇವಿ ||
ಕಡೆಗಾ[3]ದಿ[3]ಮೂಲನೆಂ |
ದಡಿಗಡಿಗಾ ನಾಮ |
ವಿಡಿದಿರ್ಪನದ ನೀ ಮರೆದೆಯ || ೬೮ ||

ಕರ ಕ[4]ಟಿ[5] ಶಿರ ವಕ್ಷ |
ಚರಣದೊಳ್ ಕಂಕಾಳ |
ನರಸಿಂಹಚರ್ಮ [5]ಮೀ[5]ನಜಿನ ||

---

1_ಸ (ಅ, ಇ, ಉ, ಎ, ಚ, ಜ, ಟ.) 2_ವಾ (ಅ, ಎ, ಚ.) 3_ಲದಲಿ (ಅ, ಎ.)
ಂಟ (ಎ.) 5_ವ (ಕ.)

ವರ ಕಮಠಾಸ್ಥಿ ಶ್ರೀ |
ಹರಿಯಕ್ಷಿ ಇತಿ ಹರಿ |
ಹರನೆಂಬುದಿದು ಸಿದ್ಧವೆಲವೊ || ೬೯ ||

ಹಿಂದೆ ಜರಾಸಂಧ |
ನೆಂದೆಂಬವನ ದೆಸೆ |
ಯಿಂದೊಮ್ಮೆ ಬಹಳ ಭಂಗದಲಿ ||
ಬಂದನು ಬಳಿಕ ಜ |
ಲಂಧರನಿಂ ಭಂಗ |
ಬಂದನು ಹರಿ ಸೀಮರೆದೆಯ || ೭೦ ||

ಉರಿಲಿಂಗವಾದಲ್ಲಿ |
ಹರನಡಿಗಾಣಲ್ಕೆ |
ವರಾಹನಾದನು ಹರಿಯರಿಯ ||
ಸರಸಿಜ ಪುತ್ರನು |
ದರ[1]ದೊಳು[1] ಗುದ[3]ದಿಂದ[2] |
ಭರದಿ ಜನಿ[3]ಸಿದುದನರಿ[3]ಯ || ೭೧ ||

ಸೊರಹ[4]ದಿರೆ[4]ಲೊ ನಿಮ್ಮ |
ಹರಿ ಶಂಖುಕರ್ಣನಿಂ |
ಪಿರಿದು ಭಂಗಕೆ ಬಂದು ದಾವೋ ||
ಧರ ಮುಂಜಕೇಶಿಯೆಂ |
ಬೆರಡು ನಾಮವನಾಂತು |
ದರಿದರಿದಿಂತು ನುಡಿವರೆ || ೭೨ ||

---

1-ದಿಂದ. 2-ದೊಳು (ಇ, ಉ, ಎ, ಕ, ಚ, ಜ.) 3-ತನೀಮರೆದೆ (ಇ, ಉ, ಕ, ಚ, ಜ.) 4-ಬೇಡೆ (ಅ, ಎ.) ; ಲ್ಲವೆ (ಇ.) ; ವೆ (ಉ.)

ವನಚರನಂಬು ಕಾ |
ಲನು ತಾಗಿ ತಟ್ಟನೆ |
ದನಿತರೋಳ್ ಪೆಂಡಿರೆಲ್ಲರನು ||
ತನ ತನಗೊಯ್ದರೆಂ |
ಬಿನ ಹರಿ ಧೃತಿಗೆಟ್ಟ |
ನೆನುತಿ[1]ರೆ[1] ವಾದವೆಲ್ಲಿಯದೊ || ೭೩ ||

ಅರೆ ಬೆಂದುದದೆ ನಿಮ್ಮ |
ಹರಿಯಂಗವೀ ಧರೆ |
ಯರಿಯೆ ಜಗನ್ನಾಥನೆಂದು ||
ಹರಿ ರುಕ್ಮಿಣಿಯು ಮುನಿ |
ವರನ ರಥಾಶ್ವವಾ |
ದರು ನೀನೆ ಬಲ್ಲೆ ನಿಲ್ಲೆಲವೊ || ೭೪ ||

ಕ್ಷಪನಿಗೋಸುಗ ಹರಿ |
ಕುಪಿತದಿಂದಘ ನಿಶಾ |
ತಪನ ದದೀಚಿಯೊಳ್ ಸೆಣ[2]ಸೆ[2] ||
ಉಪಮಿಸಬಾರದ |
ನೆಪದೋರಿ ಪೊಸೆದಿಟ್ಟ |
ವಿಪುಲ ಚಕ್ರವನದ[3]ನರಿಯ[3] || ೭೫ ||

ಬೆರಳ ಕೊನೆಯೊಳಾಗ |
ಪರಿಮಿತ ಹರಿರೂಪ |
ನಿರದೆ ತೋರಿದನೊಬ್ಬ ಮುನಿಪ ||

---

1 ಹೆ (ಅ, ಇ, ಉ, ಎ, ಕ, ಚ, ಜ, ಟ.)    2-ಸಿ (ಅ, ಉ, ಎ, ಕ, ಚ, ಟ.)
.ಮುರಿದ (ಇ, ಉ, ಚ, ಜ.)

ಭರದಿ ಬಂದೊದೆಯೆ ಪೇ |
ರುರ ಕಂದಿ ಕಾಬಂತೆ |
ಶಿರಿವತ್ಸವದೆಯುದನರಿಯ || ೭೬ ||

ಧಾತ್ರಿಯಲ್ಲರಿಯೆ ಶ |
ನಿ ತ್ರಯೋದಶಿಯೊಳು |
ಪತ್ರವಾಹನ ಪೋಪ ಭಾಳ ||
ನೇತ್ರನೋಲಗಕೆಯ್ದಿ |
ಚಿತ್ರವ ತಿಳಿಯೈ ಪ |
ರತ್ರಯ ದೂ[1]ರಃ[1]ವಿಚಾರ || ೭೭ ||

ಶಂಕರದಾಸಿಮ |
ಯ್ಯಂ ಕಿಡಿಗಣ್ಣಿಂ[2]ದೆ[2] |
ಮುಂಕೊಂಡು ಹರಿ ಪ್ರತುವೆ[3]ಯನು[3] ||
ಶಂಕೆಯಿಲ್ಲದೆ ಸುಟ್ಟ |
ಭೋಂಕನೆನಲು ನಿನ್ನ |
ಬಿಂಕದ ಮಾತದೆಲ್ಲಿಯದೊ || ೭೮ ||

ಕೇಶವ ಘನವೆಂದು |
ವ್ಯಾಸನೇನಾದನಾ |
ಕಾಶಿಯರಸ ವಿಶ್ವಪತಿಗೆ ||
ದಾಸ ಭಾವದಿ ಬಿದ್ದ |
ವಾಸುದೇವನ ಕಾಣು |
ತೀಸು ಮಾತೇನು ಸುಮ್ಮನಿ[4]ರು[4] || ೭೯ ||

---

1-ರ (ಅ, ಇ, ಉ, ಟ.) 2-ದ (ಕ, ಚ.) 3-ಗಳ (ಉ, ಕ, ಚ, ಟ.)
(ಟ.)

ಆಷ್ಟ ತನುವಿನೊಡ |
ಹುಟ್ಟಿತಾದಿಯುಲಘು |
ರಟ್ಟಿನ ಕಣ್ಣಿಂದೊಗೆದುದ ||
[1]ತೊಟ್ಟ[1]ನು ಹರಿಪರ |
ಮೋಷ್ಕಿಗಂತದಕೆ [2]ವಾ[2] |
ಸಿಷ್ಠ ಪುರಾಣವೆ ಸಾಕ್ಷಿ || ೮೦ ||

ಕೂರುವು ಮೀನ್ ಕಿಟ |
ನಾರ ಕೇಸರಿ ವಾಮಾ |
ಕಾರದ ಹರಿಯಡಿಯಲ್ಲಿ ||
ವಾರಿಯುದಿಸಿತೆಂದ |
ಪಾರ ಗಳಹುತಿರ್ಪ |
ನಾರಕಿ ತಿಳಿಯಿ[3]ದೆ ದೃ[3]ಷ್ಟ || ೮೧ ||

ಭೂಪ ಬಿಜ್ಜಳ[4]ನು[4] ಪ್ರ |
ತಾಪ ನಾರಾಯಣ |
ನೇ ಪತಿಯೆ[5]ನಲು[5] ಬಾಚರಸ ||
ಕೋಪಿಸುತಿದಿರೆ ಬಾ |
ಬಾ ಪದ್ಮನಾಭ ಎ |
[6]ನಾ[6] ಪತ್ತು ಬಂದುದನರಿಯ || ೮೨ ||

ಎಂದು ದಟ್ಟಿಸಿ ನುಡಿ |
ವಂದಗಂಡೋರ್ವ ದ್ವಿ |
ಜಂ ದಳವೇರಿ ಬಂದಿದಿರ ||

---

1-ಕೊಟ್ಟ (ಅ, ಉ, ಎ, ಚ), ಕೊಟ್ಟೆ (ಇ) 2-ವಿ (ಇ, ಉ, ಎ.)
-ದೇಂದ್ರ (ಉ) 4 ನೃಪ (ಎ) 5 ಸುತ (ಇ) 6-ಲಾಪೊ (ಉ, ಎ, ಕ.)

ನಿಂದು ನಿನ್ನಯ ಮನ ।
ಬಂದಂತೆ ನುಡಿವುದೀ ।
ದಂದವೆ ಭೈರವದೇವ ॥ ೮೩ ॥

ಬೊಟ್ಟನನಿತು ಬೂದಿ ।
ಯಿಟ್ಟವರಿಗೆ ಪೇರ್ ।
ಬೆಟ್ಟದನಿತು ಮರುಳೆಂಬ ॥
ದೃಷ್ಟವ ಕಂಡೆನೆಂ ।
ಬಷ್ಟರೊಳಗೆ ಖತಿ ।
ಪುಟ್ಟಿತು ಭೈರವಾಂಕನಿಗೆ ॥ ೮೪ ॥

ಕೇಳೆಲೊ ದ್ವಿಜಕುಲ ।
ದೇಳಿಗೆಯುಂಟೆಂದು ।
ಕಾಳುಗೆಡವೆ ನಿನ್ನ ಕುಲದ ॥
ಪಾಳಿಯರಿಯ[1]ದೆ[1]ಲ್ಲ ।
ರಾಳಿನಾಳಾಗಿರ್ಪ ।
ಕೀಳು ದೈವಗಳ ಪೂಜಿಸುವೆ ॥ ೮೫ ॥

ತಾತ ದಧೀಚಿ ಮೇಣ್ ।
ಮಾತಾಂಗಿ ರೇಣು[2]ಕಿ[2] ।
ಮಾತೆಯುರವರುದರದಲಿ ॥
ಜಾತರೀರ್ವರೊಳಗ್ರ ।
ಜಾತರಂತ್ಯಜರೆಂಬ ।
ಜಾತಿ ವಿಭೇದವೆಲ್ಲಿಯದೊ ॥ ೮೬ ॥

---

1-ರೆ (ಉ.) 2-ಕ (ಇ, ಉ, ಕ, ಚ, ಟ) ; ಕಾ (ಜ.)

ನಲವಿಂದ ಬಡಗಿ ಮಾ |
ಚಲದೇವಿಯನು ಸತ್ |
ಕುಲಜೆಯ ಮಾಡಿ ಹೊಂಗೋವ ||
ತಲೆ ಕಾಲನೋರ್ವರು |
ಜ್ವಲ ಕಾಯವೋರ್ವರು |
ಸಲೆ ಭಾಗೆಗೊಂಡುದನರಿಯು || ೮೭ ||

ಕೊಂಬು ಕೊಳಗು ನಿಮ |
ಗೆಂಬುತ ಕಂಡರೆ |
ಸಂ[1]ಬೋ[1]ಳಿಯೆನ್ನಿರೆಂದೆನುತ |
ಇಂಬಿಟ್ಟು ಹೊರಗೂರೊ |
ಳಂ ಬಿಟ್ಟು ನಿಮ್ಮ ವ್ಯಾ |
ಜಂ ಬಿಡಿಸಿದನು ದಧೀಚಿ || ೮೮ ||

ಬಡಗಿ ಮಾಚಲದೇವಿ |
ಯೊಡಲ ಪಾಲಿಂದವೆ |
ಬಿಡದೆ ತೊಳೆದು ದ್ವಿಜರೆಲ್ಲ ||
[2]ಒಡನ[2]ಭಿಮಂತ್ರಿಸಿ |
ಕುಡಿದ ಕುಂದರಿಯದೆ |
ನುಡಿವಿ[3]ರಿ[3] ದ್ವೈತದ ಮಾತ || ೮೯ ||

ಹೊಲೆಯನನುಜನೆಂಬ |
ಕಲೆಯ ನೀ ಮರಸಿಕೊಂ |
ಡುಲಿಯ[4]ದಿರೆ[4]ಲವೊ ಯಾಗದ[5]ಲಿ[5] ||

---

1-ಬಾ (ಅ.) 2-ಬಿಡದ(ಎ.) 3-ರ (ಎ, ಚ, ಜ, ಟ.) 4-ಬೇಡ (ಉ, ಕ, ಜ, ಟ.)
ಲ್ಲಿ (ಜ.)

ನಲಿದಜ ಪಶು ಮಧು |
ವಲಸದೆ ಕೊಳುತಿಹೆ |
ಕುಲದ ಮಾತೇಂ ಸಾಕು ನಿಲ್ಲು || ೯೦ ||

[1]ಹೊತ್ತು[1] ಹೆಣನನುಂಡು |
ತುತ್ತು ಗದ್ಯಾಣವ |
ಮತ್ತಾ ಹೊರಸಿನಡಿ ನುಸಿದು ||
ವಿತ್ತವೊಡೆವುದೆನು |
ತಿತ್ತ ಗೌತಮು ಶಾಪ |
ಪೊತ್ತಾಧಮರು ಸೀವ[2]ಲ್ಲ[2] || ೯೧ ||

ಭರ್ಗನಧಿಕನೆಂಬ |
ವರ್ಗವ ತಿಳಿದೆಲ್ಲಾ |
ವರ್ಗಕೆ [3]ನಮಿಸಿ ಭ್ರ[3]ಮಿಸುವೆ ||
[4]ಉರ್ಗತ್ತು[4]ರದೆ ಕಣ್ಣ |
ಸೀರ್ಗರೆವಂತಿರ್ಪ |
ವರ್ಗುಂಟ ಮುಕುತಿ ಹೋಗೇಲ್ವ್ರೂ || ೯೨ ||

ಭೂದೇವರೊಳು ನೆರೆ |
ವಾದಿಸಿ ಚಾತುರ್ |
ವೇದವ [5]ಕವುಳ[5]ಯನಿಂದ ||
ಓದಿಸಿ ಮೆರೆದನೆ |
ಲ್ಲಾ ಧರೆಯರಿಯಲು |
ಮಾದೇವ ಬಕುತ ಕಲ್ಲಯ್ಯ || ೯೩ ||

---

1–ಹೆತ್ತ (ಎ), ಹೊತ್ತ (ಅ) 2–ನಲು (ಅ), ಲವ್ರೊ (ಎ)
3. ಭ್ರಮಿಸಿನ (ಕ, ಚ, ಜ.) 4–ಊರ್ಗತೂ (ಅ, ಉ, ಎ) 5–ಕೊರ (ಅ, ಉ, ಕ, ಚ.)

ಪಾಪಿಯೋರ್ವನ ಮಂತ್ರ |
ರೂಪನೆನಿಸಿ ಕಲ್ಲ |
ಪಾ[1]ಪಿ[1]ಯ ಹುಲ್ಲ ಸೀರುಣಿಸಿ ||
ತಾ ಫಲಶ್ರುತಿಯ ನಿ |
ರೂಪಿಸಿ ಶುನಿಗೈಯು |
ಲೇ [2]ಪೊತ್ತು[2] ಮುಕ್ತಿಕೊಳ್ವ ದೇವ || ೯೪ ||

ಭಾಳಲೋಚನನ ಕ |
ಟ್ಟಾಳು ಜಂಬೂರ ಮಾ |
ಕಾಳಯ್ಯ ನಾಲ್ಕು ವೇದವನು ||
ಪಾಳಿಯಿಂ ಪಾಳ್ಮನೆ |
ಹಾಳಸಿಂ ನುಡಿಸಿದ |
ಕೇಳೆಲೊ ದ್ವಿಜ ಮ[3]ತ್ತಿನ್ನೋ[3]ರ್ವ || ೯೫ ||

ಪಿಂದು ಮಾದಿಸಿದ ಭೂ |
ಸುರರ್ನ್ನೆತ್ರಯವನು |
ಏರಿಪತಪಂಡಿತರಾ[4]ಗ[4] ||
ವರ ವಸ್ತ್ರದಿಂ ಕಟ್ಟಿ |
ಶರಣು ಪೊಕ್ಕರಿಗಿತ್ತ |
ವರಿಯ ಕೇಸ್ತುರಿಯುಲೊ ಭ್ರಮಿತ || ೯೬ ||

ಧರಣಿ ಸುರರು ಕೋಟಿ |
ಹರಭಕ್ತರಡಿಗೆರ್ಗ |
ನುರುತರ [5]ಕಣಿಕೆ[5]ಯನೊಂದ ||

---

1-ಎ 2 ಪೊಂತು (ಅ, ಎ, ಜ) 3-ಮ್ಮಾನೋ (ಉ), ತ್ರಯೊಳೋ (ಕ)
4 (ಇ, ಉ, ಕ, ಚ, ಜ, ಟ) 5-ಕಾಣಿ (ಎ)

ಪಿರಿಯು ತ್ರಾಸಿಗೊಳಿಟ್ಟು |
ಸರಿಬಾರದಿರೆ ಬಿಟ್ಟು |
ಧರೆಯೊಳು ಶಿವಚಿತ್ರಯ್ಯಗಳು || ೯೭ ||

ಸನ್ನಿಧ[1]ವೆನಿಸಿ[1]ರ್ದ |
ತೊನ್ನ ವಿಪ್ರರು ಸಾಸಿ |
ರನ್ನಾಡೆ ಧೂಳಿದೇವಗಳ ||
ಪನ್ನಳಿನೋದಕ |
ದಿನ್ನಿರ್ಮಲಾಂಗರಾ |
ದುನ್ನತಿಯ[2]ದ[2] ನೀ ಮರದೆಯ || ೯೮ ||

ಉಸುರಲೇನೆಮ್ಮ ಬಾ |
ಣಸಿಗ ಭೀಮಯ್ಯನ |
ವಸ[3]ರಿ[3]ದ ಬಚ್ಚಲೋದಕದಿಂ ||
ಮುಸುಕಿರ್ದ ಕುಷ್ಠ ವಿ |
ಪ್ರಸಮೂಹ ದಿವ್ಯಾಂಗ |
ದಸುವೆನಿಸಿದುದದನರಿಯ || ೯೯ ||

ವರ ಸಾಮವೇದಿಯಂ |
ಬರದಿ ಬರಲು ಛಾಯೆ |
ಪರಮನೇಗರನುಂಟುಗೆಂದು ||
ಕೆರಹಿನೊಳ್ಮಸು[4]ಕಿ[4] ಭಾ |
ಸುರ ವೃಷ್ಟದೋರಿ ಶ್ರೀ |
ಗುರುವಾದ ಶ್ವಪಚಯ್ಯನರಿಯ || ೧೦೦ ||

---

1-ವಾಗಿ (ಉ, ಕ, ಟ) 2-ನು (ಇ, ಉ, ಕ, ಚ ಜ, ಟ.) 3-ತ (ಅ, ಇ, ಎ.)
4-ಕೆ (ಇ, ಉ)

ಈಶ ಬಕುತರೆ ವಿ |
ಶೇಷವೆನುತ ಬಸ |
ವೇಶ ಕಂಬಳಿಯ ನಾಗಯ್ಯನ ||
ಭಾಸುರ ಕರದಿ ಸು |
ಧಾಸವಿಗರೆದನು |
ಭೂಸುರರತಿ ನಾಚುವಂತೆ || ೧೦೧ ||

ಪರಮ ಪ್ರಸಾದವ |
ತರುತಿರೆ ಕಂಡು ಭೂ |
ಸುರರೆಲ್ಲ ನಿಂದಿಸಲವರ ||
ಪುರವ ಸುಡಲು ಬಂದು |
ಶರಣು ಪೊಕ್ಕರಿಗೆಲ್ಲ |
ಮರಳಿತ್ತ ಬಿಬ್ಬಿಬಾಚಯ್ಯ || ೧೦೨ ||

ಶಂಭು ಪಾದಾಬ್ಜರೋ |
ಲಂಬ ಭೋಗಣ್ಣನ |
ಕೆಂಬಾವಿಯಿಂ ಪೊರಮಡಿಸೆ ||
ಅಂಬಿಕಾಪತಿ [1]ಬ[1]ರೆ |
ಬೆಂಬಳಿ[2]ಯಲ್ಲಿ[2] ಭಂ |
ಗಂ ಬಟ್ಟುದಾ ವಿಪ್ರರರಿಯ || ೧೦೩ ||

ಹರಿ ಎಂದ ವಿಪ್ರನ |
ಕರದ ಸಟ್ಟುಗದಿ ನಿ |
ಬ್ಬರದಿ ಪೊಯ್ಯಲು ಹಲ್ಲು ಮುರಿ[3]ಯೆ[3] ||

1-ಯಿ( ಚ ) 2-ಯಿಂದ(ಅ, ಇ, ಎ, ಚ, ಜ,) 3 ದು(ಅ. ಇ, ಉ, ಎ, ಕ, ಚ, ಜ.)

ನೆರದೆಲ್ಲರ್ ಕಾಬಂತೆ |
ಹರನ ಗರ್ಭವ ಪೊಕ್ಕು |
ಳಿರದೆ ಸತ್ಯಕ್ಕಸನರಿಯು || ೧೦೪ ||

ವೃಡ ತನ್ನ ಭಕ್ತರು |
ನಡೆಯೆ ನಡವನುರ್ವಿ |
ನುಡಿಸೆ ನುಡಿವ ಸಿಂದಿಸಿದರ ||
ತಡೆಗಡಿವತಿ ಭಂಗ |
ಬಡಿಸುವಸಿದು ಸತ್ಯ |
ವಡಿಗಡಿಗೆಲೊ ಕೇ[1]ಳು[1] ವಿಪ್ರ || ೧೦೫ ||

ಎಂದ ಮಾತಿಗೆ ಕರ |
ನೊಂದು ಬಾಡಬ ವು[2]ಗು |
ಳ್ದಿಂ[2]ದನು ಭೈರವಾಂಕನೊಳು ||
ಇಂದು ನಿನ್ನಯ ಮನ |
ಬಂದಂತೆ ನುಡಿವುದಿ |
ದಂದವೆ ತೋರು ದೃಷ್ಟವನು || ೧೦೬ ||

ಎಂದು ನುಡಿಯುಲತ್ಯಾ |
ನಂದದಿಂ ಭೈರವೇ |
ಶಂ ಪಳನೇರಿ ನಾಸೀಗ ||
ಇಂದುಜೂಟಿಸೆನಹು |
ದೆಂದಿಸಿಸುದೆನೆಂದು |
ಬಂದ ಸೋಮೇಶನಾಲಯಕೆ || ೧೦೭ ||

---

1–ಕೊಸೀ (ಅ, ಉ, ಎ, ಚ.)  2–ರುಳಿಂ (ಚ)

ಬನ್ನಿ ಬಕುತ ಜನರ್ |
ಬನ್ನಿ ಲಿಂಗೈಕ್ಯರು |
ಬನ್ನಿ ರಾರಾಧ್ಯಪುಂಗವರು ||
ಬನ್ನಿ ಜಂಗಮದೇವರ್ |
ಬನ್ನಿ ಇನ್ನವರಿವ |
ರೆನ್ನದೆಲ್ಲಾ ಸಮಯಿಗಳು || ೧೦೮ ||

ಎನೆ ಬಂದು ನೆರದುದ |
ವನಿ ಜೆಸಲಾದಂತೆ |
ತನ ತನಗಡರಿ ನೋಡುತಿರೆ ||
ಮನುಮಥ ಪುರ ಕಾಲ |
ವನವನ್ನಿ ಸೋಮನಾ |
ಥನ ಮೂರ್ತಿಯನು ಭೈರವಾಂಕ || ೧೦೯ ||

ನೋಡುತಭವ ಚಂದ್ರ |
ಚೂಡ ನೀನೆನಗಿರು |
ಖಾಡಿದೊಲಿಂತಿವರೆಲ್ಲ ||
ನೋಡುತಿರಲು ಮಾತ |
ನಾಡೆಂದು ಬಿನ್ನಹ |
ಮಾಡೆ ಸೋಮೇಶ ಬಾಯ್ದೆರೆದು || ೧೧೦ ||

ನುಡಿಯಲಂಬರ ತಳ |
ಪೊಡೆಯಲವನಿ ನಡು |
ನಡು[1]ಗ[1] ದಿಗ್ಭಿತ್ತಿಯ ಹೊಲಿಗೆ ||

1. ಗೆ (ಅ, ಇ, ಉ, ಎ, ಜ.)

[1]ಸಿ[1]ಡಿಯಲ್[2]ತ್ಯಾರ್ಥ[2]ದಿಂ |
ದೊಡನೂರ್ಧ್ವ ರವದಿಂದ |
ಮೃಡ ಸೋಮನಾಥನಿಂತೆಂದ || ೧೧೧ ||

ನನ್ನಿಯಿದಹುದಹು |
ದೆನ್ನ ನಚ್ಚಿನ ಭಕ್ತ |
ನೆನ್ನಸುವೆನ್ನಯಾಚಾರ ||
ಎನ್ನತಿಶಯದ ಸಂ |
ಪನ್ನ ಭೈರವದೇವ |
ನನ್ನಾಡೆ ಕರದುದುಂಟುಂಟು || ೧೧೨ ||

ಎನಲುಘೆಯುಘೆಯುಘೇ |
ಎನುತ ಕೃತಾರ್ಥತೆ |
ಯನು ಪಡೆದುದು ಜಗವೆಲ್ಲ ||
ಘನ ಮಹಿಮಾಬ್ಧಿ ವ |
ರ್ಧನ ಚಂದ್ರ ಭೈರವಾಂ |
ಕನಿಗೆ ನಮಿಸಿ ಪೊಗಳುವರು || ೧೧೩ ||

ಮುದನೂರಧಾಸ ವಾ |
ದದೊಳು ರಾಮೇಶನ |
ಪ[3]ದೆದೊ[3]ಮ್ಮೊ ಮಾತನಾಡಿಸಿದ ||
ಮದನ ಹರನ ನುಡಿ |
ಸಿದ ಜೋಳದೊಳಗೆ ನಿಂ |
ದಧಿಕ ಬಾವೂರ ಬ್ರಂಹಯ್ಯ || ೧೧೪ ||

---

1-ಸೆ (ಉ, ಚ) 2-ತ್ಯರ್ಥ (ಅ, ಇ, ಉ, ಎ, ಕ, ಚ, ಟ.) 3-ದವೊ (ಎ.)

ಕುಪಿತನಾಗುತ ಬಂದ |
ನೃಪತಿ ಬಿಜ್ಜಳಗತಿ |
ವಿಪರೀತ ರವದೊಳೋ ಎನಿಸಿ |
ತ್ರಿಪುರಾಂತಕೇಶನೊಳ್ |
ಸ್ವಪರ[1]ವೆಂದಾಗಲ[1] |
ರುಪಿದ ಕಿನ್ನ[2]ರಿಯ ಬ್ರಂಹಯ್ಯ[2] || ೧೧೫ ||

ಲಲಿತ ವೋಹದೊಳು ಕೂ |
ಡಲಸಂಗ ಬಸವೇಶ |
ಗೊಲಿದಾಗ ನೆರೆದ ಬಾ[3]ಡಬ[3]ರ ||
ಕುಲವೆಲ್ಲರಿವೊಲು ವುಂ |
ಜುಳರ[4]ವದಿಂ[4]ದೆಂದ |
ನಲಿದು ಸ್ವಪಕ್ಷ ನಿಮಿತ್ತ || ೧೧೬ ||

ದೇಶವೆಲ್ಲರಿಯೆ ವಾ |
ಗೀಶ ನುಡಿಸಿದ ಬ್ರಂ |
ಹೇಶನ ಪರವೆಯ ಕುಚದಿ ||
ಭಾಸುರಸ್ತನ ಶಂಕ |
ರೇಶ ಎನಲು ನಂಬಿ |
ಗೀಶನೋ ಎಂದ[5]ನರ್ಥಿ[5]ಯಲಿ || ೧೧೭ ||

ಇದು ಕರಚೋದ್ಯವಿಂ |
ತಿದು ಶಿವನೊಲವಿಗೆ |
ವೊದಲು ಸಮಸ್ತರರಿವೊಲು ||

---

1-ವಿದೆಂಬುವ (ಅ, ಇ, ಉ, ಎ, ಕ, ಚ, ಟ) 2-[illegible] (ಅ, ಇ, ಉ, ಕ, ಚ) 3 ಹತ (ಅ, ಎ, ಟ.) 4 ನಾವದಿಂ (ಇ, ಉ, ಕ, ಚ, ಟ.) 5-ಳಿತಿ (ಅ, ಉ, ಕ, ಚ, ಟ.)

ಮದನ ಹರನ ನುಡಿ ।
ಸಿದ ಭೈರವಾಂಕನೆಂ ।
ಬುದ ಶರಣಾಳಿ ಕೊಂಡಾಡೆ ॥ ೧೧೮ ॥

ಶರಣೆಂದು ಪುನರಪಿ ।
ಕರನ ಮುಗಿವುತೆಲ್ಲ ।
ಹರಗಣ ನಿಕರಕಿಂದಿಂಗೆ ॥
ಭರಿತ ತಿಂಗಳು ಸಂವ ।
ತ್ಸರ ವಿಭವದ ಜೇಷ್ಠ ।
ದುರು ಕೃಷ್ಣ ದಶಮಿಂದುವಾರ ॥ ೧೧೯ ॥

ಪೋದಪೆವಿದು ಸತ್ಯ ।
ಸಾದರದಿಂದಲು ।
ಮಾಧವ ತಾನೆಯ್ದಿ ಒ[1]ರಲು[1] ॥
ಈ ಧರೆಯರಿಯಲಿ ।
ಲ್ಲಾ [2]ಶಿ[2]ವಗಣ ಸುರ ।
ನಾದದಿ ಕೈಲಾಸಪುರಕೆ ॥ ೧೨೦ ॥

ಸನ್ನಿಧ[3]ವಾ[3]ಗಿಹು ।
ದಿನ್ನಿದು ಬನ್ನಿ ಬೇ ।
ಗೆನ್ನುತ ಶರಣ ಸಂಕುಳಕೆ ॥
ಬಿನ್ನವತ್ತಳೆ ಭೂತಿ ।
ಯನ್ನು ಕಳುಪಿದನ ।
ತ್ಯುನ್ನತ ಭೈರವದೇವ ॥ ೧೨೧ ॥

---

1-ಂದು (ಇ, ಉ, ಕ, ಚ, ಜ, ಟ.) 2-ದೇ (ಅ, ಇ, ಉ, ಎ.) 3-ಮಾ (ಉ, ಕ.)

ರಾಜಶೇಖರ [1]ಪದ[1] |
ಪೂಜಿತ ವರ ಕಂಪ |
ರಾಜ ಮುಖ್ಯತುಳ ದೊರಗಳು ||
ಸೋಜಿಗ ಭೈರವ |
ರಾಜ ಪ್ರೋದಪಸಂತೆ |
ರಜತಾಲಟಕೆನುತಾಗ || ೧೨೨ ||

ಅಷ್ಟದಿಕ್ಕಿನೊಳಘ |
ಘಟ್ಟಿನ ಶರಣಾಳಿ |
ಬಟ್ಟೆಯಿಂಬಿಲ್ಲನೆಂಬಂತೆ ||
ಇಟ್ಟಣಿಸುತ [2]ಬ[2]ರೆ |
ಕಟ್ಟೆ ಗುಡಿಯು ಪೊಡ |
ಮಟ್ಟ[3]ಡಿ[3]ಗೊಂಬ ಸಂಭ್ರಮವು || ೧೨೩ ||

ಪಿರಿದುಸಚರಿಸಿ [1]ಸ |
ತ್ಕರಿಸಿ ಬೇಡಿದುದಿ[4]ತ್ತು |
ಪರಿತೋಷಪಡಿಸಿ [5]ಪ[5]ರ್ವವನು ||
ಪರುರವಿಸುತ್ತ ಚ |
ಪ್ಪರವಿಕ್ಕಿ [6]ಸೋ[6]ಪ |
ಸ್ಕರಗಳನಂತವೆಲ್ಲವನು || ೧೨೪ ||

ನೆರಪಿದನಾಗನ |
ಪರಿಮಿತ ಶರಣಾಳಿ |
ಯೊರೆಯಲೇನೇನ [7]ಭಕ್ತಿ[7]ಯಲಿ ||

---

1 ವರ (ಇ.), ಪಾದ (ಕ, ಜ, ಟ.) 2-ಮಿ (ಇ.) 3-ದ್ಯ (ಅ, ಇ, ಉ, ಎ, ಕ, ಚ, ಜ, ಟ.) 4 ಸಿಬೇಡಿತ್ತನಿತ್ತು (ಇ.) 5-ಸ (ಅ, ಇ, ಎ, ಚ.) 6-ಸ್ವ (ಅ.); ಪಾ (ಉ.) 7-ನಿಷ್ಠೆ (ಉ ಕ, ಟ)

ಪಿರಿದು[1] ಪಚರಿಸುತ್ತ[1] |
ತರತರವಿಡಿದು ಬ |
ಪ್ಪರ ಬಗೆವೆಚ್ಚಿ ಕುಳ್ಳಿರಿಸಿ || ೧೨೫ ||

ವ್ರತ ಶೀಲವಂತರ |
ಪ್ರತಿಮ ಲಿಂಗಾಂಗ ಸಂ |
ಯುತ[2]ರ[2] ಶಿವಾನುಭಾವಿಗಳ ||
ಶಿತಿಕಂಠನರ್ಚಿಪ |
ರತಿಯುಳ್ಳ ಭಕ್ತರ |
ಪ್ರತಿಮ[3]ರೇನೇನ ನಿಶ್ಚೈಸ[3] || ೧೨೬ ||

ತಂದೆಡೆ ಮಾಳ್ಪರಾ |
ನಂದದಿ ಶಿವಗಣ |
ವೃಂದಕಾನಂದವಿಮ್ಮಡಿ[4]ಸಿ[4] ||
ಇಂದುಧರನ ಪೂಜೆ |
ಯಂದವಡಿಸುತತಿ |
ಸಂದಣಿಗೊಳುವ ಜಂಗಮವು || ೧೨೭ ||

ರಸ ರಸಾಯನವ ಭುಂ |
ಜಿಸಿ ಪರಮಾನಂದ |
ರಸದೊಳಗಾಳು ತೇಳುತ್ತ ||
ಒಸಗೆ ಶೋಭನ ವಾದ್ಯ |
ವಿಸರ ಗೀತಂಗಳಿಂ |
ದೆಸೆವರನಂತ ಬಳುತರು || ೧೨೮ ||

---

1-ಭಕ್ತಿಯೊಳಿತ್ತು (ಉ, ಕ, ಜ, ಟ.) 2-ರು (ಅ, ಉ, ಕ, ಚ, ಜ, ಟ.) 3-ರು ನೆನೆಯಲಿಚ್ಛೈಸಿ (ಅ, ಎ, ಜ, ಟ.) ; ರೇನೇನ ನಿಟ್ಟೈಸೆ (ಕ, ಚ.) 4-ಸೆ (ಉ, ಕ.)

ದಿನ ದಿನಕುತ್ಸಾಹ |
ಘನವಾಗೆ ಗಣಪರ್ವ |
ವನು ಮಾಡಿ ಭೈರವದೇವ ||
ಘನ ಗುರುವಿನ ಪಾದ |
ವನಜವ ಭಜಿಸುತಿ |
ಪ್ಪಿನ ತಿಂಗಳಾದುದಂದಿಂಗೆ || ೧೨೯ ||

ಗಣಕುಲ ಕುಕಿಲಿಟ್ಟು |
ಕುಣಿದಾಡುತೊಡನೆ ಸಂ |
ದಣಿಗೊಳುತಿ[1]ರಲು[1] ಸೋಮೇಶ ||
ಗಣಿಯರದಿಂ ಮಣಿ |
ಮಣಿದು ಬದುಕುವೆವೆಂ |
ದೆಣಿಕೆಯನುಳಿದೆಲ್ಲರಿರಲು || ೧೩೦ ||

ಆರತಿಗಳ ಮಂಗ |
ಳಾರತಿಗಳನು ಧೂ |
ಪಾರತಿಗಳ ಪಿಡಿದಿರ್ಪ ||
ನಾರಿಯರಿಂ ಪೂವಿ |
ನಾರತಿವಿಡಿದಾಗ |
ಹಾ[2]ರುತಿರ್ಪರು ಗಣಕುಲವ[2] || ೧೩೧ ||

ತುಂಬಿದ ಗಣ ನಿಕು |
ರುಂಬ ನೋಡುತ್ತಿರೆ |
ಅಂಬಿಕಾ ಪತಿಯ ನೆನಹನು ||

---

1-ರೆ (ಅ.); ತೀಗ (ಉ, ಚ.) 2-ರಿಪ್ಪ ಗಣಕುಲದಿಂದ (ಇ, ಉ, ಕ, ಚ, ಟ.)

ಹಂಬಲಿಸುತ ಹರು ।
ಷಂ ಬೊಗುತಿರ್ಪರಾ ।
ಡಂಬರವತಿಶಯುವಾಗಿ ॥ ೧೩೨ ॥

ಅವಸಿಯ ಜನರೆಲ್ಲ ।
ಶಿವನ ಕಂಡಪೆವೀಗೆಂ ।
ಬವರು ಕೆ[1]ಲಂಬವರ್ಮ[1]ತ್ರೀಗ ॥
ಇವರ ಶ್ರೀ ಪಾದ ಪ ।
ದ್ಮವ ಬಿಡೆನೆಂಬರು ।
ತ್ಸವದಿ ಕೆಲಂಬರೊಪ್ಪಿ[2]ರಲು[2] ॥ ೧೩೩ ॥

ಆರಾಧ್ಯರಮಲ ಚಿತ್ ।
ಸಾರರ್ ವಿಸ್ತಾರರ್ ಸಂ ।
ಸಾರ ನಿಸ್ಸಾರವೆಂಬವರು ॥
ಭೂರಿ ಕರ್ಮಧ್ವಾಂತ ।
ಸೂರರ್ ಶಿವಾನಂದ ।
ಪೂರ[3]ರಾ[3]ಚಾರರ್ ನೋಡುತಿರೆ ॥ ೧೩೪ ॥

ಗುರು ಸೋಮನಾಥನ ।
ಚರಣವ ಮಹಾದೇವಿ ।
ಯುರು ಪಾಡುತಾಡುತರ್ಚಿಸುತ ॥
ಲಿರೆ ಭೈರವಾಂಕ ಶ್ರೀ ।
ಗುರು ಪಾದಾಹ್ವಾನದೊಳ್ ।
ಭರಿತ ಪಂಚಾಕ್ಷರ ಸ್ಫುರಿತ ॥ ೧೩೫ ॥

1. ರುಮ (ಅ, ಕ, ಟ.) 2. ಹರು (ಚ, ಟ.) 3. ರಂ (ಚ.)

ಧ್ಯಾನಿಸುತಿರೆ ಕೋಟಿ |
ಭಾನು ಪ್ರಕಾಶ ಭೇ |
ರೀ ನಾದ ಜಯ ಜಯ ರಭಸ ||
ಕಾನಕ ರಚಿತ ವಿ |
ಮಾನ ಪ್ರಸೂನದ |
ಸೋನೆ ಧೂಪದ ನವ್ಯ ಧೂ[1]ಮು[1] ||೧೩೬||

ಕವಿಯೆ ಬಾಲಿಂದು ಜಾ |
ಹ್ನವಿ ಜಟಾಳಿಕ ನೇತ್ರ |
ಶಿವೆ ಶೂಲಾಭಯ ಪಂಚವದನ ||
ಪವನಭುಗ್ದೊಡ ಪುಲಿ |
ದೊವಲುಡಿ ದಶಭುಜ |
ನವಭಸ್ಮ ವಿಷ ಗಜಾಜಿನವು ||೧೩೭||

ವೃಷಭವಾಹನ ಪದ |
ಬಿಸರುಹದಲಿ ರಾ |
ಜಿಸುವ ಮಾಧವನಕ್ಷಿ ಮೆರೆವ ||
ಪಶುಪತಿ ಸಾಸಲ |
ರಸ ಸೋಮನಾಥ ಸಂ |
ತಸದಿಂದ ನಿಜದೋರಿದನು ||೧೩೮||

ಹರಿಯಜ ಸುರಸ ದಿ |
ಗ್ವರರು ಗಂಧರ್ವರು |
ಗರುಡರಪ್ಸರರು ಕಿನ್ನರರು ||

1–ಮ್ಮಾ (ಅ, ಉ, ಎ, ಕ, ಚ, ಟ.)

ಕರಿಮುಖ [1]ವೀರಾಂಕ[1] ।
ವರ ಶಕ್ತಿಧರ ನಂದಿ ।
ಪರಮ ಮುನೀಶರೊಪ್ಪಿ[2]ದರು[2] ॥ ೧೩೯ ॥

ದೃಢ ಭಕ್ತ ಭೈರವ ।
ಮಡದಿ ಸಹಿತ ಶಿವ ।
ನಡಿಗೆ ಸಾಷ್ಟಾಂಗವೆರಗಲು ॥
ಪಿಡಿದು ಪುಷ್ಪಕದೊಳ ।
ಗಿಡಲುಘೇಯುಘೇಯೆಂದ ।
ರೊಡನೆ ದೇವಾಸುರರೆಲ್ಲ ॥ ೧೪೦ ॥

ಪೂಮಳೆಗಳು ಧೂಪ ।
ಧೂಮ್ನ ದುಂದುಭಿ ರವ ।
ಭೂಮಿಗದ್ಭುತವನೆಸಗಲು ॥
ಸೋಮೇಶನೆಸೆದನಾ ।
[3]ನಾಮ[3] ನಿಕರದಿಂದ ।
ವ್ಯೋಮ [4]ಮಧ್ಯ[4]ದಿ ತೊಳ ತೊಳ[5]ಗಿ[5] ॥ ೧೪೧ ॥

ಇತ್ತ ಭೈರವದೇವ ।
ನೊತ್ತರೀಯವ[6]ನು[6] ಸೋ ।
ಡುತ್ತಿರ್ದರತಿ ಬೆರಗಾಗೆ ॥
ಬಿತ್ತರದಿಂ ನಭ ।
ದತ್ತ ಕನಕ ರಚಿ ।
ತೋತ್ತಮ ಪುಷ್ಪಕದೊಳಗೆ ॥ ೧೪೨ ॥

1. ವಿರತ (ಇ, ಜ, ಟ.) 2. ರಲು (ಉ, ಟ.) 3. ಸುರ (ಇ) 4. ಮಾರ್ಗ (ಇ.)
5. ಗೆ (ಉ, ಕ, ಚ, ಜ, ಟ.) 6. ನೆ (ಅ, ಉ, ಕ, ಚ, ಟ.)

ದಂಪತಿಗಳನಿಟ್ಟು ।
ಕಂಪುಗೋಲಾರಿ ಜ ।
ಗಂ ಪೊರೆಯೇರಿ ನೋಡುತಿರೆ ॥
ಮುಂಪೋದ ಕೈಲಾಸ ।
ಕಂ ಪಲವಾದ್ಯ ಘೋ ।
ಷಂ ಪಿರಿದೆಸೆಯೆ ಸಂತಸದಿ ॥ ೧೪೩ ॥

ತಾರಾದ್ರಿಯೊಳು ಗುಡಿ ।
ತೋರಣಗಳ ಕಟ್ಟೆ ।
ಆರತಿ ಪಿಡಿದಿದಿರಾಗಿ ॥
ಮಾರಾರಿಗೆರಗುವ ।
ಭೈರವದೇವಗ ।
ಪಾರಾಮರಾಂಗನಾ ನಿ[1]ವಹ[1] ॥ ೧೪೪ ॥

ಬೆಳಗಿನ ಬಿಂಬದೊ ।
ಬ್ಬುಳಿಯೊ ಪುಣ್ಯಾಂಗಳು ।
ರುಳಿಯೊ ಎಂದೆನಿಸಿ ರಾಜಿಸುತ ॥
ಧಳಧಳಿಸುವ ರೌಪ್ಯಾ ।
ಚಳದಗ್ರದಲ್ಲಿ[2]ಪ್ಪ[2] ।
ದೆಳೆವೆರೆದ[3]ಬೆಯನ[3]ಭವನ ॥ ೧೪೫ ॥

ನವ ಮಣಿ ಗಣದಿಂ[4]ದೆ[4] ।
ಸವೆದ ಗೋಪುರಗಳಿಂ ।
ರವಿ ಶಶಿಕೋಟಿ ಕಾಂತಿಯನು ॥

---

1-ಕರ (ಉ, ಕ, ಟ) 2 ಪ್ಪೂ (ಇ) 3-ಳೆದ (ಕ.) 4-ದ (ಉ, ಕ, ಚ, ಟ.)

ತವೆ ಪಳಿವಂತಿರ್ಪ |
ಭವನಕೆ ಬಂದನು |
ತ್ಸವ ಮಿಗೆ ಸೋಮಶೇಖರನು || ೧೪೬ ||

ಪರಮಾನುರಾಗದಿಂ |
ಬರುತ ಶಂಕರ [1]ಶುಭ[1] |
ಕರ ಪಾಪಹರ ಶಶಿಧರನು ||
ಕರಿಚರ್ಮಧರ ಪುರ |
ಹರ ಕಾಮಹರ ಕಾಲ |
ಹರ ಸೋಮನಾಥ [2]ಮನ್ನಾಥ[2] || ೧೪೭ |

ಬರುತ ತನ್ನಯ ಪಿರಿ |
ಯರಮನೆಯೊಳಗೆ ಪಿಂ |
ಗರಿಸಿದ ಪಿಂಹ[3]ವಿಷ್ಟರದಿ[3] ||
ಸ್ಥಿರದಿ ಕುಳ್ಳಿರ್ದು ಶ್ರೀ |
ಗುರು ನಂದಿಕೇಶನೊಳ್ |
ಒರೆದ ಭೈರವನ ಚರಿ[4]ತೆಯ[4] || ೧೪೮ ||

ಧಾರಿಣಿಯೊಳು ಪೋಗಿ |
ವೀರಶೈವವ ನೆರೆ |
ಪಾರ[5]ವೆಯ್ದಿ[5]ಸಿದರಿಂತುಂಟೆ ||
ಭೂರಿ ಪವಾಡವ |
ನೋರಂತೆ ಗೆಲಿದ[6]ವ್ಮ[6] |
ಪಾರ ಮಹಿಮೆವೆತ್ತರುಂಟು || ೧೪೯ ||

---

1–ಕೃಪಾ (ಇ.) 2–ನಾಸದನಾ (ಕ) 3–ಪೀಠದೊಳು (ಇ, ಉ, ಕ, ಚ, ಜ, ಟ.)
4–ತವ (ಇ, ಉ, ಕ, ಚ, ಜ, ಟ.) 5 ವೈದಿ (ಇ, ಉ, ಕ, ಚ, ಜ, ಟ), ವೇದಿ (ಅ.)
6–ಸ್ನ (ಉ, ಕ)

ಎಂದು ಸೋಮೇಶ್ವರ |
ನಂದಿಕೇಶಗೆ ಪೇಳು |
ತಂ ದರಹಸಿತಾಸ್ಯನಾಗಿ ||
ಅಂದವಡೆದ ಗಣ |
ವೃಂದ ಮಧ್ಯದೊಳಿತ್ತ |
ನಂದು ಸಾರೂಪ್ಯ ಪದವನು || ೧೫೦ ||

[1]ನೆಟ್ಟನೆ[1] ಪಟ್ಟವ |
ಕಟ್ಟಿದ ದುರಿತಘ |
ರಟ್ಟನು ಭೈರವಾಂಕಸಿಗೆ ||
ಕೊಟ್ಟನು ಮಹಾದೇವಿ |
ಗಿಟ್ಟೋಲೆ ಸ್ಥಿರವೆಂ[2]ಬ[2] |
ಕಟ್ಟಿಸಕದ ಸಿಜಪದವ || ೧೫೧ ||

ಲಯಕಾಲನೆನಿಸುವ |
ನ್ವಯದ ನಾಮವನಿತ್ತು |
ಪ್ರಿಯ ಮಿಗೆ ಶ್ರೀ ಸೋಮನಾಥ ||
ಶಯಿಲಜಾಲಿಂಗ [3]ನಾ[3] |
ಭಯ ಹಸ್ತ ಲಲಿತ ಚಿ |
ನ್ಮಯಃ ರೂಪ ರಾರಾಜಿಸಿದನು || ೧೫೨ ||

ಎಸೆದನಭವ [4]ದಶ |
ದಿಶೆಯೊಳಂ[4]ಗಚ್ಛವಿ |
ಪಸರಿಸಿ ಪರ್ವಿ ದಟ್ಟೈಸಿ ||

---

1 ಕೊಟ್ಟನು (ಅ, ಇ, ಉ, ಎ, ಚ, ಜ ), ಕೊಟ್ಟನತಿ (ಟ ) 2-ದು (ಅ,ಎ,ಕ.)
-ನಂ (ಚ.) 4-ರಸೆಪೆಸೆಯೊಳ (ಎ )

ಶಶಿ ರವಿ ಕಾಂತಿಯ |
ಮಸುಳಿಸಲಿರ್ದ ಸಂ |
ತಸದಿಂದ ಜ್ಯೋತಿರಾಕಾರ || ೧೫೩ ||

ಹರಿ ಬ್ರಂಹರಿಂದ್ರ ಮು |
ಖ್ಯರು ಕಾಣದಕಳಂಕ |
ಪರಮ ಪಾವನ ಚಿತ್ ಸ್ವರೂಪ ||
ಕರುಣಾಬ್ಧಿ ಬೋಳಿಯ
ರರಸ ಮೃತ್ಯುಂಜಯ |
ಗುರು ಸೋಮನಾಥನೊಪ್ಪಿದನು || ೧೫೪ ||

ಹರಿ[1] ಬ್ರಂಹ ಸುರಪ[1]ದಿಗ್ |
ವರ ಮನು ಮುನಿಗಳ್ ನಿ |
ರ್ಜರರಷ್ಟವಸುಗಳು ರುದ್ರ ||
ವರ ಗಂಗವಾಳುಕ |
ಪರಿಮಿತ ಗಣಕುಲ |
ವೆರಸಿ ಸೋಮೇಶನೊಪ್ಪಿದನು || ೧೫೫ ||

ಶ್ರೀ ಶಶಿಭೂಷ ಸ |
ರ್ವೇಶಾಘನಾಶ ದಿಗ್ |
ವಾಸನಾಕಾಶೋರುಕೇಶ ||
ದೋಷವಿನಾಶ ಮ |
ದೀಶ ಸಾಸಲ[2] ಸೋ |
ಮೇ[2]ಶನೊಪ್ಪಿದ ಚಿತ್ಪ್ರಕಾಶ || ೧೫೬ ||

---

1-ಯಜಸುರರು (ಅ, ಇ, ಉ, ಎ, ಕ, ಟ) 2-ಪುರೇ (ಅ, ಎ.)

ಸಾಸಲಪುರದ ಸೋ |
ಮೇಶನುನ್ನತ ಭೈರ |
ವೇಶನಿಗೊಲಿದು ಕೈಲಾಸ |
ವಾಸಕೊಯ್ದಿದನು ವಿ |
ಲಾಸದಿಂ ಪೇಳ್ದ ಕ |
ವೀಶ ನಂಜುಂಡನರ್ಥಿಯಲಿ || ೧೫೭ ||

ಶಶಿ ರವಿ ತಾರೆಯಾ |
ಗಸ ನೆಲ ನೀರಗ್ನಿ |
ಶ್ವಶನರುಳ್ಳನ್ನಕೀ ಚರಿತೆ ||
ರಸೆಯೊಳಗತಿ ಶೋ |
ಭಿಸಲಿ ಸೋಮೇಶ ಪಾ |
ಲಿಸಲಿ ತನ್ನಿಜಸಮಯವನು || ೧೫೮ ||

ಹರುಷದಿಂದವೆ ನೋಡಿ |
ಬರದಿದೋದಿದ[1]ಡೆ[1] ವಿ |
ಸ್ತರಿಸಿ ಪೇಳ್ದ[2]ಡೆ[2] ಪರಿಸಿದ[3]ಡೆ[3] ||
ಗುರು ಸೋಮನಾಥನ |
ಕರುಣ ಸಂಭವಿಪುದು |
ಧರೆಯೊಳಗಿದು ಸಿದ್ಧವೆಂದು || ೧೫೯ ||

ಪೇಳಿದ ಶಿವಭಕ್ತ |
ರಾಳು **ನಂಜುಂಡೇಶ** |
ಕೇಳುವುದಧಿಕ ಸಜ್ಜನರು ||

---

1-2-3 ರೆ (ಇ.)

ಭಾಳನೇತ್ರನ ಕೃಪೆ ।
ಯೋಳಿಗೆಯೊಡನೆ ನಂ ।
ಮೋಳ್[1]ವಪ್ಪು[1]ದು ಶರಣಾರ್ಥಿ ॥ ೧೬೦ ॥

ಗುರು ಸೋಮನಾಥನ ।
ಕರುಣದಿಂ ಭೈರವೇ ।
ಶ್ವರನ ಚರಿತೆ ಪಂಚ ಸಂಧಿ ॥
ವರ ವೃತ್ತವೈದು ಸಾ ।
ಸಿರದ ಮೇಲಿನ್ನೂರು ।
ಭರಿತ ಷಟ್ಪದವಿದು ಗಣನೆ ॥ ೧೬೧ ॥

**ಅಂತು ಸಂಧಿ ೫ ವೃತ್ತ ೫ ಕ್ಕಂ ಪದ ೧೨೨೭ ಕ್ಕಂ**

**ಮಂಗಳ ಮಹಾ**

ಶ್ರೀ ಶ್ರೀ ಶ್ರೀ ಶ್ರೀ ಶ್ರೀ

ಭೈರವೇಶ್ವರ ಕಾವ್ಯ
ಸಂಪೂರ್ಣಂ



[1] ಳಪ್ಪ (ಇ, ಉ.)

ಭೈರವೇಶ್ವರ ಕಾವ್ಯದ

# ಕಠಿಣ ಶಬ್ದಗಳ ಕೋಶ

## ಅ

| ಶಬ್ದಾರ್ಥ | ಸಂಧಿ–ಪದ್ಯ | ಶಬ್ದಾರ್ಥ | ಸಂಧಿ–ಪದ್ಯ |
|---|---|---|---|
| ಅತುಳ- ಎಣೆಯಿಲ್ಲದ. | ೩ ೧೩೬ | ಅಳುಂಬ-ಆಧಿಕ್ಯ, ಹೆಚ್ಚಳ. | ೩–೧೪೦ |
| ಅಭ್ರ=ಮೇಘ | ೧–೩ | ಅಕ್ಕಜ=ಆಶ್ಚರ್ಯ. | ೪– ೬೪ |
| ಅಂಜುಲಿ=ಬೊಗಸೆ. | ೧–೨೦೦ | ಅಭಿರಾಮ=ಮನೋಹರ. | ೪– ೬೯ |
| ಅಲಘು=ಅಗುರವಲ್ಲದ. | ೧–೨೭೬ | ಅಜಗರ ಹೆಬ್ಬಾವು. | ೪–೧೧೨ |
| ಅಣಿ=ಸೈನ್ಯ | ೧–೩೬೧ | ಅವಗಡಿಸಿದ=ಪ್ರತಿಭಟಿಸಿದ. | ೪–೧೨೧ |
| ಅಂಬು–ದುರ್ಗ (ಕೋಟೆ) | ೨– ೫೬ | ಅರುಹ=ಜಿನ | ೫– ೬೩ |
| ಅಶ್ರು=ಕಣ್ಣೀರು. | ೩– ೫೩ | ಅರವಿಂದ=ತಾವರೆ | ೨–೨೧೭ |
| ಅಳಕ=ಮುಂಗುರುಳು. | ೨– ೮೨ | ಅಮರ್ದ=ಅಮೃತ. | ೨– ೮೬ |

## ಆ

| | | | |
|---|---|---|---|
| ಆಸುರ=ಘೋರ. | ೧–೧೯೪ | ಆಶಾ=ದಿಕ್ಕು. | ೫– ೧ |

## ಇ

| | | | |
|---|---|---|---|
| ಇನಿಬರು=ಇಷ್ಟುಮಂದಿ. | ೧–೧೨೯ | ಇನ=ಸೂರ್ಯ | ೩– ೫೯ |
| ಇಭ=ಆನೆ. | ೧–೨೦೨ | ಇಕ್ಷುಜಂತ್ರ=ಕಬ್ಬಿನಗಾಣ | ೧– ೭೦ |

## ಉ

| | | | |
|---|---|---|---|
| ಉಕ್ತಿ=ಮಾತು. | ೧– ೧೮ | ಉಡು=ನಕ್ಷತ್ರ. | ೧– ೨೮ |
| ಉಡಿ=ಮುರಿಯುವುದು. | ೨–೨೨೩ | ಉಕ್ಷ=ವೃಷಭ. | ೪– ೨ |
| ಉಬ್ಬಣ=ಒಂದುಬಗೆಯ ಆಯುಧ. | ೩– ೯ | ಉದ್ಗತ=ಹೊರಹೊಮ್ಮಿದ. | ೪– ೯೮ |
| | | ಉಮ್ಮಳ=ಕಳವಳ. | |

## ಎ

| | | | |
|---|---|---|---|
| ಎಡ್ಡ=ಸುಂದರ. | ೨– ೯೪ | ಎಕ್ಕಟಿ=ಗುಟ್ಟು, ಹತ್ತಿರ. | ೪– ೬೪ |

| ಶಬ್ದಾರ್ಥ | ಸಂಧಿ–ಪದ್ಯ | ಶಬ್ದಾರ್ಥ | ಸಂಧಿ–ಪದ್ಯ |
|---|---|---|---|

## ಏ

| | | | |
|---|---|---|---|
| ಏಣ=ಜಿಂಕೆ. | ೧–೧೩ | ಏಣಾಂಕ=ಚಂದ್ರ. | ೪– ೬೪ |

## ಒ

| | | | |
|---|---|---|---|
| ಒರಲಾಂತು=ಪ್ರೀತಿಯಿಂದ. | ೪– ೫೧ | ಒಕ್ಕ=ಸೋರಬಿದ್ದ, ಸುರಿದ. | |

## ಕ

| | | | |
|---|---|---|---|
| ಕಲೆ=ಲಲಿತವಿದ್ಯೆ. | ೧– ೨೦ | ಕಿಂಕಿಣಿ=ಸಣ್ಣಗೆಜ್ಜೆ. | ೨– ೨೦ |
| ಕಟಕ=ಹಸ್ತಾಭರಣ. | ೨– ೧೯ | ಕುರುವಕ=ಉಗುರು ಕೆಂಪು ಮಾಡುವ ಒಂದು ರಸಪಗಿಡ. | ೧– ೭೬ |
| ಕಟ್ಟುಗಿದು=ಶಕ್ತಿಗುಂದಿ. | ೪–೧೨೮ | ಕುಂಭೀರ=ಮೊಸಳೆ. | ೧–೧೨೧ |
| ಕದೞ್ಬಿತು=ಮುತ್ತಿತು. | ೫– ೩೪ | ಕುಂಚ=ಚಾಮರ. (ಬೀಸಣಿಗೆ) | ೫– ೫೫ |
| ಕದೃಂಕು=ಕೊಕ್ಕಿನಾಕಾರದ ಬೆರಳಿಂದ ಕುಟುಕುವುದು. | | ಕೂಪಾರ=ಸಮುದ್ರ. | ೧– ೨೮ |
| ಕರೋಟಿ=ತಲೆಬುರುಡೆ. | ೫– ೪೦ | ಕೆಂಗಣ್ಣ=ಕೋಗಿಲೆ. | ೧– ೫೫ |
| ಕಡಂಗ=ಉತ್ಸಾಹಗೊಳ್ಳು | ೩– ೧೮ | ಕೇಕಿ=ಕೇಕೇಶಬ್ದ. | ೨– ೫೬ |
| ಕಾದಂಬ=ಬಾಲಹಂಸ. | ೧– ೪೩ | ಕೇಳ=ಕೀಳು. | ೧–೪೦೫ |
| ಕಾರಂಡ=ಒಂದು ಜಾತಿಯ ಬಾತು | ೧– ೫೫ | ಕೈಮಿಗಲು=ಅಧಿಕವಾಗಲು. | ೩–೧೬೨ |
| ಕಾಂಸ್ಯ=ಕಂಚು. | ೧– ೮೧ | ಕೊಂಚೆ=ಕ್ರೌಂಚಪಕ್ಷಿ. | ೧– ೫೫ |
| ಕಾಪು=ಕಾವಲು. | ೧–೩೬೧ | ಕೊಂತ=ಈಟಿ, ಭರ್ಜಿ. | ೩– ೯ |
| ಕಾಸಾರ=ಸರೋವರ. | ೨– ೩೩ | ಕೊಠಾರ=ಧಾನ್ಯದ ಕೋಣೆ, ಉಗ್ರಾಣ. | ೩–೧೦೯ |
| ಕಾರಾಟ=ರಾತ್ರಿಯ ಆಟ. | ೨– ೭೮ | ಕೊರ್ವಿ=ಶೋಭಿಸಿ. | ೪–೧೫೯ |
| ಕಿನಿಸೇರಿ=ಕೋಪವೇರಿ. | ೧–೨೨೩ | ಕೋಳ್ಮಿಗ=ಕೊಂಬಿರುವ ಮೃಗ. | ೧– ೫೬ |
| ಕೀಲಾಲ=ಉದಕ, ನೀರು. | ೨– ೫೨ | ಕೋಡ=ದಾನಿ. | ೨–೧೮೭ |

## ಖ

| | | | |
|---|---|---|---|
| ಖಗ=ಸೂರ್ಯ, ಬಾಣ, ಹಕ್ಕಿ. | | ಖಾತಿ=ಕೋಪ, ಸಿಟ್ಟು. | |
| ಖರ=ಹರಿತ, ಮೊನೆ. | ೧– ೫೨ | ಖಂಜ=ಮೋಟುಗಾಲು. | ೧– ೫೫ |
| ಖರ್ವ=ತಗ್ಗಾದ. | ೧– ೬೯ | ಖಚರ=ಗಂಧರ್ವ. | ೩– ೬೩ |
| ಖಡ್ಗ=ಮೂಗಿನ ಹತ್ತಿರ ಕೊಂಬಿರುವ ಪ್ರಾಣಿ. | ೩– ೧೭ | ಖಡ್ಗಿ=ಆಯುಧಪಾಣಿ. | |
| | | ಖೇಡ=ದಿಗಿಲು, ಗಾಬರಿ. | |

| ಶಬ್ದಾರ್ಥ | ಸಂಧಿ–ಪದ್ಯ | ಶಬ್ದಾರ್ಥ | ಸಂಧಿ–ಪದ್ಯ |
|---|---|---|---|

## ಗ

| | | | |
|---|---|---|---|
| ಗಭಸ್ತಿ=ಕಿರಣ. | ೧– ೩೪ | ಗ್ರಾವಜ=ಗಿರಿಜಾ. | ೫– ೧ |
| ಗಾವಧಿ=ಮೂಢ. | ೧–೧೬೦ | ಗಾಡಿ=ಸೌಂದರ್ಯ, ಚಲುವು | |

## ಘ

| | | | |
|---|---|---|---|
| ಘೃಣ=ತೇಜಸ್ಸು. | ೧– ೩೪ | ಘಾತ=ಪೆಟ್ಟು, ಸಾವು, ಹಾನಿ. | |

## ಚ

| | | | |
|---|---|---|---|
| ಚಕೋರ=ಬೆಳ್ದಿಂಗಳಿನಲ್ಲಿ ಚೆಲಿಸಿ ಕೂಗುವ ಹಕ್ಕಿ. | ೧– ೫೫ | ಚಾಗ=ದಾನ, ತ್ಯಾಗ. | ೧– ೮೭ |
| | | ಚಾಕ=ಚುರುಕು. | |
| ಚಕ್ಕ=ಹೊಳೆವ, ಚಲುವ. | | ಚಾಮಿ=ಬಂಗಾರ. | ೨– ೧೦ |
| ಚಚ್ಚರ=ಎಚ್ಚರಿಕೆ. | ೪–೧೨೭ | ಚಂಪಕ=ಸಂಪಿಗೆ. | ೨– ೫ |
| ಚಮೂಪ=ಸೇನಾನಿ | ೨ ೧೩೬ | ಚಂಪೆ=ಪರಿಮಳ | |
| ಚವರಿ=ಚವುರಿ. | ೨– ೬೧ | ಚೂತ=ಮಾವು. | ೪– ೧ |

## ಛ

| | | | |
|---|---|---|---|
| ಛವಿ=ಕಾಂತಿ. | ೧–೩೩೧ | ಛದಿ=ಮಾಡು. | |

## ಜ

| | | | |
|---|---|---|---|
| ಜಳಯಂತ್ರ=ಬೀಸಣಿಗೆ. | ೨– ೪೦ | ಜಿನ=ಈಶ್ವರ | ೧–೩೦೦ |
| ಜಂಝಾರ=ವೀರ. | ೧–೨೪೭ | ಜಿನುಗು=ಝೇಂಕರಿಸು | |

## ಠ

| | | | |
|---|---|---|---|
| ಠಾಣೆ=ದಂಡು. | ೩ ೨೨ | ಠವಣೆ=ಮಾಡಿಸುವುದು. | |

## ಡ

| | | | |
|---|---|---|---|
| ಡೋರು=ಸೀಳು. | ೩– ೧೩ | ಡಿಂಡೀರ=ನೊರೆ. | ೨– ೮೨ |

## ತ

| | | | |
|---|---|---|---|
| ತನಿ=ಹೆಚ್ಚಾದ | ೨– ೧೪ | ತಿದುಪು=ತಿರುಗುವಿಕೆ | ೧–೩೯೫ |
| ತರ=ಕ್ರಮ | ೧– ೮ | ತುದುಗಿ=ತುಂಬಿಕೊಂಡು. | ೫– ೧೦ |

| ಶಬ್ದಾರ್ಥ | ಸಂಧಿ–ಪದ್ಯ | ಶಬ್ದಾರ್ಥ | ಸಂಧಿ–ಪದ್ಯ |
|---|---|---|---|
| ತಮಾಲ-ಹೊಂಗೆಮರ. | ೧– ೭೬ | ತುಂಗ=ಎತ್ತರವಾದ | ೨– ೨೩ |
| ತಟಿನೀ=ನದೀತೀರ. | ೧–೨೦೫ | ತುಳಿಲಾಂತು=ದಾಸ್ಯಭಾವದಿಂ. | ೪– ೧೦ |
| ತರಿಸಂದು=ಸಂದಣಿಗೊಂಡು. | ೫– ೧೦ | ತುರುಗಿ=ತುಂಬಿ | ೫– ೧೦ |
| ತಾರಣ=ದಾಟುವಿಕೆ. | ೧–೩೬೫ | ತೋಮರ=ಬಾಣ. | ೩– ೯ |

## ದ

| | | | |
|---|---|---|---|
| ದರ್ವಿ=ಹಾವಿನ ಹೆಡೆ | ೧–೧೦೫ | ಧಾತ್ರ=ಧಾತೃ. | ೧– ೪ |
| ದಡಿ=ತಡಿ. | ೧– ೨೫ | ದಾರು=ಮರ | ೨– ೩೧ |
| ದಾವ ಅಗ್ನಿ. | ೩– ೧೯ | ದ್ವಿಪ=ಆನೆ. | ೩ ೧೨೭ |
| ದಂಡಿ=ಸಾಮರ್ಥ್ಯ | ೪– ೮೦ | ದಂತಿ=ಆನೆ. | |

## ಧ

| | | | |
|---|---|---|---|
| ಧಾವಲ್ಯ ಬಿಳುಪು, ಪ್ರಕಾಶ | ೧– ೪ | ಧಾಮ ಜ್ಯೋತಿ, ಕಿರಣ, ಮನೆ | |

## ನ

| | | | |
|---|---|---|---|
| ನಕ್ರ- ಮೊಸಳೆ. | ೨– ೩೧ | ನಿಡಿ=ಬುರುಗು. | ೫– ೬೧ |
| ನನ್ನಿ–ಸತ್ಯ. | ೩ -೧೧೩ | ನುಣ್ಣಟಿಕೆ=ನಯವಾದ ಹಾಸ್ಯದ ಮಾತು. | ೩– ೨೭ |
| ನಾಗಾರಿ=ಒಬ್ಬ ರಾಜ | ೨ -೨೩೨ | | |
| ನಿಬ್ಬರ=ಪೂರ್ಣಭಾರ | ೧ - ೭ | ನೇವುರ=ಕಾಲ್ಕಡಗ | ೨– ೨೦ |

## ಪ

| | | | |
|---|---|---|---|
| ಪನ್ನಗ=ಹಾವು | ೧– ೪ | ಪಣ್ಯವೀಥಿ=ಅಂಗಡಿಬೀದಿ | ೨– ೯೩ |
| ಪಲ್ಲವ=ಚಿಗುರು | ೧ - ೭೨ | ಪಾಳಿಯಿಂ=ಕ್ರಮದಿಂ | ೧–೨೨೩ |
| ಪರಮೆ=ತುಂಬಿ | ೧– ೭೭ | ಪಾಪೌಘ=ಪಾಪರಾಶಿ. | ೪ - ೧೧ |
| ಪನ್ನತಿ–ಪರಾಕ್ರಮ. | ೧–೧೨೦ | ಪಾದಾಸ್ತ್ರ=ಕೋಳಿ | ೧– ೫೫ |
| ಪತ್ತಿತ ಆನೆ. | ೧ –೧೨೪ | ಪಾಶಿಯ=ವರುಣ. | ೫– ೨೮ |
| ಪಳಿ ಪ್ರತಿ. | ೧ -೨೬೪ | ಪೀಯೂಷ=ಅಮೃತ. (ಹಾಲು) | ೪– ೮೮ |
| ಪತ್ರ=ರೆಕ್ಕೆ | ೫– ೭೭ | ಪುಳಕಿಪ=ರೋಮಾಂಚನಗೊಂಡ | ೧–೧೧೬ |
| ಪರತ್ರಯ=ಸ್ವರ್ಗಲೋಕ | ೫– ೭೭ | ಪುಂಡರೀಕ=ಕಮಲ | ೪– ೮೦ |
| ಪರಕೆ ಪ್ರಾರ್ಥನೆ. | ೧ ೨೯೭ | ಪೋಳ್ಪ=ಸೀಳುವ | ೩ - ೨೧ |
| ಪಟ್ಟಿಸ–ಒಂದು ಬಗೆಯ ಕೊಡಲಿ. | ೧–೨೯೭ / ೩– ೯ | ಪೌರಂದರ=ಇಂದ್ರ | ೩–೧೬೬ |
| | | ಪೌರವ=ಕ್ಷತ್ರಿಯ. | |

| ಶಬ್ದಾರ್ಥ | ಸಂಧಿ-ಪದ್ಯ | ಶಬ್ದಾರ್ಥ | ಸಂಧಿ-ಪದ್ಯ |
|---|---|---|---|
| | | **ಫ** | |
| ಲ್ಲಾಸ್ತ್ರ=ಹೂವಿನ ಬಾಣ. | ೨-೪೨ | ಫೇನ=ನೊರೆ. | ೧-೨೬ |
| | | **ಬ** | |
| ರ್ಸ=ಪ್ರೌಢತೆ | ೨-೨೮ | ಬಿಬ್ರ-ನೀರು. | ೧-೩ |
| ಡಬ=ಬ್ರಾಹ್ಮಣ. | ೫-೧೧೬ | ಬುಗುಟಿ=ಗಂಟು. | ೩-೯೬ |
| ವಸ್ನ=ಗಂಧ. | ೧-೮೧ | ಬೇತಾಳ=ದೊಡ್ಡ ಭೂತ | ೩-೧೧ |
| | | **ಭ** | |
| ತ್=ಕಾಪಾಡುವ. | ೧-೪೧ | ಭಂಜನ=ನಾಶಮಾಡುವಿಕೆ | ೪-೧ |
| | | **ಮ** | |
| ಲಯಜ=ಶ್ರೀಗಂಧ | ೪-೯೦ | ಮಾಸಾಳು=ವೀರ | ೨-೨೨೪ |
| ಂಜೀರ=ಪಾದದ ಆಭರಣ | ೨-೧೯ | ಮುಕ್ತಾ=ಮುತ್ತು | ೨-೨೦೧ |
| ಾ=ಲಕ್ಷ್ಮಿ. | ೧-೧೦೧ | ಮುದ್ಗರ=ಗದೆ. | ೩-೯ |
| ಾರಣ=ಕೊಲ್ಲುವ | ೧-೩೬೫ | ಮುಂಡನ=ಕ್ಷೌರ | ೪-೨೧ |
| | | **ಯ** | |
| ೂಥ ಸಮೂಹ | ೧-೨೮೪ | ಯೂಥಿಕೆ=ಮಲ್ಲಿಗೆ, ಸಂಪಿಗೆ | ೪-೮೫ |
| | | **ರ** | |
| ಡಿ-ಕೆಸರು, ರೊಜ್ಜು. | ೧-೨೬ | ರೌಪ್ಯ=ಬೆಳ್ಳಿ. | ೨-೨೧೯ |
| | | **ಲ** | |
| ಘು=ಶೀಘ್ರ. | ೩-೧೦ | ಲವಿತ್ರ=ಕತ್ತರಿಸುವಾಯುಧ | ೪-೧೧ |
| ೃಪ=ಮುದ್ದಿಸುವ. | ೧-೧೯ | ಲಾವಣಿ=ಸಮೂಹ | ೩-೧೩ |
| ಣಿ=ಕಾಂತಿ | ೧-೩೯೪ | ಲೌಲ್ಯ=ಲೋಲ | ೪-೧೧ |
| | | **ವ** | |
| ಡಗಳ್=ಭಾರವಾದುವು | ೧-೩೯೪ | ವೇತಂಡ=ಆನೆ | ೩-೯೯ |
| ರಿ=ಮಂಜರಿ, ಮೊಗ್ಗೆ. | ೧-೭೨ | ವೇತ್ರ=ಬೆತ್ತ. | ೧-೧೬೨ |
| ರ್ಕಕಫಲ-ಬದನೆಕಾಯಿ | ೨-೧೬೫ | ವೇಷ್ಟಾ-ಮುಚ್ಚಿದ | ೧-೪೧ |

| ಶಬ್ದಾರ್ಥ | ಸಂಧಿ–ಪದ್ಯ | ಶಬ್ದಾರ್ಥ | ಸಂಧಿ–ಪದ್ಯ |
|---|---|---|---|
| ವಾಳ=ಬಾಲ. | ೫– ೫೫ | ವೃಕ=ತೋಳ, ನರಿ. | ೩– ೧೭ |
| ವಿತ್ತು=ಜ್ಞಾನ | ೧– ೯೩ | ವತ್ಸ=ಕರು, ಕುರುಪು, ಮರಣ | |
| ವಿಧು=ಚಂದ್ರ. | ೧–೨೨೫ | ವಿಹಗ=(ವಿಹಂಗ) ಪಕ್ಷಿ. | ೩ ೧೭ |

## ಶ

| | | | |
|---|---|---|---|
| ಶುಂಡಾಲ ಆನೆ | ೧–೩೩೯ | ಶೈಶವ=ಶಿಶುತನ | ೧–೨೪೫ |
| ಶಂಬರಕೇಳಿ=ಸೀರಾಟ. | ೨– ೩೬ | ಶಿಖಿ=ನವಿಲು. | ೧ ೫೫ |

## ಸ

| | | | |
|---|---|---|---|
| ಸಗ್ಗಿಗರ್–ದೇವತೆಗಳು | ೧– ೭೦ | ಸೂರಿ=ವಿದ್ವಾಂಸ, ಪಂಡಿತ. | ೩–೧೦೩ |
| ಸಮವರ್ತಿ–ಯಮ. | ೩–೧೦೫ | ಸೂಳೈಪ=ಶಬ್ದಮಾಡುವ | ೨ ೭ |
| ಸಪರಿಯರು–ಚೆಲುವರು | ೪ ೧೯ | ಸ್ತೋಪ ಬಮರು | ೨ ೮೦ |
| ಸಾರಸ=ತಾವರೆ. | ೧– ೯ | ಸೈದ=ಕಪಟವಿಲ್ಲದ | ೧ ೨೦೬ |
| ಸಿತ=ಬಿಳುಪು | ೧ ೨೮ | ಸೈರಿಭ–ಕಾಡುಕೋಣ | ೩ ೨೧ |
| ಸೀಗುರಿ–ಚಾಮರ. | ೨ ೬೧ | ಸೊರಹು–ಗಳಹು | ೫ ೭೦ |
| ಸುಶಿಲ್–ಸುವತ | ೨ ೧೦೪ | ಸೌರಭ–ಸುವಾಸನೆ | ೧ ೭೧ |
| ಸುಟಿ–ಚುರುಕು | ೩– ೧೦ | ಸೌರಂಭ–ಸಂಭ್ರಮ | ೧ ೭೭ |
| ಸುಗಿದು=ಹೆದರಿ | ೩ ೧೮೭ | ಸೌಷ್ಟದ=ಸೊಗಸು | ೧ ೨೨೭ |
| ಸೂನಗಿ ಒಂದು ಜಾತಿ ಶೂಲ | ೩ ೯ | ಸೌರಿ=ಸೂರ್ಯನ ಮಗ [illegible] | |

## ಹ

| | | | |
|---|---|---|---|
| ಹಮಳ–ಕ್ಷೇಮ | ೩–೧೬೩ | ಹಲಿ–ಬಲರಾಮ | ೪ [illegible] |
| ಹರಿ=ವಿಷ್ಣು, ಬ್ರಮ್ಹ, ಯಮ, ಪ್ರವಹಿಸು, ಸರ್ಪ | ೪ ೧ | ಹಲ–ಹಲವು, ಬಹಳ | |
| | | ಹಲಹು ಸಲಹು | |
| ಹರಿಗೆ=ಗುರಾಣಿ | ೩– ೬ | ಹಳವಿಗೆ=ಪತಾಕೆ | ೫ –೩ |
| ಹರಿಯೆರೆ=ಖಾಂಡವ ವನ. | ೩–೧೭೦ | ಹಿಮಕೃದ್ಧರ–ಶಿವ | ೪ ೯೮ |
| ಹರಿದಶ್ವ ಸೂರ್ಯ | ೪ ೭ | ಹೆಕ್ಕಳ=ಅತಿಶಯ | ೧ ೧೩೪ |
| ಹರಿಸ=ಹರ್ಷ, ಸಂತೋಷ | | ಹೆಟ್ಟಿಗೆ=ಹೆಂಗಸು | ೧ ೨೪೦ |
| ಹಲಗೆ=ಗುರಾಣಿ, ಡಾಲು. | | ಹತ್ತೆ=ಸಮೀಪ, ಹತ್ತಿರ | |

# ಶುದ್ಧಾಶುದ್ಧ ಪತ್ರಿಕೆ

| ಅಶುದ್ಧ | ಶುದ್ಧ | ಪುಟ | ಪಙ್ತಿ |
|---|---|---|---|
| ದೂತ್ಯ | ದ್ಯೂತ | ೨೮ | ೧೦ |
| ಗಾಂಗೆಯ | ಗಾಂಗೇಯ | ೪೧ | ೨೧ |
| ಹೊಡಯಲು | ಹೊಡೆಯಲು | ೭೩ | ೧೬ |
| ತಕ್ಕಯ್ಯ | ಕಕ್ಕಯ್ಯ | ೧೧೩ | ೧೮ |
| ಕೋಣ | ಕೋರಣ | ೧೦೫ | ೧೮ |
| ರಾಚೇಂದ್ರ | ರಾಜೇಂದ್ರ | ೧೨೮ | ೧೩ |
| ತಕ್ಕಡ | ಕಕ್ಕಡ | ೧೩೧ | ೧೬ |
| ಸಿಲಾಬ್ಜ | ಸೀಲಾಬ್ಜ | ೧೩೮ | ೧೧ |
| ಸಿಂದೊಡೀ | ನೆಂದೊಡೀ | ೧೫೫ | ೧೭ |
| ರೊೞದಿಕ | ರೊೞಧಿಕ | ೧೫೬ | ೧೬ |
| ರೇವಣ್ಣಾಸಿದ್ದ | ರೇವಣಸಿದ್ಧ | ೧೭೨ | ೧೭ |
| ಸಿಂದರೆ | ಸಿಂದಿರೆ | ೧೯೮ | ೮ |
| ನಿಬ್ಬರದಿ | ಬ್ಬರದಿ | ೧೯೯ | ೧೪ |
| ಹೊಯ್ದು | ಹೊಯ್ದು | ೨೧೫ | ೬ |
| ಸಿಲ್ಲಿ | ಸಿಲ್ಲ | ೨೧೫ | ೨೧ |
| ದರುಶವದ | ದರುಶನವದ | ೨೨೬ | ೧೯ |
| ದುರಿತ ವಿದೂರ | ದುರಿತವಿದೂರ | ೨೪೯ | ೧೯ |
| ಘಕ್ತಿ | ಭಕ್ತಿ | ೨೫೩ | ೧೦ |
| ಪೊಲ್ವ | ಪೋಲ್ವ | ೨೫೪ | ೧೮ |
| ತ \| ನ್ನಸು | ತ \| ನ್ನನು | ೨೬೩ | ೨೦ |
| ತಾಗಿದೆ | ತಾಗಿದ | ೨೬೮ | ೫ |
| ಸನ್ಮುರುಜಾಧಿ | ಸನ್ಮುರುಜಾದಿ | ೨೭೨ | ೨ |
| ಭುಜುಂಗ | ಭುಜಂಗ | ೨೭೬ | ೧೮ |
| ಮುಗುಳ್ದಿ | ಮುಗುಳ್ದಿ | ೨೮೯ | ೪ |
| ತಾಲಟಕೆ | ತಾಚಲಕೆ | ೩೪೫ | ೬ |
| ಫ \| ೞಟ್ಟ | ಘರಟ್ಟ | ೩೪೫ | ೮ |